ಓಂ ತತ್ಸತ್ ।

ಶ್ರೀ ಮನ್ನಿಜಗುಣ ಶಿವಯೋಗಿ ವಿರಚಿತ

# ಪರಮಾನುಭವಬೋಧೆ

ಮೂಲ ಸೂತ್ರ ಹಾಗೂ

ಪದ್ಯಗಳ ಸರಳಾನುವಾದ

ಶ್ರೀ ಗುರುಶಂಭುಲಿಂಗದ ಪಾದಪಂಕಜ ।
ವೀಗೆನ್ನಮತಿಗೆ ಮಂಗಳವನು ॥

ಲೇಖಕರು :

ಸ್ವಾಮಿ ಸಹಜಾನಂದ

ಮತ್ತು

ಗುರುಪಾದರಜ



ಪ್ರಕಾಶಕರು :

ಮೆ॥ ಪಿ. ಸಿ. ಶಾಬಾದಿಮಠ ಬುಕ್-ಡಿಪೋ

ಸ್ಟೇಶನ್ ರೋಡ್, ಗದಗ - 582 101

ಓಂ ತತ್ಸತ್ ।

ಶ್ರೀ ಮನ್ನಿಜಗುಣ ಶಿವಯೋಗಿ ವಿರಚಿತ

# ಪರಮಾನುಭವಬೋಧೆ

ಮೂಲ ಸೂತ್ರ ಹಾಗೂ
ಪದ್ಯಗಳ ಸರಳಾನುವಾದ

ಶ್ರೀ ಗುರುಶಂಭುಲಿಂಗದ ಪಾದಪಂಕಜ ।
ವೀಗೆನ್ನೆಮತಿಗೆ ಮಂಗಳವನು ॥

ಲೇಖಕರು :
ಸ್ವಾಮಿ ಸಹಜಾನಂದ
ಮತ್ತು
ಗುರುಪಾದರಜ



ಪ್ರಕಾಶಕರು :
ಮೆ॥ ಪಿ. ಸಿ. ಶಾಬಾದಿಮಠ ಬುಕ್-ಡಿಪೋ
ಸ್ಟೇಶನ್ ರೋಡ್, ಗದಗ - 582 101

# ಅರ್ಪಣೆ



ಶ್ರೀ ಸದ್ಗುರು ಪರಮಾನಂದಸ್ವಾಮಿಗಳು ಜಗದ್ಗುರು ಶ್ರೀ ಶಿವಾನಂದ ಸ್ವಾಮಿಗಳ ಮಾನಸ ಪುತ್ರರು. "ರವಿ ಸೋಮ ಶಿಖಿಗಳ ಕಿರಣಂಗಳೈದಿ ಸಂಹರಿಸದ ಅಜ್ಞಾನ ತಿಮಿರಮಂ" ತನ್ನ ಆತ್ಮಾನುಭವದ ನಸುನೋಟದಿಂದ ಕೆಡಿಸಿದ ಅದ್ವೈತಬೋಧ'ಭಾಸ್ಕರ, ಕುಲಜಾತಿಗಳ ಕರ್ಮಪಾಶ ಹರಿದ ಧೀರ, ಜೀವನ್ಮುಕ್ತನಾಗಿ ಬಾಳಿದ ಧೀಮಂತ, ನಿತ್ಯಾನಂದ ಬಯಸಿಬಂದ ಭಕ್ತರ ಭವಬಾಧೆ ಬಿಡಿಸಿದ ಕೃಪಾಸಾಗರ,

ನಿನ್ನವನು ನಾನೆಂದು ಗುರುವೇ ವಂದಿಸುವೆ...

ಓಂ ತತ್ಸತ್ ।

ಇತಿ

ಶಮ್ ।

# ಪ್ರಕಾಶಕರ ನುಡಿ

ಬಾಳಿನುದ್ದಕ್ಕೂ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರಗಳ ವಾಚನ, ಚಿಂತನ, ಬರಹಗಳಲ್ಲಿ ನಿಷ್ಠೆಯುಳ್ಳ ಸ್ವಾಮಿ ಸಹಜಾನಂದರು (ಊರ್ಫ ಆರ್. ಬಿ. ಕಂಠಿ) ನಮ್ಮ ಆಗ್ರಹದ ಬೇಡಿಕೆ ಮನ್ನಿಸಿ ಶ್ರೀ ನಿಜಗುಣ ಶಿವಯೋಗಿ ವಿರಚಿತ ''ಪರಮಾನುಭವ ಬೋಧೆ'' ಪದ್ಯದಲ್ಲಿರುವ ಮನನೀಯ ಗ್ರಂಥವನ್ನು ಬಾಲ ಮುಮುಕ್ಷುಗಳಿಗೆ ತಿಳಿಯುವಂತೆ ಸರಳಗನ್ನಡದಲ್ಲಿ ಅನುವಾದಿಸಿದ್ದಾರೆ, ಜ್ಞಾನಾರ್ಥಿಗಳು, ಆತ್ಮಬೋಧೆಯಿಂದ ಮೋಕ್ಷ ಪಡೆಯಲು ಉತ್ಸಾಹ ಭರಿತ ಮತ್ತು ಸತತ ಪ್ರಯತ್ನಶೀಲ ಸಾಧಕರು, ಆಧ್ಯಾತ್ಮಿಕ ಪ್ರತ್ಯಕ್ಷ ಜ್ಞಾನ ಕರುಣಿಸುವ ಈ ಗ್ರಂಥವನ್ನು ಓದಿ, ಓದಿದುದನ್ನು ಮನನ ಮಾಡಿ ಕೃತಾರ್ಥರಾಗಬೇಕೆಂದು ಕೋರುತ್ತೇವೆ.

ಸಹ ಅನುವಾದಕರಾದ 'ಗುರುಪಾದರಜ' (ಊರ್ಫ ಶ್ರೀ ವಾಯ್. ಎಮ್. ಗಾಣಿಗೇರ) ಇವರಾದರೂ ನಿಜಗುಣರ ಶಾಸ್ತ್ರ ಶ್ರವಣ, ಮನನ, ನಿದಿಧ್ಯಾಸನಗಳಲ್ಲಿ ಬಹುದಿನಗಳಿಂದ ಪಳಗಿದ್ದಾರೆ. ಇವರಿಗಾದರೂ ನಾವು ಉಪಕೃತರಾಗಿದ್ದೇವೆ. ಗುರುಸೇವಾನಿರತರಾದ ಇವರೀರ್ವರ ಶ್ರಮದ ಸಾರ್ಥಕತೆಯು ಪ್ರಿಯ ಓದುಗರನ್ನು ಅವಲಂಬಿಸಿದೆ.

ಪ್ರಕಾಶಕರು

# ಪರಿವಿಡಿ

| ಸೂತ್ರ ಅ.ನಂ. | ವಿಷಯ | ಪುಟಸಂಖ್ಯೆ |
|---|---|---|
| 9. | ಆತ್ಮನಿಗೆ ಬಂಧಾದಿ ನಿರಾಕರಣ | 117–119 |
| 10. | ಆತ್ಮನಿಗೆ ದೇಹಾದಿಗಳ ಅಧ್ಯಾಸ ನಿರೂಪಣೆ | 120–122 |
| 11. | ಆತ್ಮನಲ್ಲಿ ಜಗತ್ತಿನ ಅಭಾವ | 122–124 |
| 12. | ಆತ್ಮನಲ್ಲಿ ಜೀವತ್ವದ ಅಭಾವ | 125–128 |
| 13. | ಜಗತ್ತಿನ ಅನಿರ್ವಚನೀಯತ್ವ | 128–130 |
| 14. | ಸಂವಿದಾತ್ಮ ನಿರೂಪಣೆ | 130–135 |
| 15. | ಕುತರ್ಕ ನಿರಾಕರಣ | 135–137 |
| 16. | ಸತ್ಯಾನುಭವ ನಿರೂಪಣೆ | 137–140 |
| 17. | ಆತ್ಮನಿಗೆ ಪ್ರಮಾಣ ಅತೀತತ್ವ | 140–145 |
| | 4ನೇ ಸಂಧಿ : ನಿರ್ಗುಣ ಯೋಗ | |
| 1. | ಗುರುವಾಕ್ಯಕ್ಕೆ ಸರ್ವ ಸಾಧನತ್ವ | 146–149 |
| 2. | ಕಾಂಡತ್ರಯಾರ್ಥ | 149–152 |
| 3. | ಆತ್ಮನಲ್ಲಿ ದೋಷತ್ರಯ ನಿರಾಕರಣ | 152–154 |
| 4. | ಬೋಧಚತುಷ್ಟಯ | 154–156 |
| 5. | ವೈರಾಗ್ಯ ಪಂಚಕ | 156–159 |
| 6. | ಆತ್ಮನಿಗೆ ಸತ್‌ಆದಿ ತಟಸ್ಥ ಲಕ್ಷಣ | 160–162 |
| 7. | ಬ್ರಹ್ಮ ಸ್ವರೂಪ ಲಕ್ಷಣ | 162–164 |
| 8. | ಜೀವನ್ಮುಕ್ತಿ ನಿರೂಪಣೆ | 164–167 |
| 9. | ಯೋಗೀಶ್ವರನಿಗೆ ಪ್ರಾರಬ್ಧಭೋಗ ವ್ಯವಹಾರ ನಿರಾಕರಣ | 167–170 |
| 10. | ಯೋಗೀಶ್ವರನಿಗೆ ದೇಹಾದಿ ಲಯ ಪ್ರಕಾರ | 170–173 |
| 11. | ಪೃಥಕ್‌ಪ್ರಕೃತಿ ಲಯಪ್ರಕಾರ | 173–174 |
| 12. | ಯೋಗೀಶ್ವರನಿಗೆ ವಿಧಿ ನಿಷೇಧ ಅಭಾವ | 174–178 |
| 13. | ಯೋಗೀಶ್ವರನಿಗೆ ವಿಧಿ ನಿಯಮ ಅಭಾವ | 178–180 |
| 14. | ಕಾಂಡತ್ರಯಾರ್ಥ ವಿಶೇಷ ನಿರೂಪಣೆ | 180–182 |
| 15. | ಕಾಂಡತ್ರಯ ವಿಷಯ ವಿಭಾಗ | 183–185 |
| 16. | ಜ್ಞಾನೋತ್ಕರ್ಷ | 185–189 |
| 17. | ಯೋಗೀಶ್ವರನಿಗೆ ಕರ್ಮಾಧಿಕಾರ ನಿಷೇಧ | 189–190 |

# ಗ್ರಂಥದ ಸಾರಾಂಶ

**1ನೇ ಸಂಧಿ :- ಪ್ರವರ್ತಕ ಕರ್ಮ-**

ಗ್ರಂಥದ ವೈಶಿಷ್ಟ್ಯವೆಂದರೆ ವೇದಾಂತದಲ್ಲಿ ಮುಖ್ಯ ವಿಷಯಗಳಾದ ದೇವರು, ಗುರು, ಜೀವ (ತಾನು) ಅಥವಾ ಜಗತ್ತು ಇವನ್ನು ಕೈಯಲ್ಲಿಯ ನೆಲ್ಲಿಯಂತೆ, ಅಪರೋಕ್ಷವಾಗಿ ತಿಳಿಸುವದು. ಪೂರ್ವಜರ ಪ್ರಕರಣ ಗ್ರಂಥಗಳು ಈ ವಿಷಯ ಪರೋಕ್ಷವಾಗಿ ಹೇಳಿವೆ. ಉದಾ :- ಸೂತ್ರ 5,6 ನೋಡಿ. ಜೀವನೆಂದರೆ ಕಲ್ಪಿತ ಪುರುಷ, ಜಗತ್ತೆಂದರೆ ಕಲ್ಪಿತನ ವಿಕಲ್ಪನೆಯಿಂದಾದುದು. (ಅವನ ಸಂಕಲ್ಪದ ಒಡಲು). ಜ್ಞಾನಾಜ್ಞಾನಗಳು, ವಿದ್ಯಾವಿದ್ಯೆಗಳು, ಬಂಧ ಮೋಕ್ಷಗಳು, ಮೂರವಸ್ಥೆಗಳು (ತ್ರಿಪುರ), ಮೂರು ತನುಗಳು, ಕಲ್ಪಿತನ ಮೂರು ಸ್ಥಿತಿ ಅಂದರೆ (ಮರೆದೊಡೆ ಜೀವಾತ್ಮ) ಅರಿದೊಡೆ ಪರಮಾತ್ಮ ಮತ್ತು ಅರಿವು ಮರೆವು ಎರಡೂ ಕೂಡಲು ಅಂತರಾತ್ಮ ' ಇದು ತನ್ನಲ್ಲಿ ಉದಿಸಿ ತನ್ನಲ್ಲೆ ಲಯಿಸುವ 'ಬೋಧಾದ್ಯುತಿ'. ಇದೂ ನಿಜಾತ್ಮನಲ್ಲ. ಕಲ್ಪಿತ ಪುರುಷನಲ್ಲಿ ದಶಭಾವಗಳನ್ನು ಅಧ್ಯಾರೋಪ ಮಾಡಿ (1ನೇ ಅಧ್ಯಾಯ) ಮುಂದೆ (2ನೇ ಅಧ್ಯಾಯ ನಿವರ್ತಕ ಕರ್ಮ) ಅಪವಾದ ಮಾಡಿದ್ದಾರೆ, ನಿಜಗುಣರ ಮಾತಿನಲ್ಲಿ ಹೇಳಬಯಸುವ-''ಸ್ವಗತಾದಿಭೇದವಿಲ್ಲದ ಪರಬ್ರಹ್ಮದೊಳೊಗೆದು ಇಂತು ತೋರ್ಪನೀನಾನೆಂಬ ಬಗೆಯನೆ (ನೀನೀಶ, ನಾನು ಜೀವ, ಎಂಬ ಭಾವ ಭೇಧ) ತೋರಿ ತೊಡೆಯೆ ಕಲ್ಪಿತನನಿಲ್ಲಿ ನಗಳಿ ಪೇಳಿದನ್ಯಸೆ ಪೆರತುಂಟೆ ॥ (1-5 ಸೂತ್ರ, 7 ಪದ) ಇದು ನಿಜಗುಣರ ಸ್ವಂತ ಪ್ರಕ್ರಿಯೆ, ಆತ್ಮಕೋವಿದರು ಮೆಚ್ಚಿ ತಲೆದೂಗುವ, ಗೌಷ್ಯತರವಾದ ಹೊಸ ಪ್ರತಿಪಾದನೆ. ಇದನ್ನು ಮೊದಲಿಗೆ ವೇದಾಂತ, ಸಿದ್ಧಾಂತಗಳಲ್ಲಿ, ಶ್ರುತಿ ಉಪನಿಷತ್ತುಗಳಲ್ಲಿ ಪುರಾಣಗಳಲ್ಲಿ ಹೇಳಿರುವದು. ಆ ಬಳಿಕ ಮುಮುಕ್ಷುಗಳು ಹೆಚ್ಚು ಒತ್ತು ಕೊಟ್ಟು ಓದುವ ಸೂತ್ರಗಳೆಂದರೆ 7 (ಅವಿದ್ಯಾಪಂಚಕ) 15 (ಪ್ರವರ್ತಕ ಕರ್ಮದಿಂದ ಬಂಧನ) 16 (ನಿವರ್ತಕ ಕರ್ಮದಿಂದ ಮುಕುತಿ) ಬಳಿಕ ಸೂತ್ರ 20 (ಜೀವಂಗೆ ಅವಿದ್ಯೆ, ಅಸ್ಮಿತೆ ಮುಂತಾದ ಪಂಚಕ್ಲೇಶಗಳು).

ಈ ಅಧ್ಯಾಯದಲ್ಲಿ ನೆನಪಿಡುವ ಸಂಗತಿಗಳು :- (1) ಆತ್ಮನು (ಅಂದರೆ ನೀನು) ನಿತ್ಯ ಮುಕ್ತನು. ನಿನ್ನಲ್ಲಿ ಆಕಸ್ಮಿಕವಾಗಿ, ಯಾವ ನಿಮಿತ್ತವಿಲ್ಲದೆ ಕಲ್ಪಿತ ಪುರುಷನು ಮತ್ತು ಅವನ ವಂಶಾವಳಿ, ಅಂದರೆ ಜೀವರು, ಜಗತ್ತು, ಈಶ ಹಾಗೂ ಅವನ ಮಾಯೆ ಎಂಬ ಉಪಾಧಿ ಇವು ದಿನಾಲು ಜಾಗ್ರ, ಸ್ವಪ್ನ ಎರಡವಸ್ಥೆಗಳಲ್ಲಿ ತೋರಿ, ಸುಷುಪ್ತಿ (ಗಾಢನಿದ್ರೆ) ಯಲ್ಲಿ ಅಡಗುವವು. (2) ಮಾಯೆ, ಮನದ ಸಂಕಲ್ಪ- ವಿಕಲ್ಪಗಳು ಅಥವಾ ಭಾವ, ಬಗೆಗಳು, ಭ್ರಾಂತಿ, ಅಧ್ಯಾಸ, ಪುಸಿದೋರಿಕೆ (ಮಿಥ್ಯೆ) ಸ್ವಪ್ನ ಮೃಗಜಲ ಶರೀರಸ್ವಪ್ನಿಷ್ಟಿ ಅವಿದ್ಯೆ ಇವು ಸಮಾನ ಅರ್ಥ ಸೂಚಕ ಪದಗಳು. (3) "ತನು ರುಜೆಯ ಆಗರ. ತನುಭಾವ (ಜ್ಞಾನದಿಂದ, ಕರ್ಮದಿಂದಲ್ಲ) ಅಳಿಯೆ ದುಃಖದ ಕೇಡು")

**2ನೇ ಸಂಧಿ :- ನಿವರ್ತಕ ಕರ್ಮ-**

ಜಡವಾದ (ಅಂದರೆ ಅರಿಸಿಕೊಳ್ಳುವ) ಪಂಚಮಹಾಭೂತಗಳು, ಅವುಗಳಿಂದ ಜನಿಸಿದ ದೇಹ, ಪ್ರಾಣಗಳು, ಜ್ಞಾನೇಂದ್ರಿಯ, ಕರ್ಮೇಂದ್ರಿಯ ಮತ್ತು ಮನಾದಿ ಅಂತಃಕರಣಗಳು ಆತ್ಮವಲ್ಲ (ಅಂದರೆ ನೀನಲ್ಲ) ಮತ್ತು ಅವುಗಳ ಧರ್ಮ ಕರ್ಮಗಳು ನೀನಲ್ಲ, ಈ ಜಡದೃಶ್ಯಗಳನ್ನು ಎದಿರಿಟ್ಟು ಅರಿವ (ಅಜಡ) ಚೈತನ್ಯವೆ ನೀನಿರುವಿ. ಮಡದಿ ಮೈತ್ರೇಯಿ, 'ನಾನು ಯಾವಾಗಲೂ ದೃಶ್ಯವಿಲಕ್ಷಣನು' ಎಂಬ ಸತ್ಯವನ್ನು ನೀನು ಪದೇ ಪದೇ ಅನುಸಂಧಾನ ಮಾಡು. ಕರಣರಹಿತ ಸುಖಾತ್ಮ ನೀನಿರುವಿ. ಆದ್ದರಿಂದ ತನು, ಇಂದ್ರಿಯ, ಮನಾದಿ ಕರಣಗಳಲ್ಲಿ ತೋರುವ, (ಸುಷ್ತಿಯಲ್ಲಿ) ಅಡಗುವ ಸುಖ-ದುಃಖ, ಜನನ-ಮರಣ, ಹಸಿವು, ತೃಷೆ, ಶೋಕ ಮೋಹಾದಿ ಷಡೂರ್ಮಿಗಳು ಬಚ್ಚಬರಿ ಅರಿವಾದ ನಿನಗೆ ಇಲ್ಲ, ಎಂದು ನಿರ್ಧರಿಸು.

ಜಡವಾದ ಕರ್ಮ ಮತ್ತು ಕರ್ಮ ಫಲವಾದ ಸುಖದುಃಖಾದಿಗಳನ್ನು ಎದಿರಿಟ್ಟು ಅರಿಯುವ

ಚಿದಾನಂದನು ತಾನಿದ್ದರೂ, ತನ್ನ ನಿಜವನ್ನು ತನ್ನೊಳು ಮರೆತು, (ಮುಂದೆ ಹೇಳುವ) ಎಂಟು ಪ್ರಕಾರದ ಕರ್ಮಗಳಲ್ಲಿ ಚೇಷ್ಟಿಸುತ್ತ ಬದ್ಧನಾಗುವನು: 'ತನ್ನಿಂದ ಅಹಂಭ್ರಮೆ, ಅಜ್ಞಭ್ರಮೆಗಳನ್ನು ಅರಿವು ಮರವೆಗಳಲ್ಲಿ ತಾನೆ ಕಲ್ಪಿಸುವನು, ತನ್ನಿಂದ ಅಂತಃಕರಣ ಮತ್ತು ನೇತ್ರಾದಿ ಇಂದ್ರಿಯಗಳ ಭ್ರಮೆ (ಕ್ರಮವಾಗಿ) ಸ್ಮರಣ ಮಾಡುವಲ್ಲಿ ಹಾಗು ನೋಡುವಲ್ಲಿ ಹಮ್ಮಿನಿಂದ ಚೇಷ್ಟಿಸುತ್ತ ಬದ್ಧನಾಗುವನು. ಮತ್ತೆ ತನ್ನಿಂದ ದೇಹ ಭ್ರಮೆ ಮತ್ತು ಜಾಗರಣಾದಿ ಮೂರವಸ್ಥೆ ಭ್ರಮೆ. ಇಂತು ಜೀವನು ತಾನೆ ತನ್ನಲ್ಲಿ ಈ ಎಂಟು ಪ್ರವರ್ತಕ ಕರ್ಮಗಳ ಅಭಿಮಾನದಿಂದ ಭವಬಂಧನದಲ್ಲಿ ತೊಳಲುವನು. ಹಮ್ಮಿನ ಈ ಕ್ರಿಯೆಗಳನ್ನು ನಿವಾರಿಸಿ ನಿಲ್ಲುವದೆ ನಿವರ್ತಕ ಕರ್ಮ. ಇದರಿಂದ ತಾನು ತನ್ನೊಳು ನಿಜ ಮುಕ್ತಿ ಪಡೆಯುವನು.

ಈ ಸಂಧಿಯ 15 ನೇ ಸೂತ್ರದಲ್ಲಿ ನಿಜಗುಣರು ಅದ್ವೈತ ಆತ್ಮನ ಅಕಲಂಕ ತತ್ತ್ವವನ್ನು ನಿರೂಪಿಸಿದ್ದಾರೆ. ತಾನು ಉಳ್ಳೊಡೆ ಜಗವುಂಟು. ನಿಜವಾಗಿ ತಾನಾರು, ಎಂಬುದನ್ನು ವಿವೇಕಿಸಿ ನೋಡಲು ತನ್ನಲ್ಲಿ ತಾನು-ತನ್ನದು ಎಂಬ ಅಹಂಕಾರ-ಮಮಕಾರಗಳು ಕಿಂಚಿನ್ಮಾತ್ರ ಇಲ್ಲವೆಯಿಲ್ಲ, ನಾನು ಎಂಬ ದೃಷ್ಟನು ಅಜಡದೃಶ್ಯನಾಗಿ ಮತ್ತು ನನ್ನದೆಂಬ ದೃಶ್ಯ ವಿಷಯ ಮತ್ತು ಜಗತ್ತು ಜಡ ದೃಶ್ಯವಾಗಿವೆ. ಈ ಉಭಯವು ನಿಜವಾದ ತನ್ನಿಂದ ಅರಿಸಿಕೊಳ್ಳುವದರಿಂದ (ತನಗೆ ವೇದ್ಯತೆಯಿಂದ) ಪುಸಿದೋರಿಕೆ (ಮಿಥ್ಯೆ). ಆದ್ದರಿಂದ ತಾನಲ್ಲದುದು ತಾನೆ ಅದ್ವಯ, ಅಖಂಡ ಪರತತ್ತ್ವ ಏನೊಂದು ತೋರದ ಪೂರ್ಣವಾದ ಅರಿವು ಒಂದೇ ಪರಮಾರ್ಥ. ನೀನೆ ಅಕಲಂಕಾದ್ವಯ ಬೋಧರೂಪ ಇರುವಿ ಎಂದು ನಂಬು.

3ನೇ ಸಂಧಿ :- ಭ್ರಾಂತಿ ನಿರಾಕರಣ-

ಭ್ರಾಂತಿಗೆ ಲಕ್ಷಣವಿಲ್ಲ, ಯಾಕೆಂದರೆ ಅದು ಇಲ್ಲದ ತೋರಿಕೆ (ಇದ್ದ ವಸ್ತುವಿಗೆ ಲಕ್ಷಣ ಹೇಳುವರು). ಆದರೂ ಬೋಧೆ ಮಾಡಲು ಇಂತು ಲಕ್ಷಣ ಹೇಳಿದ್ದಾರೆ ನಿಜಗುಣರು, 'ತನುವನೆ ತಾನು, ತನ್ನದು, (ಮತ್ತು) ಜಗವಿದು ನಿಜವೆಂಬ ಭೇದ-ಭಾವನೆ ಆಳವಟ್ಟು ವಿವೇಕವಿಲ್ಲದ (ಮಾನವ) ಬುದ್ಧಿಯದು ತಾನೆ ಭ್ರಮೆಯಕ್ಕು". ವಿಕಾರ ರಹಿತನು, ಗುಣರಹಿತನು ಆಗಿರುವ ಆತ್ಮನಿಗೆ (ತನಗೆ) 'ಸಗುಣತನು ತಾನೆಂಬ, ಸವಿಕಾರಿಯೆನಿಪ (ಜನನ-ಮರಣ ವಿಕಾರವುಳ್ಳ) ಒಡಲು ತಾನೆಂಬ ಭಾವನೆಯೇ ಭ್ರಮೆಯು'. ಇದು ತನ್ನ ತಾನರಿಯದ ಅವಿವೇಕಿಯ ಕನಸಿನ ಮಾತು. 3ನೇ ಸೂತ್ರದಲ್ಲಿ ''ತನು ತಾನಲ್ಲ, ತಾನು ದೇಹ ವಿಲಕ್ಷಣನು'' ಎಂಬ ಸಿದ್ಧಾಂತವನ್ನು ತರ್ಕಬದ್ಧವಾಗಿ, ಅನುಮಾನ-ಅನುಭಾವ ಪ್ರಮಾಣಯುಕ್ತವಾಗಿ ನಿರೂಪಿಸಿದ್ದಾರೆ. ''ತನು ತೋರುವದರಿಂದ ತನುವಿದು ನೀನೆಂಬೆ. (ಒಂದು ವೇಳೆ, ಉದಾ :- ನಿದ್ರೆಯಲ್ಲಿ) ತನು ತೋರದಿದ್ದಾಗ 'ತನುವಿದು ನಾನು' ಎಂದು ಹೇಗೆ ಹೇಳಬಲ್ಲೆ? (ಹೇಳಲಾರಿ). ಘಟಪಟಾದಿಗಳಂತೆ ದೇಹವಿದು ನಿನಗೆ ತೋರುವದರಿಂದ 'ದೇಹ ನೀನಲ್ಲ-ನಿನ್ನದಲ್ಲ'. ಇದು ಪರರದೇಹದಂತೆ ಇರುವದೆಂದು ತಿಳಿ. ಕೊಡವನ್ನು ಕಾಣುವವ ಕೊಡ ಹೇಗೆ ಅಲ್ಲವೋ, ಅದರಂತೆ ದೇಹವನ್ನು ಎದಿರಿಟ್ಟು ನೋಡುವವ ದೇಹವಲ್ಲ, ದೇಹ ನೀನೆಂಬ ನುಡಿ ಕಪಟ (ಮೋಸ)ವಿದೆ. (ಇದು ಯುಕ್ತಿ). ಆದ್ದರಿಂದ ದೇಹ ತಾನಲ್ಲ ಯಾಕೆಂದರೆ ಅದು ಭೇಧ-ಭೀತಿ ಹುಟ್ಟಿಸುವ ಜನಕನಂತಿದೆ. ಪರರ ದೇಹಕ್ಕೆ ಹೆದರುವಂತೆ ತನ್ನ ದೇಹಕ್ಕೆ (ಅದರ ವಿಕಾರಗಳಿಗೆ) ತಾನೆ ಹೆದರುವನು. (ಅನುಮಾನ ಪ್ರಮಾಣ). 'ಮಲಮೂತ್ರ, ರೇತಸ್ಸುರುಧಿರ (ರಕ್ತ) ಮಾಂಸ ಮಜ್ಜ ಚರ್ಮ ಮಯವಾದ ತನುವೆತ್ತ ? ಎಂದೆಂದು ಪರಿಶುದ್ಧ ಭೋಧಾತ್ಮ ಆನಂದ ಶರಧಿ ತಾನೆತ್ತ ? (ಇದನ್ನು ತಾನೆ ತನ್ನೊಳು ಅನುಭವಿಸಿ ನಿರ್ಧರಿಸಬೇಕು.) ಆದ್ದರಿಂದ ಬೆಳಕು ಕತ್ತಲೆಯಂತೆ ಆತ್ಮನಿಗೆ (ತನಗೆ) ಮತ್ತು ದೇಹಕ್ಕೆ ಎಂದೆಂದು ಸಂಗತಿ (ಸಮರಸ) ಇಲ್ಲ, ಇಲ್ಲದ್ದು ಇದೆ ಎಂಬುದೆ ಭ್ರಾಂತಿ.

" ನಿನ್ನ ಚಿದ್‌ಭ್ರಮೆ ನಿನ್ನ ಮರವೆಗರಿವಿಗೆ ಬೀಜಂ-
ನೀನೆ ಪರಮಾತ್ಮನದರಿಂದೆ" ॥ ಸೂತ್ರ-14.

ವಿವೇಕವಿಲ್ಲದ ಬುದ್ಧಿಯಲ್ಲಿ ಅರಿವು-ಮರವೆಗಳು ತೋರುವವು. ಈ ಭ್ರಮೆಯು ನಿರ್ವಿಷಯಿ,

ನಿರಹಂಕಾರನು, ಪರಾತ್ಪರ ಸಂವಿದಾತ್ಮನು ಆದ ನಿನ್ನಲ್ಲಿ ಮಿಥ್ಯೆ (ಪುಸಿದೋರಿಕೆ)ಯೆಂದು ನಿಶ್ಚಯಿಸು. ಬಳಿಕ ಜಗವಿದು ಅನಿರ್ವಚನೀಯವೆಂದು, ಹಗ್ಗದಲ್ಲಿ ಹಾವಿನಂತೆ ಮಿಥ್ಯೆಯೆಂದು ಹೇಳಿ, ಆತ್ಮ(ತಾನು) ಷಟ್ (6) ಪ್ರಮಾಣಗಳಿಗೆ ಅತೀತನು, ಎಂದು ನಿರೂಪಿಸಿದ್ದಾರೆ. (ಸೂತ್ರ 17).

**4ನೇ ಸಂಧಿ :- ನಿರ್ಗುಣಯೋಗ-**

ಗುರುವಚನವೆ ಶ್ರುತಿ, ಸ್ಮೃತಿ, ಶ್ರೀಗುರು ವಚನ ಸುಧೆಗೆ ಸರ್ವ ಸಾಧನತ್ವ ಎಂದು ಈ ಸಂಧಿ ಆರಂಭವಾಗುವದು. ಗುರುವಾಕ್ಯವೆ ಶ್ರವಣ, ಮನನ, ನಿದಿಧ್ಯಾಸನ, ಇವೇ ಅನುಕ್ರಮವಾಗಿ ಶಾಬ್ದಿ ಅನುಮಾನ, ಅನುಭೂತಿ ಎಂಬ ಪ್ರಮಾಣವೆನಿಸುವವು. ಶ್ರೀಗುರು ವಚನದಿಂದ ಕರ್ಮ, ಉಪಾಸನ ಮತ್ತು ಜ್ಞಾನ ಕಾಂಡಗಳನ್ನು ತಿಳಿದು ಮುಕ್ತನಾಗುವ ಸುಲಭೋಪಾಯವನ್ನು ಮಾರ್ಮಿಕವಾಗಿ ನಿಜಗುಣರು ನಿರೂಪಿಸಿದ್ದಾರೆ. ಆದರೆ ಆತ್ಮ ತತ್ತ್ವವನ್ನು ಗುರುವಿನಿಂದ ಶ್ರವಣಾದಿ ದೋಷತ್ರಯರಹಿತವಾಗಿ ನಾವು ತಿಳಿಯಬೇಕು. ಆ ಬಳಿಕ ಸಾಧಕನು ಸಕಲ ವಿಷಯವಿರಕ್ತನಾಗಿ ಶುದ್ಧವಿದ್ಯೆಯಿಂದ ಅಕಲಂಕವಾದ ತನ್ನ ಇರುವು, ಅರಿವು, ಆನಂದಪದವಾದ ನಿಜವನ್ನು ಅರಿಯಬೇಕು. ತನಗೆ ಸಹಜವಾಗಿರುವ ಸತ್, ಚಿತ್, ಆನಂದ, ನಿತ್ಯ ಪರಿಪೂರ್ಣ ಸ್ಥಿತಿಯನ್ನು ಅತದ್ ವ್ಯಾವೃತ್ತಿ, ತಟಸ್ಥ ಸ್ವರೂಪ ಲಕ್ಷಣಗಳಿಂದ ಅನುಭವಿಸಬೇಕು. ಈ ಸಂಧಿಯಲ್ಲಿ ಸೂತ್ರ 8, ಜೀವನ್ಮುಕ್ತಿ ನಿರೂಪಣೆ. ಈ ಬೋಧೆ ಅತ್ಯುತ್ತಮವಾಗಿದೆ. ವರಜಾಗ್ರಾದಿ ಅವಸ್ಥೆಗಳು ಅಂತರ್ಮುಖ ಸಾಧಕಗೆ ತುರ್ಯಾವಸ್ಥೆಯೆನಿಸುವವು. ಆತ್ಮನ (ತನ್ನ) ಇರುವು-ಅರಿವು ತುರ್ಯಾತೀತವಾಗಿದೆ. ಅದು ನಿತ್ಯ, ಪೂರ್ಣಾದ್ವಯ ನಿಜಾತ್ಮಪದ. ಅಲ್ಲಿ "ತಾನೆಂಬುದಿಲ್ಲ, ಅನ್ಯತೆಗಾಣಲಿಲ್ಲ, ಇನ್ನೇನೊಂದನುಸರಲಿಕ್ಕೆಡೆಯಿಲ್ಲ, ಮಾನಮೇಯಾದಿ (ತ್ರಿಪುಟಿ)ಗಳಿಲ್ಲ, ಅಂತು, ಇಂತು, ಎಂಬುದೇನೇನುವಿಲ್ಲ, ಎಂದೆಂದು ಪರಿಪೂರ್ಣ॥ ಕಡೆಯಿಲ್ಲ-ಮೊದಲಿಲ್ಲ, ತಡೆಬಿಡುಗಡೆಯಿಲ್ಲ, ಪಡಿಯಿಲ್ಲ, ಪಟ್ಟಾಂತರವಿಲ್ಲ, ನುಡಿಯಿಲ್ಲ, ನೆನಹು ಇಲ್ಲ, ಅರುವಿನೆಚ್ಚರುದೋರಲಿಂಬಿಲ್ಲ..... ಎಂದೆಂದು ಪರಿಪೂರ್ಣ". (ಟಿಪ್ಪಣಿ- ಈ ಸೂತ್ರವನ್ನು ಗುರು ಮುಖದಿಂದ ಕೇಳಬೇಕು.) ಆ ಬಳಿಕ ಯೋಗೀಶ್ವರಂಗೆ ಪ್ರಾರಬ್ಧಭೋಗ ವ್ಯವಹಾರ ನಿರಾಕರಣ, ವಿಧಿ ನಿಷೇಧ ಅಭಾವ ನಿರೂಪಿಸಿ, ಮೂರೂ ಕಾಂಡಗಳ ವಿಶೇಷ ಅರ್ಥವನ್ನು ಸೂತ್ರ 14 ರಲ್ಲಿ ಹೀಗೆ ಹೇಳುವರು- " ತನ್ನ ಭಾವವೆ ಕರ್ಮ ದೈವ ಬೋಧಾದಿ ಬೀಜಂ ನಿಜವೆನೆ ಪರಮಾತ್ಮನು ತಾನೆ॥" ಈ ಸಂಧಿಯಲ್ಲಿ(ಉತ್ತಮ ಅಧಿಕಾರಿಗೆ ಹೇಳಬೇಕಾದ) ಜ್ಞಾನದ ಉತ್ಕರ್ಷ ಕೆಳಗಿನಂತೆ ನಿರೂಪಿಸುತ್ತಾರೆ-" ಅಬಲೆ (ಮೈತ್ರೇಯಿ) ಕರ್ಮದಿಂದ ಸಂಸಾರದುಃಖ ಪರಿಯದು. ತನ್ನ (ತಾ) ಅರಿದೊಡೆ ಮುಕ್ತಿ, ಮರೆಯೆ ಬಂಧ". (ಸೂತ್ರ 16) ನಿರ್ಗುಣಾಷ್ಟಾಂಗ ಯೋಗ ಹಾಗೂ ನಿಜಾನುಭವಯೋಗ ನಿರೂಪಣೆಯಿಂದ ಈ ಸಂಧಿ ಸಮಾಪ್ತಿಯಾಗುವದು.

ಸಾಧಕರಿಲ್ಲಿ ಗಮನಿಸಬೇಕಾದ ಸದ್ಗುರುವಿನ ಲಕ್ಷಣ, ಏನೆಂದರೆ, "ಪರಮನೆ ನೀನು, ನಿಷ್ಕ್ರಿಯನು, ನಿರ್ಮಲನೆಂದು ಒರೆವಾತನೆ ಸದ್ಗುರುವಕ್ಕು" ಮರಳಿ (ನೀನು) ಜೀವನು, ಕರ್ಮಿ, ಮಲಿನನೆ ನೀನೆಂಬ ಗುರು (ತಾನೆ) ತನಗೆ ಬಾಧಾಕರನ್ನೆಸೆ (13-2) ಪುಸಿ ನಿಯಮವನು ಬೋಧಿಸುವವನು ನಿಜ ಗುರುವಲ್ಲು. ಕರ್ಮ ಗುಣಯೋಗವ ಉಸುರುವವನು ಯಮಕಿಂಕರನು, ಎಂದು ತಿಳಿ.

**5ನೇ ಸಂಧಿ :- ಸಗುಣ ಯೋಗ-**

ಈ ಸಂಧಿಯಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಯೆಂಬ ಎಂಟು ಯೋಗಾಂಗಗಳನ್ನು ನಿರೂಪಿಸುತ್ತಾರೆ. ಯಮಾಂಗವು ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಕ್ಷಮೆ, ಧೃತಿ, ದಯೆ, ಆರ್ಜವ, ಮಿತಹಾರ ಮತ್ತು ಶೌಚ, ಎಂದು ಹತ್ತು ಪ್ರಕಾರವಾಗಿದೆ. ನಿಯಮಾಂಗವೂ ಹತ್ತು ಪ್ರಕಾರವಿದೆ :- ತಪ, ಸಂತೋಷ, ಆಸ್ತಿಕ್ಯ, ದಾನ, ಈಶ್ವರ ಪೂಜೆ (ಇದನ್ನು 2ನೇ ಸಲ) ನಿರ್ಗುಣ ಪರವಾಗಿ ಅಂತರ್ಮುಖಿಗೆ- ಶುದ್ಧಮತಿಗೆ ಒಪ್ಪುವಂತೆ ಹೇಳಿದ್ದಾರೆ.

ಬಳಿಕ ಲಜ್ಜೆ (ಸುಸ್ಥಿರ) ಮತಿ, ಜಪ (ಮೂರು ತೆರನಾಗಿದೆ), ಸ್ವಾಧ್ಯಾಯ, (ಇದು ಐದು ಪ್ರಕಾರ) ಮತ್ತು ಹುತ (ಅಂದರೆ ಯೋಗಿ ಜ್ಞಾನಾಗ್ನಿಯಲ್ಲಿ ಮನರಮಿಸುವ ಅಖಿಳ ದುರ್ವಿಷಯಗಳನ್ನು ಹವಿಮಾಡಿ ಬಿಡುವದು). ಪೊರಗೆರಗಿದ ಮನವನ್ನು ತನ್ನೊಳಗೆ ಸೆಳೆದುಕೊಳ್ಳುವದೆ (ನೀರಲ್ಲಿ ಓಡಾಡುವ ಆವೆಯಂತೆ) ಪ್ರತ್ಯಾಹಾರವೆನಿಸುವದು. ಮನಸ್ಸನ್ನು ನಿರ್ವಿಷಯದಲ್ಲಿ ಸುಮ್ಮನೆ ನಿಲ್ಲಿಸುವದೆ ಧಾರಣಾಂಗವು. ಮನವನ್ನು ನಾಭಿ, ಹೃದಯ, ಭ್ರೂಮಧ್ಯೆ ಬ್ರಹ್ಮರಂಧ್ರ ಮತ್ತು ಶಿಖಾ ಚಕ್ರ ಈ ಪಂಚಗುಹೆಗಳಲ್ಲಿ ಅಂದರೆ ಮನೋವಿಲಯದೆಡೆಯೆನಿಸುವ ಸುಕ್ಷೇತ್ರಗಳಲ್ಲಿ (ಬಂಧ ಮೋಕ್ಷಗಳಿಗೆ ಕಾರಣವಾದ) ಮನವನ್ನು ಲಯಗೊಳಿಸುವದೆ ಧಾರಣಾಂಗವು. ಮುಮುಕ್ಷುಗಳಿಗಿದು ಮುಖ್ಯವಾದ ಯೋಗಾಂಗ (ಏಳನೆಯದು) ಧ್ಯಾನಾಂಗ, ಅಂದರೇನು ? ಅರುಹಿಸಿಕೊಳ್ಳುವ ವಿಷಯಾಳಿಗಳ ಸಂಗ (ಒಡನಾಟ) ತ್ಯಜಿಸಿ, ಬರೆ ಅರಿವು ತಾನಾದ ಸದಮಳಾತ್ಮನ ಚಿಂತನೆಯಲ್ಲಿ ಮನವು ಕರಿಗೊಂಡು ನಿಲುವದೇಧ್ಯಾನವು. (1ನೇ ಹಂತದಲ್ಲಿ) ಮನೋನಿಗ್ರಹವಾಗಲು (2ನೇ ಹಂತದಲ್ಲಿ) ಮನನಾಶವಾದ ಬಳಿಕ ಯೋಗಿಯು "ಮನವಳಿದಾನಂದ ಪದದೊಳು" ನಿಂತು ತನ್ನ ತಾನು ಮರೆಯಲು (ಅರುವಿನಹಂ ಭಾವ ಅಳಿಯಲು) ಅದು ತಾನೆ ಧ್ಯಾನವೆನಿಪುದು. ಕೊನೆಯದಾಗಿ ಸಮಾಧಿ ಅಥವಾ ಮೌನಸ್ಥಿತಿ. ಇದೇ ಸಕಲ ಭೇದವಳಿದು ನಿಂದ ನಿಲುವು. ಮನಾದಿಕರಣಗಳೊಡನಾಟ ಅಳಿದು, ಅನುಪಮಾನಂದ ಶರಧಿಯಾಗಿ ಉಳಿದು, ತಾನು ತನ್ನೊಳು ತನ್ನಂತೆ ಇರಲದೇ ಸಮಾಧಿಯು. "ವಿರತಿಯಿಲ್ಲದೆ ಶಂಭುಪದಭಕ್ತಿ ಘಟಿಸದೆ, ಪರಮ ಜೀವರ ಐಕ್ಯವನರಿಯದೆ, ಸಮಾಧಿ ಸ್ಥಿತಿ ಪಡೆಯದೆ ಸುಮ್ಮನೆ ನಿಜ ಮೋಕ್ಷ ದೊರೆಯದು". ಯೋಗಿಗೆ. ಯೋಗದ ವಿಘ್ನಗಳನ್ನು ಯೋಗಾಭ್ಯಾಸಿಗೆ ಕೊನೆಯ ಸೂತ್ರ (24)ದಲ್ಲಿ ಹೇಳಿ ಶಾಂತಿ ಕರುಣಿಸಿದ್ದಾರೆ. ನಿದ್ರಾಲಸ್ಯ, ಜ್ಞಾನ ಜ್ಞೇಯ ವಿಕೃತಿಗಳು, ಅಷ್ಟಮಹಾಸಿದ್ಧಿಗಳ ಸಮಾಕುಲತೆ, ಸಂಶಯ ಮೊದಲಾದ ವಿಘ್ನಗಳನ್ನು ವಿರತಿ, ಗುರುಪಾದಭಕ್ತಿ, ಧ್ಯಾನಾದಿಯೋಗ ಬಲದಿಂದ ಗೆಲ್ಲಬೇಕು.

**6ನೇ ಸಂಧಿ :- ಗುರು ಶಿಷ್ಯಾದಿ ಲಕ್ಷಣ-**

ಸದ್ಗುರು ಭಕ್ತಿ, ಸೇವೆ, ಗುರುಬೋಧೆಗಳಿಂದ (ಮಹಾವಾಕ್ಯ ಶ್ರವಣ ಮನನದಿಂದ) ವರಶಿಷ್ಯನಿಗೆ ಮುಕುತಿ ಸಂಭವಿಪುದು, ಎಂಬುದೆ ಈ ಸಂಧಿಯ ತಾತ್ಪರ್ಯವು. ಆರಂಭದಲ್ಲಿ ಸೂಚಕ, ವಾಚಕ, ತಾರಕ ಎಂಬ ಗುರುಗಳ ಮತ್ತು ಗುರೂಪದೇಶ ತಾರತಮ್ಯ ನಿರೂಪಿಸಿ, ವರಶಿಷ್ಯನ ಲಕ್ಷಣ ಹೇಳುತ್ತಾರೆ (ಕೆಳಗಿನಂತೆ), " ನಿರಹಂಕಾರ, ಪರಮ ವಿರಕ್ತಿ ಸದ್ಗುರು ಭಕ್ತಿಯುಳ್ಳಾತನೆ ಶಿಷ್ಯನೆನಿಪನು". ಬಳಿಕ ವೇದಾಂತ ಶ್ರವಣಕ್ಕೆ ಅಧಿಕಾರಿಯಾದ ಮುಮುಕ್ಷುವಿನ ಲಕ್ಷಣವೆಂದರೆ- "ವನಿತಾದಿ ವಿಷಯಂಗಳನು ವಿಷವೆಂದು ಅರಿದಾತನೆ ಮುಮುಕ್ಷುಯೆನಿಪನು." ಆಮೇಲೆ ಪರಮ ಸುಕೃತಿಗಳೆನಿಸುವ ಅಭ್ಯಾಸಿ, ಅನುಭವಿ ಮತ್ತು ಆರೂಢರ ಲಕ್ಷಣಗಳನ್ನು ಅನಿಮಿತ್ತ ಬಂಧುಗಳಾದ ನಿಜಗುಣರು ಕೆಳಗಿನಂತೆ, ನಿರೂಪಿಸುತ್ತಾರೆ: 'ದ್ವೈತ ವಿರಕ್ತನು, ಅದ್ವೈತ ಅನುರಕ್ತನು,' ಅಂದರೆ ಭೇದರೂಪ ಸಂಸಾರದಲ್ಲಿ ಅನಾಸಕ್ತಿ ಮತ್ತು ಅಖಂಡ, ಅದ್ವಯಾನಂದಪದ ಆತ್ಮಾನುಭೂತಿಯಲ್ಲಿ ವಿಶೇಷ ಅಭಿರುಚಿಯುಳ್ಳವನೆ ಅಭ್ಯಾಸಿಯು. ಮತಿಯೊಳು ಸಮತೆ, ಉದಾರತೆ, ದೃಢತೆಯುಳ್ಳವನು, ಸ್ಮೃತಿ ಮಾತ್ರದಿಂದ ಆತ್ಮಾನಂದದಲ್ಲಿ ವಿಹರಿಸುವವನು ಅನುಭವಿಯೆನಿಸುವನು. 'ಭೋಗ ವಿಷಯಂಗಳೊಳು, ತತ್ತ್ವ ವಿಷಯಂಗಳೊಳು, ರತಿ ವಿರತಿಯನುಳಿದ, ನಿರ್ವಿಷಯಿಯಾದ ಮಹಾತ್ಮನೆ ಆರೂಢನೆನಿಪನು. ಕಾಂಡತ್ರಯಗಳಿಗೆ ಮೂವರು ಅಧಿಕಾರಿಗಳು ಯಾರು, ಎಂಬುದನ್ನು ಸಾರವತ್ತಾಗಿ ನಿರೂಪಿಸುವರು ನಿಜಗುಣರು. 'ರಾಗಿಗೆ ಕರ್ಮ, ವಿರಾಗಿಗೆ ಜ್ಞಾನ ಮತ್ತು ತನ್ಮಿತ್ರವುಳ್ಳವರಿಗೆ ನಿಜ ಭಕ್ತಿಯನ್ನು ಯೋಗಿಸು'. ಯೋಗೀಶ್ವರರ ಅವಸ್ಥೆಗಳು ಬೇರೆ ಬೇರೆ ಇರುವವು. ಬಾಲಕ, ಉನ್ಮತ್ತ, ಪಿಶಾಚನಂತೆ ಇರಬಹುದು ಅಥವಾ ವೈಯ್ಯಾಕರಣಿ ಮತ್ತು ಮೌನಿಯಾಗಿರಬಹುದು. ಅವರ ಬೋಧೆ ಎರಡು ಪ್ರಕಾರ :- ಒಂದು ನೇತ್ಯಾತ್ಮಕ, ಇನ್ನೊಂದು ಸರ್ವಾತ್ಮಕ. ಯೋಗಿ ಎಲ್ಲಿರ್ದರೂ, ಎಂತಿರ್ದರೂ ಅವನಿಗೆ ವಿಧಿ ನಿಷೇಧ ಕರ್ಮಗಳಿಲ್ಲ, ಆದ್ದರಿಂದ ಯೋಗಿವರನಿಗೆ ವಂದಿಸು, ನಿಂದಿಸದಿರು. (ನಿಂದಿಸಿದರೆ ಬಹುಪಾಪ ಬರುವದು.)

ಕೊನೆಯದಾಗಿ 'ತತ್ತ್ವಂಅಸಿ'' ಎಂಬ ಮಹಾವಾಕ್ಯದ ವಾಚ್ಯಾರ್ಥ, ಲಕ್ಷಾರ್ಥ (ಮೇಲಿನ ಮೂರು ಪದಗಳಿಗೆ)ಗಳನ್ನು ಹೇಳಿ, ಅಖಂಡೈಕರಸ ಪರಮಾತ್ಮ ನೀನಿರುವಿ, ಎಂದು ನಿರ್ಣಯಿಸಿದ್ದಾರೆ. ಈ ಯಥಾರ್ಥ ಬೋಧೆಗೆ ವಿರುದ್ಧ ಅರ್ಥಪ್ರತಿಪಾದಕ ವಾದಿಗಳ ಮಾತನ್ನು (ವಾಕ್ಯಾರ್ಥ ಪ್ರತಿಪತ್ತಿ) ನಿರಾಕರಿಸಿದ್ದಾರೆ (ಸೂತ್ರ 20)

ಈ ಸಂಧಿಯಲ್ಲಿ ಮನನೀಯ ಭಕ್ತಿಜ್ಞಾನಗಳ ಸಂಗಮ ಸೂತ್ರವೆಂದರೆ–

"ಸರ್ವವೆಲ್ಲವನು ಚಿದಾತ್ಮಭಾವನೆಗಂಡು ।

ಸರ್ವ ಸಮತ್ವದಿಂದಿರೆ ಭಕ್ತಿ ॥ (18), 6ನೇ ಸೂತ್ರ

ಗ್ರಂಥ ಸಮಾಪ್ತಿಯನ್ನು ಶಂಭುಲಿಂಗವೆ 'ಆನು', ಎಂಬ ಹೆಸರಿನಿಂದ ಈ ತನುವಿನಲ್ಲಿ ಆತನೆ ಇದ್ದಾನೆ, ಎಂಬ ಪರತತ್ತ್ವವನ್ನು ಶ್ರೀ ನಿಜಗುಣಯೋಗಿಗಳ ಮಾತಿನಿಂದಲೆ ಮಂಗಲ ಮಾಡೋಣ !

"ನಾನಾ ವಿಕಲ್ಪವಿನ್ನೇನು ಜೀವೇನಾತ್ಮ ।

–ನಾನು ಪ್ರವಿಶ್ಯಮೆಂದೆನೆ ಶ್ರುತಿ ॥

ಸಾನುರಾಗದೆ ಶಂಭುಲಿಂಗವೀ ತನುವಿನೊ– ।

ಳಾನೆಂದೆನಿಸಿ ಕೊಳುತಿಹುದಾಗಿ ॥ (20–11)

'ಕಲಿಯುಗದೊಳಗೆ ದೋಷವಿಧಿ ಕುಂದದೆ ಇಹುದು.' ಎನ್ನುತ್ತಾರೆ ನಿಜಗುಣರು. ಒಂದು ಒಳ್ಳಿತ್ತು, ಒಂದು ಅಲ್ಲಾದುದು, ಈ ವಿಷಮತೆಯನ್ನು ಶಿವಪದದ ನೆನಹು ಮಾತ್ರದಿಂದ ಗೆಲಿದು ಮುಕ್ತನಾಗಬೇಕು.

"ಭಕ್ತಿ ಮಾತ್ರವನು ಮಾಡಿದೊಡೆ ಕೇಳಂಗನೆ ।

ಮುಕ್ತಿಯನೊಲಿದು ಈವನೀಶನು ॥ (6ನೇ ಸಂಧಿ, 17ನೇ ಸೂತ್ರ)

ಒಟ್ಟಾರೆ ಭಕ್ತಿಪಥ ಬಹುಸುಲಭವಾಗಿ, ನೇರವಾಗಿ ಮುಕ್ತಿಯನೀವುದು. 'ತಾನು ತನ್ನ ಪ್ರಾಣ, ತನು, ಗುಣ ಕರ್ಮ ವಿಷಯಗಳನು, ಮನಾದಿಕರಣ ಭೋಗ ಭುವನಾದಿಗಳನು ಸಾನುರಾಗದೆ ಶಂಭುಲಿಂಗವೆಂದರಿದು ಅಭಿಮಾನವಿಲ್ಲದಿಹುದೆ ಮುಕ್ತಿಯ ನೀವ ಭಕ್ತಿಕಾಂಡ'. ಪ್ರಿಯ ವಾಚಕರಿಗೆ ಈ ಮಹಿಮಾನ್ವಿತ ಗ್ರಂಥ ಅವಲೋಕನದಿಂದ ಪರಮುಕುತಿ ಸಮನಿಸಲಿ.

ನನ್ನ ಗುರುಬಂಧುಗಳಾದ 'ಗುರುಪಾದರಜ' (ಊರ್ಫ ಶ್ರೀ ವಾಯ್. ಎಮ್. ಗಾಣಗೇರ) ಅವರು ಅನುವಾದ ಕಾರ್ಯದಲ್ಲಿ ನೆರವು ನೀಡಿದ್ದಾರೆ. ವೇದಾಂತ ಗ್ರಂಥ ಬರಹವು ಸಾಧಕನ ಮನನ ನಿದಿಧ್ಯಾಸನ ಸಾಮಗ್ರಿ ಹೆಚ್ಚಿಸುವದು. ಈ ದಿಶೆಯಲ್ಲಿ ನಮ್ಮಿರ್ವರಿಗೆ ಸದಾವಕಾಶ ಕಲ್ಪಿಸಿಕೊಟ್ಟ ಮೆ॥ ಪಿ.ಸಿ. ಶಾಬಾದಿಮಠ, ಗದಗ. ಇವರ ಉಪಕಾರವನ್ನು ನಾವು ಸ್ಮರಿಸದೆ ಇರಲಾರೆವು.

ಪ್ರಿಯ ಓದುಗರು ಈ ಕೃತಿ ಪುನಃ ಪುನಃ ಓದುತ್ತ ತಮ್ಮ ಸದುಹೃದಯದಲ್ಲಿ ಉದಿಸುವ ಅನುಪಮಾನಂದ ಬೋಧಾಂಬುಧಿಯಲ್ಲಿ ಮುಳುಗಿದರೆ ಸಾಕು.ಅದೇ ಅವರೀಕೃತಿಗೆ ನೀಡಬೇಕಾದ ಅನರ್ಘ್ಯ ಬೆಲೆಯಾಗಿದೆ. ಇದರಿಂದ ಅನುವಾದಕರ ಹಾಗೂ ಗ್ರಂಥ ಪ್ರಕಾಶಕರ ಶ್ರಮ ಸಾರ್ಥಕವಾಗುವದು.

ಇತಿ

ಶಮ್ ।

★★★

# ಅನುವಾದಕರ ನಲ್ಮೆಯ ನುಡಿ

ಶ್ರೀ ಮನ್ನಿಜಗುಣ ಶಿವಯೋಗಿಗಳು 15ನೇ ಶತಮಾನದಲ್ಲಿ ಶಂಭುಲಿಂಗ ಬೆಟ್ಟದಲ್ಲಿ (ಕೊಳ್ಳೇಗಾಲ ತಾಲೂಕು) ಯತಿಗಳಾಗಿದ್ದು, ವೇದಾಂತ ಪ್ರಕರಣ ಗ್ರಂಥಗಳನ್ನು ಬರೆದ ಉದ್ದಾಮ ಕವಿಗಳು, ಅನುಭಾವಿಗಳು, ಋಷಿ ಪುಂಗವರು, ಸಂತರು, ನಿಗಮಾಗಮ ಸಮನ್ವಯ ಸಾರ್ವಭೌಮರು, ಅಕಲಂಕವಾದ ಅದ್ವೈತ ತತ್ತ್ವ ಬೋಧಕರು ಆಗಿದ್ದರು. 20 ನೇ ಶತಮಾನದಲ್ಲಿ ಇವರೇ ಸಿದ್ಧಾರೂಢ ಭಾರತಿ ನಾಮದಿಂದ ಅವತರಿಸಿ, ಹುಬ್ಬಳ್ಳಿಯಲ್ಲಿ ಸುಮಾರು 50 ವರ್ಷ ನೆಲಸಿ ತಾಡೋಲೆಗಳ ಮೇಲೆ ಬರೆದ ಕೈಬರಹದ ಹೊತ್ತಿಗೆಯನ್ನು ಮಂಟೂರ ಗ್ರಾಮದಿಂದ ತರಿಸಿ, ''ಪಂಚರತ್ನ'' ಎಂದು ಹೆಸರಿಟ್ಟು ಹೊಸ ಗ್ರಂಥ ಪ್ರಕಟ ಮಾಡಿದರು. ಮೊದಲು ಬರೆದ ಯತಿಗಳೇ ಆ ಬಳಿಕ ಆರೂಢರೆಂಬ ನಾಮದಿಂದ ತಮ್ಮ ಗ್ರಂಥ ಮುದ್ರಿಸಿ, ಚಿದಂಬರ ಮಠಾಧೀಶರಾಗಿ ಅದನ್ನೇ ಬೋಧಿಸಿದರು. ಇವರ ಬೋಧಾಮೃತವನ್ನು ತಾವು ನಲಿದು ಸೇವಿಸಿ ನಮಗೆ ಉಣಬಡಿಸಿದವರೆಂದರೆ– ಗೋಪನಕೊಪ್ಪದ (ಹುಬ್ಬಳ್ಳಿ ತಾಲೂಕು) ಪರಮಹಂಸ ಶ್ರೀ ಶ್ರೀ ಸಿದ್ಧವೀರ ಮಹಾಸ್ವಾಮಿಗಳು ಹಾಗೂ ಧಾರವಾಡದ ಬ್ರ.ನಿ.ಶ್ರೀಪರಮಾನಂದಸ್ವಾಮಿಗಳು.

ಶ್ರೀ ನಿಜಗುಣರು ಕಾವ್ಯರೂಪದಲ್ಲಿ ಬರೆದ ಗ್ರಂಥಗಳು ಐದು :– ಕೈವಲ್ಯ ಪದ್ಧತಿ, ಪರಮಾನುಭವ ಬೋಧೆ, ಅನುಭವಸಾರ, ಪರಮಾರ್ಥ ಗೀತೆ, ಅರವತ್ತುಮೂರು ಮಂದಿ ಪುರಾತನರ ಸ್ತೋತ್ರ. ಗದ್ಯದಲ್ಲಿರುವ ಹತ್ತು ಪ್ರಕರಣಗಳುಳ್ಳ, ಕನ್ನಡ ಸಾಹಿತ್ಯದಲ್ಲಿ ಪ್ರಥಮ ವಿಶ್ವಕೋಶವೆನಿಸುವ ಶ್ರೀ ನಿಜಗುಣರ ಪ್ರಬಂಧಗ್ರಂಥವೆಂದರೆ 'ವಿವೇಕ ಚಿಂತಾಮಣಿ'.

ಪ್ರಸ್ತುತ ನಾವು ಗದ್ಯಾನುವಾದಮಾಡಲು ಆಯ್ಕೆ ಮಾಡಿದ ಪ್ರಕರಣ ಗ್ರಂಥವೆಂದರೆ '' ಪರಮಾನುಭವ ಬೋಧೆ''–ಇದರಲ್ಲಿ 6 ಸಂಧಿಗಳು, 122 ಸೂತ್ರಗಳು ಮತ್ತು 985 ಪದ್ಯಗಳು (ಚೌಪದಿ) ಇರುವವು. ಇವನ್ನು ಇದಕ್ಕಿದ್ದ ಹಾಗೆ ಬರೆದು. ಇವಕ್ಕೆ ಸರಳವಾಗಿ ಗದ್ಯಾನುವಾದ ಬರೆದು (ಅವಶ್ಯವಿರುವಲ್ಲಿ ಟಿಪ್ಪಣಿ ಸಹಿತ) ಗುರು ಪುಂಗವರ ಋಣ ತೀರಿಸುವ ಪ್ರಯತ್ನ ಮಾಡಲಾಗಿದೆ.

ಮೂಲ ಸಂಸ್ಕೃತದಲ್ಲಿರುವ ಯಾಜ್ಞವಲ್ಕ್ಯ ಮುನಿವರ ಮತ್ತು ಅವರ ಧರ್ಮಪತ್ನಿ ಮೈತ್ರೇಯಿ ಇವರೀರ್ವರಲ್ಲಿ ನಡೆದ ಸಂವಾದವನ್ನು 'ಅನಿಮಿತ್ತಬಾಂಧವ, ಅನುಪಮಾನಂದಾಬ್ಧಿ ವಿನಯಾದಿ ಗುಣಮಣಿಮಂಡನ, ಜನನವಿದೂರನೆನಿಸಿ ರಾಜಿಪ ನಿಜಗುಣಯೋಗಿಗಳು ಕನ್ನಡ ಕಾವ್ಯದಲ್ಲಿ ಸಾಧಕರು ಅರಿವಂತೆ ಈ 'ಪರಮಾನುಭವಬೋಧೆ' ಗ್ರಂಥ ವಿರಚಿಸಿದ್ದಾರೆ. ಇದರಲ್ಲಿ 6 ಸಂಧಿಗಳು ಇರುವವು. ಇವುಗಳ ಸಾರವತ್ತಾದ ಪರಿಚಯವನ್ನು ಗ್ರಂಥಾರಂಭದಲ್ಲಿಯೇ ಕೊಡಲಾಗಿದೆ. ಮೊದಲಿನ ಮೂರು ಸಂಧಿಗಳಲ್ಲಿ ತನ್ನ ನಿಜಸ್ವರೂಪದ ಸಾಧ್ಯ ಲಕ್ಷಣಗಳನ್ನು ಸಾಧಕರಿಗೆ ಅಪರೋಕ್ಷವಾಗಿ (ಪ್ರತ್ಯಕ್ಷವಾಗಿ) ಅನುಭವಗೋಚರವಾಗುವಂತೆ ಬೋಧಿಸಿದ್ದಾರೆ. ಬಳಿಕ ಮುಂದಿನ ಮೂರು ಸಂಧಿಗಳಲ್ಲಿ ನಿರ್ಗುಣ ಹಾಗೂ ಸಗುಣ ಯೋಗಾಭ್ಯಾಸದ

ಸಾಧನೆಗಳನ್ನು, ಗುರುಶಿಷ್ಯರ ಲಕ್ಷಣಗಳನ್ನು ಅನುಭವಿ, ಆರೂಢರ ಮತ್ತು ಯೋಗೀಶ್ವರರ ಚರಿತ್ರೆಯನ್ನು, ಆಬಾಲವೃದ್ಧರಿಗೆ ಪುರುಷ ಸ್ತ್ರೀಯರಿಗೆ ಸರಳವಾಗಿ, ನೇರವಾಗಿ ತಿಳಿಯುವಂತೆ ಬೋಧಿಸಿದ್ದಾರೆ. ನಿಜನಿಷ್ಠರೆನಿಪ ನಿಜಗುಣ ಶಿವಯೋಗಿಗಳು. ಈ ಕೃತಿಯ ರಹಸ್ಯವನ್ನು ಸಾಧಕನು ಶ್ರೀ ಗುರುಮುಖದಿಂದ ಆಲಿಸಿ, ಮನನ-ನಿದಿಧ್ಯಾಸನ ಮಾಡಿ ಇಹ ಜನುಮದಲ್ಲಿ ಚಿರಮುಕುತಿಯನ್ನು ಪಡೆಯಬೇಕೆಂದು ಹರಸಿದ್ದಾರೆ. ಅಂತಹ ಸಾಧಕನು ಎಷ್ಟು ಜನುಮಗಳಲ್ಲಿ ಪುಣ್ಯ ಮಾಡಿರಬೇಕು, ಎಂಬುದನ್ನು ನಿಜಗುಣರ ನುಡಿಮುತ್ತಿನಲ್ಲಿ ಬರೆಯುವೆ.

''ಇದನೊಮ್ಮೆ ಕೇಳಿ ತಿಳಿದೊಡೆ ಅವನೀ ಲೋಕದುದಯಾದಿ ಬಳಿಕ ಇಂದು ಪರಿಯಂತ ಒದವಿ ತಾನೆಸಗಿದಖಿಳ ಪುಣ್ಯತತಿ ಫಲಿಸಿದುದು. ಇಂತು ಪೆರತಿಲ್ಲವೆನೆ ಪೇಳ್ವೆ.'' (1–2–12).

ಈ ಗ್ರಂಥದ ವೈಶಿಷ್ಟ್ಯವೆಂದರೆ ಮುನ್ನಿನ ಉಪನಿಷತ್ಕಾರರು ಬಳಸಿದ ಶಬ್ದಗಳು ಪರೋಕ್ಷ ಜ್ಞಾನವನ್ನು ನೀಡಿದರೆ ನಿಜಗುಣರು ಹೇಳಿದ ಶಬ್ದಗಳು ಅಪರೋಕ್ಷ ಅನುಭೂತಿಯನ್ನು ಕೊಡುವವು. ಉದಾ– ಜೀವ ಶಬ್ದದ ಬದಲು ಕಲ್ಪಿತ ಪುರುಷ ಶಬ್ದಬಳಸಿ, ಬಂಧಮೋಕ್ಷಗಳಿಗೆ ಇವನೇ ಕಾರಣನು, ಎಂದು ಹೇಳುತ್ತಾರೆ. 'ನೀನು ಬ್ರಹ್ಮ' ಎನ್ನುವ ಬದಲು ''ನೀನು ಅರಿವು, ಇರುವಿ. ಅರಿವು ನಿನ್ನೊಡಲಾದ ಕತದಿಂದ ಮರೆದೆನೆಂಬುದು ಭ್ರಾಂತಿ. 'ಕಲ್ಪಿತ ಪುರುಷನ ವಿಕಲ್ಪನೆಯಿಂದಾದ ಜಗವಿದು ಕಲ್ಪನೆಯಹುದು,' ಎಂದು ತಿಳಿ, 'ನೀನಲ್ಲದ ದೇಹಭಾವ ಅಳಿ, ನಿಜವಾಗಿ ನೀನಾರು ತಿಳಿ. ನೀನು ನೀನಾಗಿ ಅಂದರೆ ಅದ್ವೈತ ಆತ್ಮನಾಗಿ, ನಿರ್ಗುಣ, ನಿರ್ವಿಕಲ್ಪ ನಿರಂಜನ, ನಿರಾಮಯನಾಗಿ ಉಳಿ,' ಇದೇ ಇಲ್ಲಿ ನಿರೂಪಿಸಿದ ಬೋಧದ ಸಾರವು.

ತಾನುಳ್ಳೊಡುಂಟು ತೋರುವ ಜಗವಿದು ನೋಡು।<br>
ತಾನಿಲ್ಲವರಿದಂದು ನಿಜದಲ್ಲಿ॥ (ಸಂಧಿ–2, ಸೂತ್ರ 15)

ತೋರುವ ಜಗದ್‌ಭ್ರಾಂತಿ, ತನ್ನ ಅಹಂಭ್ರಾಂತಿ ಉಭಯಮಿವು ಮಿಥ್ಯೆ (ಪುಸಿದೋರಿಕೆ), ಬಳಿಕೇನೊಂದು ತೋರದ ಅರಿವೊಂದೆ ಪರಮಾರ್ಥ, ತನ್ನಲ್ಲಿತಾನೆಂಬುದಿಲ್ಲ ಅನ್ಯತೆಗಾಣಲಿಲ್ಲ ಇನ್ನೇನೊಂದನುಸುರಲಿಕ್ಕೆಯೆಡೆಯಿಲ್ಲ (ತನ್ನಲ್ಲಿ) ಮಾತೃಮಾನಾದಿ ತ್ರಿಪುಟಿಗಳಿಲ್ಲ. ತಾನೆ ಎಂದೆಂದು ಪರಿಪೂರ್ಣ ಅದ್ವಯ ಪರಮನೆ ಇರುವನು. (4–8–7)

'ಕಡೆಯಿಲ್ಲ ಮೊದಲಿಲ್ಲ, ತಡೆ ಬಿಡುಗಡೆಯಿಲ್ಲ<br>
ಪಡಿಯಿಲ್ಲ ಪಟ್ಟಾಂತರವೆಯಿಲ್ಲ''<br>
ನುಡಿಯಿಲ್ಲ ನೆನಹು ಇಲ್ಲ, ಅರಿವಿನೆಚ್ಚರು ದೋರಲೆಡೆಯಿಲ್ಲ<br>
ಎಂದೆಂದು ಪರಿಪೂರ್ಣ'' (ನೀನಿರುವಿ) (4ನೇ ಸಂಧಿ–8–8)

ಇದು ಉತ್ತಮೋತ್ತಮ ತತ್ತ್ವಾಧಿಕಾರಿಗೆ ಹೇಳಿದ ಬೋಧವು. ಇದು ತಿಳಿಯದವರ್ಗೆ ಅಷ್ಟಾಂಗ ಯೋಗಕ್ರಮ (5ನೇ ಸಂಧಿ) ವನ್ನು, ಆ ಬಳಿಕ ಭಕ್ತಿಯೋಗವನ್ನು (6ನೇ ಸಂ) ಅರುಹುತ್ತಾರೆ.

****

॥ ಶ್ರೀ ಗುರು ಶಂಬುಲಿಂಗಾಯ ನಮಃ ॥

# ಪರಮಾನುಭವ ಬೋಧೆ

## 1ನೇ ಸಂಧಿ

## ಪ್ರವರ್ತಕ ಕರ್ಮ

### 1ನೇ ಸೂತ್ರ

ಶ್ರೀ ಗುರು ಶಂಭುಲಿಂಗದ ಪಾದ ಪಂಕಜ ।
ವೀಗೆನ್ನಮತಿಗೆ ಮಂಗಳವನು ॥

ಶ್ರೀ ಗುರು ಶಂಭುಲಿಂಗವಾಗಿರುವ ಸದ್ಗುರುವಿನ ಪಾದಕಮಲವು ನನ್ನ ಜಡ ಬುದ್ಧಿಗೆ, ಸದ್ಬುದ್ಧಿ, ಸಂತೃಪ್ತಿಹಾಗೂ ಉತ್ತಮರ ಸಂಗರೂಪ ಮಂಗಳವನು ಕರುಣಿಸಲಿ.

**ಶ್ರೀ ಮಹಾದೇವಂಗೆ ಸೋಮಂಗೆ ಸುಖ ಪೂರ್ಣ ।**
**ಧಾಮಂಗೆ ಸತ್ಯಚಿದ್ರೂಪಂಗೆ ॥**
**ಕಾಮಿತ ಜನಕಲ್ಪಭೂಜಂಗೆ ಶಂಭುವಿಂ।**
**ಗಾಮೋದದಿಂದ ವಂದಿಸುವೆನು ॥ 1 ॥**

ಶ್ರೀ ಮಹಾದೇವನು, ಉಮಾಪತಿ, ಪೂರ್ಣಸುಖಧಾಮನು (ನಿಳಯ) ಸತ್ಯನು (ನಿರಂತರ ಇರುವವನು), ಚಿದ್ರೂಪನು (ಅರಿವು ಸ್ವರೂಪ), ಭಕ್ತರು ಬಯಸಿದುದನ್ನು ನೀಡುವ ಕಲ್ಪವೃಕ್ಷನು, ಇಂತಿರುವ ಶಂಭುಲಿಂಗಸ್ವರೂಪ ಪರಮಾತ್ಮನಿಗೆ ವಂದಿಸುವೆನು.

**ಸರ್ವ ವಿದ್ಯೆಗಳಿಗೆ ಸರ್ವ ಬುದ್ಧಿಗಳಿಗೆ।**
**ಸರ್ವ ಸಿದ್ಧಿಗಳಿಗೆ ಸರ್ವಕ್ಕೆ॥**
**ಸರ್ವ ಜೀವರ ತೋರ್ಕೆಗಾದಿ ಕಾರಣವಾದ।**
**ಸರ್ವ ಮಂಗಲೆಗೆಯಾನತನಪ್ಪೆ॥ 2 ॥**

ಸಕಲ ವಿದ್ಯಾಬುದ್ಧಿಗಳಿಗೆ, ಸಕಲ ಸಿದ್ಧಿಗಳಿಗೆ, ಸಕಲ ಜೀವರ ಉತ್ಪತ್ತಿ ಸ್ಥಿತಿ ಲಯಗಳಿಗೆ ಮೂಲಕಾರಣಳಾದ ಸರ್ವಮಂಗಲೆಯಾದ ಪಾರ್ವತಿಗೆ ನಮಿಸುವೆನು.

**ಗಣವರನಣಿಮಾದಿ ಗುಣಮಣಿಸಿಂಧು ವಾ।**
**ರಣಮುಖನಭಿಮತಾರ್ಥಂಗಳ॥**

ತಣಿವಂತೆ ಕೊಡುವದನನ್ವಿತನೀಕೃತಿ।
ಗಣುಮಾತ್ರ ವೆಡರಿಲ್ಲವೆನೆಮಾಳ್ಕೆ॥ 3 ॥

ಗಣವರನು, ಅಣಿಮೆ, ಗರಿಮೆ, ಮೊದಲಾದ ಅಷ್ಟಸಿದ್ಧಿಗಳಿಗೆ ಸಾಗರನು ನನ್ನ ಶುಭೇಚ್ಛೆಗಳು ಸಂತೃಪ್ತಿಯಾಗುವಂತೆ ಮಾಡಬಲ್ಲವನು ಆದ ಶ್ರೀ ಗಣೇಶನು ಈ ಕೃತಿಗೆ ಎಳ್ಳಷ್ಟೂ ಎಡರು ಬಾರದಂತೆ ಸಂರಕ್ಷಿಸಲಿ.

ಚಿನ್ನವಾಭರಣತೆಯಿನ್ನಾಮರೂಪ ಭೇ।
ದಂ ನಿಜವೆನಿಸಿದಂತೀಶನ॥
ಭಿನ್ನಾಭಿದಾನಮೂರ್ತಿಗಳೆನಲೆಸೆವ ಸಂ।
ಪನ್ನಗಣಾಳಿ ರಕ್ಷಿಪುದೆನ್ನ॥ 4 ॥

ಬಂಗಾರದಲ್ಲಿ ತೋರುವ ಆಭರಣಗಳಂತೆ ಶಿವನೋಲಗದಲ್ಲಿ ಬೇರೆ ಬೇರೆ ರೂಪು ಮತ್ತು ನಾಮಗಳುಳ್ಳ ಸಂಪೂಜ್ಯ ಗಣಾಧೀಶರಿರುವರು. ಅವರೆಲ್ಲರು ನನ್ನನ್ನು ಸಂರಕ್ಷಿಸಲಿ.

ಕರುಣರಸದ ಕೋಡಿವರಿವ। ಕಟಾಕ್ಷದ ಪರತತ್ತ್ವರುಪುವಾಲಾಪದ
ವರಪುಣ್ಯಮಯಶರೀರದ ನಿರಾಭಾರಿ ಸ।
ದ್ಗುರುವಿರಲೆನ್ನ ಮಾನಸದಲ್ಲಿ॥ 5 ॥

ಕಾರುಣ್ಯರಸದ ಕೋಡಿ ಯಾವನ ಜ್ಞಾನ ಚಕ್ಷುವಿನಿಂದ ಹರಿವುದೋ, ನಾನಾರು ಎಂಬ ನಿಜ ತತ್ತ್ವವನ್ನು ಬೋಧಿಸುವ ಅನುರಾಗವುಳ್ಳವನೋ ಅಂಥ ಪುಣ್ಯಮಯ ಶರೀರಿ ಮತ್ತು ನಿರಾಭಾರಿ (ಜ್ಞಾನ ವೈರಾಗ್ಯ ಉಪರತಿಯುಳ್ಳ) ಸದ್ಗುರುನಾಥನು ನನ್ನ ಸುಮನದಲ್ಲಿ ಅಗಲದಂತಿರಲಿ.

ಶುಕ ವಾಮದೇವಾದಿ ಸಕಲ ಮುನೀಶ್ವರ।
ನಿಕರವನೊಲವಿಂದೆ ಬಲಗೊಂಡು॥
ಅಕಲಂಕ ಮೆನಿಸುವದ್ವೈತ ತತ್ತ್ವವನಿಲ್ಲಿ।
ಪ್ರಕಟಿಸುವೆನು ಬೋಧಾಗತಿಯಿಂದೆ॥ 6 ॥

ಶುಕ, ವಾಮದೇವ ಮೊದಲಾದ ಯಾವತ್ತೂ ಮುನಿಪುಂಗವರ ಆತ್ಮಬಲ ಪಡೆದು ಕೊಂಡು, ಒಲವಿಂದ ನಿಷ್ಕಲಂಕವಾದ ಮತ್ತು ಸಮವಾದ ಅದ್ವೈತ ತತ್ತ್ವವನ್ನು ಈ ಪ್ರಕರಣದಲ್ಲಿ ಬೋದಪರವಾಗಿ ಪ್ರಕಟಿಸುವೆನು.

ಅವರಿವರೆನ್ನದೆ ನಿಜವರಿದವರಂಘ್ರಿ।
ಗವನತನಾಗಿ ಸಂತಸದಿಂದ॥
ತವೆ ರಮ್ಯವಾದುದೆಂದೆನೆ ಪೇಳ್ವೆನಧ್ಯಾತ್ಮ।
ಸುವಿಚಾರಗತಿಯನೀ ಕ್ರಮದಿಂದ॥ 7 ॥

[ ಟಿಪ್ಪಣಿ–1 (ತತ್ತ್ವ) ಆರೋಪಿತವಲ್ಲದ ಯಥಾರ್ಥವಾದ ಸ್ವರೂಪಕ್ಕೆ ಅದ್ವೈತ ಅಥವಾ ನಿಜತತ್ತ್ವ ಎನ್ನುವರು. ]

"ಅವರು, ಇವರು", ಎಂಬ ನಾಮರೂಪ ಕ್ರಿಯಾಭೇದಗಳನ್ನು ಎಣಿಸದೆ, ಯಾರು ತಮ್ಮ ನಿಜಸ್ವರೂಪ ತಿಳಿದಿರುವರೊ ಅವರ ಪಾದಕಮಲಗಳಿಗೆ ನಾನು ಸಂತಸದಿಂದ ಅಭಿವಂದಿಸಿ, ಬಹುರಮ್ಯವಾಗುವಂತೆ (ಮನಂಬುಗುವಂತೆ) ಸುಸಂಬದ್ಧ ಕ್ರಮದಿಂದ ಅಧ್ಯಾತ್ಮಸುವಿಚಾರಗತಿಯನು ಹೇಳುವೆನು.

ಇಂತು ಈ ಆರಂಭ ಸೂತ್ರದಲ್ಲಿ ಇಷ್ಟದೇವತಾ ಸಂಪ್ರಾರ್ಥನೆಯನ್ನು ಶ್ರೀ ಮನ್ನಿಜಗುಣಶಿವಯೋಗಿಗಳು ನಿರೂಪಿಸಿದ್ದಾರೆ.

........ಓಂ ಸವಿತುಃವರೇಣ್ಯಂಭರ್ಗೋರ್ದೇವಸ್ಯ ಧೀಮಹಿ।

ಧಿಯೊ ಯೋನಃ ಪ್ರಚೋದಯಾತ್ । ಗಾಯತ್ರಿ ಮಂತ್ರದ ಈ ತಾತ್ಪರ್ಯವನ್ನೇ ಆರಂಭದಲ್ಲಿ(1ನೇ ಸೂತ್ರ) ನಿಜಗುಣರು ಹೇಳಿದ್ದಾರೆ.

## 2ನೇ ಸೂತ್ರ

ಶ್ರೀ ಯಾಜ್ಞವಲ್ಕ್ಯಮೈತ್ರೇಯಿಗೆ ಪೇಳ್ದುದ ।
ನೊಯ್ಯಾರದಿಂದೆ ವರ್ಣಿಸುವೆನು ॥

ಶ್ರೀ ಯಾಜ್ಞವಲ್ಕ್ಯ ಮುನಿಪುಂಗವರು ತಮ್ಮ ಧರ್ಮಪತ್ನಿ ಹಾಗೂ ತತ್ತ್ವ ಜಿಜ್ಞಾಸು ಆಗಿರುವ ಮೈತ್ರಾದೇವಿಗೆ ಅಂದವಾಗಿ ಸಮಗ್ರವಾಗಿ ಹೇಳಿದ ಅದ್ವೈತದ ನಿಲುವನ್ನು ಶ್ರೀ ನಿಜಗುಣರು ವರ್ಣಿಸುವರು.

ಅನಿಮಿತ್ತ ಬಾಂಧವನನುಪಮಾನಂದಾಬ್ಧಿ।
ವಿನಯಾದಿಗುಣಮಣಿಮಂಡನ ॥
ಜನನವಿದೂರನಧಿಕ ವಿದ್ಯಾಸಂಪನ್ನ।
ನೆನಿಸಿ ರಾಜಿಪ ನಿಜಗುಣಯೋಗಿ ॥ 1 ॥

ನಿಜಗುಣರು ಅನಿಮಿತ್ತ ಬಂಧುಗಳು. ಅಂದರೆ ಶರೀರದ ಕುಲಜಾತಿಗಳ ದೇಶಭಾಷೆಗಳ ಯಾವ ಸಂಬಂಧವಿಟ್ಟುಕೊಳ್ಳದೆ, ನಿರಪೇಕ್ಷವಾಗಿ. ಮೋಕ್ಷಾಪೇಕ್ಷಿಗಳಿಗೆ ಪರತತ್ತ್ವವನ್ನು ಬೋಧಿಸಿರುವರು. ಇವರ ನಿಲುವು ಅನುಪಮ, ಅಪೂರ್ವ, ಅಪ್ರತಿಮ ಆನಂದಸಾಗರ. ಇವರು ವಿನಯ, ಪರಾವಿದ್ಯೆ, ವಿವೇಕ, ವೈರಾಗ್ಯ, ಕರುಣೆ, ಮುಂತಾದ ಸದ್ಗುಣಗಳಿಂದ ಸಾಲಂಕೃತರು, ಜನನ ಮರಣ ರೂಪ ಭವ ಗೆದ್ದವರು, ಅಧಿಕ ವಿದ್ಯಾ ಸಂಪನ್ನರು. ಇಂತು ಪರತತ್ತ್ವ ಚಿದಾಕಾಶದಲ್ಲಿ ಧ್ರುವತಾರೆಯಂತೆ ರಾರಾಜಿಸುವವರು ನಿಜಗುಣಯೋಗಿಗಳು.

ವಿರಚಿಸುವೆನು ಯಾಜ್ಞವಲ್ಕ್ಯ ಮೈತ್ರೇಯಿಯ ॥
ವರಸಂವಾದವನೆ ಕನ್ನಡಮಾಗಿ ॥
ಪರಮಾರ್ಥವಿದು ಪರತರವೆಂದು ಪೊಗಳೆ ವಿ।
ಸ್ತರವಾಗಿ ಸಾಧಕರರಿವಂತೆ ॥ 2 ॥

ಬ್ರಹದಾರಣ್ಯಕ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮೈತ್ರೇಯಿಯ ಸಂವಾದವು ಸಂಸ್ಕೃತದಲ್ಲಿದೆ. ಅದನ್ನು ಕನ್ನಡ ಭಾಷೆಯಲ್ಲಿ ಪರತರ ಪರಮಾರ್ಥವಿದೆಂದು ನಿಜತತ್ತ್ವವಿದರು ಹೊಗಳುವಂತೆ ಮತ್ತು ಸಾಧಕರು ಅರಿವಂತೆ ವಿಸ್ತಾರವಾಗಿ ಈ ಕೃತಿ ವಿರಚಿಸುವೆನೆಂದು ನಿಜಗುಣರೆ ಹೇಳುತ್ತಾರೆ.

ಅನುಭವಗೋಚರವೆನಿಪಂತೆ ಮೋಕ್ಷಾರ್ಥಿ।
ಜನಕನುಪಮ ಪರತತ್ತ್ವವ।
ಮನದೊಲವಿಂದೆ ಪೇಳುವೆನಾತ್ಮಕೋವಿದ।
ರನುಮಾನಿಸದೆ ಮೆಚ್ಚಿತಲೆದೂಗೆ ॥ 3 ॥

ಮೋಕ್ಷಾಪೇಕ್ಷಿಗಳಿಗೆ ಅನುಭವಗೋಚರವೆನಿಪಂತೆ ಅನುಪಮ ಅದ್ವೈತ ತತ್ತ್ವವನು ಮನದ ಸಂಪ್ರೀತಿಯಿಂದ ಪೇಳುವೆನು. ಆತ್ಮಕೋವಿದರು ಅನುಮಾನಿಸದೆ, ಮೆಚ್ಚಿ ತಲೆದೂಗುವಂತೆ ಈ ಕೃತಿಯನ್ನು ವಿರಚಿಸುವೆನು.

(ಇವರು ಬರೆದ ವಿವೇಕ ಚಿಂತಾಮಣಿಯೇ ಈ ಮಾತಿಗೆ ಸಾಕ್ಷಿಯಾಗಿದೆ. ಕನ್ನಡ ಭಾಷೆಯಲ್ಲಿ ಈ ಗ್ರಂಥ ಪ್ರಪ್ರಥಮ 'ವಿಶ್ವಕೋಶ,ವೆನಿಸಿದ.)

ಏಕಾಂತದರಿವನೀ ಲೋಕಕ್ಕೆ ಸ್ವಾತ್ಮಾವ।
ಲೋಕನಕ್ಕಿದು ಮುಖ್ಯವೆನಿಪಂತೆ ॥
ಈ ಕೃತಿಯೊಳು ಪೇಳ್ವೆನಿದು ಗೌಪ್ಯತರವೆಂದು।
ಸ್ವೀಕರಿಪುದು ಮುಮುಕ್ಷುಗಳೆಲ್ಲ ॥ 4 ॥

ಇಲ್ಲಿರುವ ವಿಷಯ 'ಏಕಾಂತದ ಅರಿವು, (ಬಹಿರ್ಮುಖಿಗಳಿಗೆ ಇದು ರುಚಿಸದು) ಲೋಕದಲ್ಲಿ ಮಾನವನಾಗಿ ಹುಟ್ಟಿದ ಬಳಿಕ, ಸ್ವ ಆತ್ಮಾವಲೋಕನಕ್ಕೆ ಮುಖ್ಯವಾದದ್ದು. ಈ ವಿಷಯವನ್ನೇ ಈ ಕೃತಿಯಲ್ಲಿ ಪೇಳುವೆನು. ಸಕಲ ಮುಮುಕ್ಷುಗಳು ಇದು ಹೆಚ್ಚು ಗೌಪ್ಯವಾದ ಬೋಧೆಯೆಂದು ಸ್ವೀಕರಿಸಬೇಕು.

ಪರತತ್ತ್ವಬೋಧೆಯನುರು ಯೋಗಿಜನರೊಪ್ಪೆ।
ವಿರಚಿಸುವೆನು ಸಾರತರಮಾಗಿ ॥
ವರಮುಕ್ತಿ ಸಾಧಕರದರಿಂದಿದನೆ ನೋಡಿ।
ಹರುಷದಿಂದರಿವುದು ನಿಜವನು ॥ 5 ॥

ಯೋಗಿವರರು ಮನಮೆಚ್ಚುವಂತೆ ಪರತತ್ತ್ವ ಬೋಧೆಯನ್ನು ಸಾರವತ್ತಾಗಿ ವಿರಚಿಸುವೆನು. ಆದುದರಿಂದ ಪರಮುಕ್ತಿ ಸಾಧಕರು ಇದನ್ನೆ ನೋಡಿ ಶ್ರವಣ ಮಾಡಿ ಸಂತೋಷದಿಂದ ತಾನಾರು ಎಂಬ ನಿಜವನ್ನು ಅರಿಯಬೇಕು.

ವರವೇದದರ್ಥವನರಿದು ಮಾಡಿದ ಸುಪ್ರ।
ಕರಣ ಮನಂತಮುಂಟವರಲ್ಲಿ॥
ಪರಿಕಿಸಲಿದರಂತೆ ನಿಜವನಿತ್ತೆಪರೋಕ್ಷ।
ಕರಿಸಿದುದಿಲ್ಲವಂದೆನೆಪೇಳ್ವೆ ॥ 6 ॥

ಮುನ್ನಿನ ಮುನಿವರರು ಅರಿದುಮಾಡಿದ ಸುಪ್ರಕರಣ ಗ್ರಂಥಗಳು ಅನೇಕವಿರಬಹುದು. ಪರೀಕ್ಷಿಸಿ ನೋಡಿದರೆ, ಅವು ನಿಜವನ್ನು ಪರೋಕ್ಷವಾಗಿ ವರ್ಣಿಸುವವು. ನಾನೀ ಪ್ರಕರಣದಲ್ಲಿ ನಿಜತತ್ವವನ್ನು ಅಪರೋಕ್ಷ (ಅಂಗೈನೆಲ್ಲಿ ಸ್ಪಷ್ಟವಾಗಿ ಕಾಣುವಂತೆ) ವಾಗುವಂತೆ ವರ್ಣಿಸುವೆನು.

ಪರಮ ವಿವೇಕಿಗಳೊಲಿದೊಡಂಬಡುವಂತೆ।
ಪರತತ್ತ್ವಬೋಧೆಯೆಂಬಮೃತದ॥
ಸರಿಸುರಿವಂತೆ ಕೇಳ್ವರ ಕರ್ಣದೊಳಗಿದ।
ನೊರೆವೆ ನಾನುಪನಿಷನ್ಮತದಿಂದ ॥ 7 ॥

ಪರಮವಿವೇಕಿಗಳು ಒಲಿದು ಒಡಂಬಡುವಂತೆ, ಪರತತ್ತ್ವ ಬೋಧೆಯೆಂಬ ಅಮೃತದ ಮಳೆಹನಿಗಳು ಕೇಳುಗರ ಕರ್ಣಗಳಲ್ಲಿ ಸುರಿವಂತೆ ಉಪನಿಷತ್ ಮತಾನುಸಾರ ಒರೆವೆನು.

ಪರಮವಿರಕ್ತಂಗೆ ಪರತರ ಶಿಷ್ಯಂಗೆ।
ಪರಮಾರ್ಥವರಿವಾತ್ಮತನುಜಂಗೆ॥
ಪರಮರಹಸ್ಯದೊಳೊರೆವುದು ಕರ್ಮ ತ।
ತ್ಪರರಿಗರುಪಲಾಗದಿದನೊಮ್ಮೆ ॥ 8 ॥

ವಿವೇಕ ವಿರಕ್ತಿ ಶಮಾದಿ ಸದ್ಗುಣ ಸಂಪನ್ನರಾದ ಉತ್ತಮ ಶಿಷ್ಯರಿಗೆ ಮತ್ತು ಪರಮಾರ್ಥ ತಿಳಿಯ ಬಯಸುವ ತಮ್ಮ ಮಕ್ಕಳಿಗೆ ಈ ಅನುಭವವನ್ನು ರಹಸ್ಯವಾಗಿ ಬೋಧಿಸಬೇಕು. ಆದರೆ ಕರ್ಮದಲ್ಲಿ ತತ್ಪರರಾದ ಮಂದಮತಿಗಳಿಗೆ ಇದನ್ನು ಒಂದು ಸಲವಾದರೂ ಹೇಳಬಾರದು.

ಪರಮಾನುಭವ ಬೋಧೆಯೆನಿಪ ನಾಮವನಿಟ್ಟು।
ಹರುಷದಿಂದೀ ಪ್ರಕರಣವನು॥
ವಿರಚಿಸುವೆನು ಮೃದುಮಧುರಾರ್ಥ ಲಕ್ಷಣ।
ವೆರಸಿ ಕೇಳುವ ಸರ್ವ ಸುಜನರ್ಗೆ ॥ 9 ॥

(ನಿಜಗುಣರು ನಿರೂಪಿಸುತ್ತಾರೆ) ಈ ಗ್ರಂಥಕ್ಕೆ ಪರಮಾನುಭವ ಬೋಧೆ ಎಂದು ಹೆಸರಿಟ್ಟು ಹರ್ಷದಿಂದ ವಿರಚಿಸುವೆನು. ಮೃದು ಮಧುರವಾದ ಹಾಗೂ ಅರ್ಥ ಲಕ್ಷಣವುಳ್ಳ ಈ ಪ್ರಕರಣ ಗ್ರಂಥವು ಸಾಧಕರಿಗೆ ಉಪಯುಕ್ತವಾಗಿದೆ.

ಪದಬಂಧದೊಳ್ಪ್ರಾಸು ಮೊದಲಾದ ಲಕ್ಷಣ।
ಇದರೊಳಿಲ್ಲದೊಡೇನು ಚಲುವೆತ್ತ॥
ಸುದತಿ ರತ್ಯರ್ಥಮುಳ್ಳದರಿಂದ ಮಂಡನ।
ವದನುಳಿದಂತೆ ಮೋಹಿಸುತಿರ್ಕೆ ॥ 10 ॥

ಸಾಂಗತ್ಯ ರೂಪದಲ್ಲಿ ಬರೆದ ಈ ಕಾವ್ಯ ಗ್ರಂಥದಲ್ಲಿ ಪದ,ಬಂಧ, ಪ್ರಾಸು, ಮೊದಲಾದ ಛಂದಸ್ಸಿನ ಲಕ್ಷಣಗಳಿವೆ (ಒಂದು ವೇಳೆ) ಇವು ಇಲ್ಲದಿದ್ದರೇನಾಯಿತು ? ಚಲುವೆತ್ತಸುದತಿ (ಪತ್ನಿ) ಯ ರತಿಸುಖ ಭೋಗ ಸಮಯಕ್ಕೆ ಪತಿಯು ಅವಳ ಮೈಮೇಲಿನ ಆಭರಣಗಳನ್ನು ತೆಗೆದಿಡಲು ಹೇಳುವಂತೆ, ಓದುಗರಿಗೆ ಈ ಗ್ರಂಥವು ಕಾವ್ಯ ಲಕ್ಷಣ ರಹಿತವಾಗಿದ್ದರೂ ಉಪಯುಕ್ತವಾಗಿದೆ. ಈ ಕಾವ್ಯದಲ್ಲಿ ಎಲ್ಲ ಲಕ್ಷಣಗಳಿದ್ದರೂ ಸಹ ಸೌಜನ್ಯಕ್ಕಾಗಿ ನಿಜಗುಣರು ಇಲ್ಲವೆಂಬಂತೆ ಹೇಳುತ್ತಾರೆ.

ಎಮಗೆಮ್ಮ ಮತವೆ ಸಾಲ್ಗೆನು ತಿದನಾಲಿಸ।
ದಮಳಾತ್ಮರಿಗೆ ಲೋಕವಾರ್ತೆಯು॥
ತಮಗೇತಕೆಂದು ಕೇಳದ ಸನ್ಯಾಸಿಯ ವಿಧಿ।
ಸಮನಿಪುದು ಸರ್ವಜನಸೇವ್ಯ ॥ 11 ॥

ಕೆಲ ಜನ ಪುಣ್ಯಾತ್ಮರು ತಮ್ಮ ಮತಾನುಸಾರ ತಮ್ಮ ಧರ್ಮಾಚರಣೆಯಲ್ಲಿ ಸಂತೃಪ್ತರಾಗಿ ನಮಗೀ ವೇದಾಂತ ಗ್ರಂಥ ಆಲಿಸುವದು ಬೇಡ, ಎಂದು ಉದಾಸೀನ ಮಾಡಿದರೆ ಅವರ ಪಾಡು ಏನಾಗುವದು ಎಂದು ಕೇಳಿದರೆ, ಅದನ್ನೊಂದು ದೃಷ್ಟಾಂತ ಮುಖದಿಂದ ತಿಳಿಸುತ್ತಾರೆ ಗ್ರಂಥಕರ್ತರು.

ಹಿಂದೆ ಒಂದು ಕಾಲಕ್ಕೆ ಒಬ್ಬ ರಾಜನು ತನ್ನ ಪ್ರಜೆಗಳೆಲ್ಲರ ಶ್ರಮದಾನದಿಂದ ಊರಮಗ್ಗಲು ಒಂದು ಕೆರೆಯನ್ನು ನಿರ್ಮಿಸುವ ಯೋಜನೆ ಮಾಡಿ, ಊರಲ್ಲಿ ಡಂಗುರ ಸಾರಿದನು. ಪ್ರಜೆಗಳು ರಾಜಾಜ್ಞೆಯಂತೆ ಕೆರೆ ಕಟ್ಟುವ ಸಾರ್ವಜನಿಕ ಕಾರ್ಯದಲ್ಲಿ ಸಹಕರಿಸುತ್ತ ಅಲ್ಲಿದ್ದ ಕಲ್ಲುಮಣ್ಣುಗಳನ್ನು ಹೊತ್ತುತಂದು ದಂಡೆಗೆ ತಲುಪಿಸುತ್ತಾ ಇದ್ದರು. ಒಂದು ದಿನ ಆ ಊರಿಗೆ ಒಬ್ಬ ಸನ್ಯಾಸಿ ಬಂದ. ರಾಜದೂತರು ಅವನಿಗೂ ಅಲ್ಲಿ ನಡೆದ ಶ್ರಮದಾನದಲ್ಲಿ ಭಾಗವಹಿಸಲು ಹೇಳಿದರು, "ನಾನು ಸನ್ಯಾಸಿ, ನಿಮ್ಮ ಲೌಕಿಕ ವಾರ್ತೆ ಕಾರ್ಯಕಲಾಪವು ನನಗೆ ಬೇಡ, ಎಂದು ಹೇಳಿದನು. ರಾಜದೂತರು ಅದನ್ನು ಕೇಳದೆ, ಬಲಾತ್ಕರಿಸಿ ಅವನಿಗೆ ದಂಡಿಸಲು ಕೊನೆಗೆ ಆತನು, ಒಪ್ಪಿ ಉಳಿದ ಸಾಮಾನ್ಯ ಜನರಂತೆ

ತಾನೂ ಶ್ರಮದಾನ ಮಾಡಿದನು. ಇದು ಸನ್ಯಾಸಿಯ ವಿಧಿ (ಅಂದರೆ ಆಶ್ರಮ ಅಭಿಮಾನಿ ಸನ್ಯಾಸಿಗೆ ಬಡಿಸಿಕೊಂಡ ನಂತರ ಬುದ್ಧಿ ಬಂದಿತು.) ಸನ್ಯಾಸಿ ಎಲ್ಲರಂತೆ ತಾನು ಮಾಡುವ ಕರ್ಮದ ವಿಧಿ (ಕಟ್ಟಳೆ) ತಿಳಿದಿದ್ದರೆ ರಾಜದೂತರ ಶಿಕ್ಷೆಗೆ ಗುರಿಯಾಗುತ್ತಿರಲಿಲ್ಲ. ಇದೇ ರೀತಿ ಸುಕೃತಿಗಳಾದ ಅಮಳಾತ್ಮರು ಯಾವುದೇ ಮತ, ಜಾತಿ, ಕುಲ, ವರ್ಣ, ಆಶ್ರಮದವರು ಇರಲಿ, ಅವರೆಲ್ಲರಿಗೆ ಈ ಪ್ರಕರಣ ಗ್ರಂಥದ ಪಾರಮಾರ್ಥಿಕ ವಿಷಯವು ಸೇವಿಸಲಿಕ್ಕೆ ಯೋಗ್ಯವಾಗಿದೆ, ಒಂದುವೇಳೆ ನಮ್ಮ ಮತ, ನಮ್ಮ ಧರ್ಮಾಚರಣೆ ಸಾಕು. ಈ ಬೋಧೆಯು ನಮಗೆ ಬೇಡ, ಎಂದು ಉದಾಸೀನ ಮಾಡಿದರೆ ಅವರು ಅನಂತಕಾಲ ಜನನ ಮರಣ ರೂಪ ಭವಬಾಧೆ ಅನುಭವಿಸಬೇಕಾಗುವದು. ಆದ್ದರಿಂದ ಸಾಧಕರು ಈಗಳೇ ಸದ್ಗುರು ಮುಖದಿಂದ ಈ ಪ್ರಕರಣ ಬೋಧೆ ಸೇವಿಸಿ ಮುಕ್ತರಾಗಬೇಕು ||11||

ಇದನೊಮ್ಮೆ ಕೇಳಿ ತಿಳಿದೊಡವನೀ ಲೋಕ|
ದುದಯಾದಿ ಬಳಿಕಿಂದು ಪರಿಯಂತ ||
ಒದವಿ ತಾನೆಸಗಿದಖಿಳ ಪುಣ್ಯತತಿ ಫಲಿ|
ಸಿದುದಿಂತು ಪೆರತಿಲ್ಲವೆನೆ ಪೇಳ್ವೆ|| 12 ||

ಸಾಧಕನು ಇದನ್ನೊಮ್ಮೆ ಕೇಳಿ, ತಿಳಿದು ಮುಕ್ತನಾಗಿ ಉಳಿಯಲು ಆತನು ಎಷ್ಟು ನಿಷ್ಕಾಮ ಪುಣ್ಯ ಮಾಡಿರಬೇಕು, ಎಂಬುದನ್ನು ಕೊನೆಗೆ ನಿರ್ಣಯಿಸುತ್ತಾರೆ ನಿಜಗುಣರು. ಈ ಭೂಲೋಕ ಎಂದು ಹುಟ್ಟಿದೆ ಅಂದಿನಿಂದ ನೀನು ಹುಟ್ಟುತ್ತ ಶುಭ ಕರ್ಮಗಳನ್ನು ಮಾಡುತ್ತ(ಜೀವನೆ) ನೀನು ಬಂದಿರುವಿ. ನಿನ್ನ ಕರ್ಮವು ಸಕಾಮವಿದ್ದರೆ ಅದರ ಫಲವಾದ ಸುಖವನ್ನು ಅನುಭವಿಸುತ್ತ ಬಂದುದಾಯಿತು. ನೀನು ಕರ್ಮ ಫಲ ಇಚ್ಛಿಸದೆ, ನಿನ್ನ ಅಂತಃಕರಣ ಶುದ್ಧಿಗಾಗಿ ನಿಷ್ಕಾಮ ಕರ್ಮವೆಸಗುತ್ತ ಈ ಲೋಕದಲ್ಲಿರಲು ನಿನ್ನ ನಿಷ್ಕಾಮ ಪುಣ್ಯವು ಈಶ್ವರನ ಬ್ಯಾಂಕಿನಲ್ಲಿ ಜಮಾ ಆಗುತ್ತ ಬಂದಿದೆ. ಅದೀಗ ಬೆಳೆದು ಪರಿಪಕ್ವವಾಗಿದ್ದರೆ (ಮ್ಯಾಚುಅರ) ನಿನಗೆ ಈಶ ಕೃಪೆಯಾಗುವದು. ಈಶ್ವರನು ಶ್ರೀಗುರುವರನನ್ನು ತೋರಿಸುವನು, ನಿಜಗುಣರು ಬರೆದ ಪ್ರಕರಣಗ್ರಂಥಗಳನ್ನು ತನಗೆ ತಿಳಿಯುವಂತೆ ಹೇಳುವ ವಿಹಿತಗುರು ದೊರೆಯುವನು. ಆತ ನಿನಗೆ ಪರಮ ಪುರುಷಾರ್ಥವಾದ ಮೋಕ್ಷದಯಪಾಲಿಸುವನು. ನೀನು ಧನ್ಯನಾಗುವೆ. ಇದೆಲ್ಲವು ನಿನ್ನ ನಿಷ್ಕಾಮ ಕರ್ಮದ ಫಲವೆಂದು ತಿಳಿ. ಇದಕ್ಕೆ ಸಮನಾದ ಬೇರೊಂದು ಗತಿ ಇಲ್ಲೆಂದು ನೀನು ನಂಬು.

— ಇತಿ ಪ್ರಕರಣ ಸ್ಥಿತಿ ನಿರೂಪಣೆ—

### 3ನೇ ಸೂತ್ರ

ವರಮುನಿಯಾಜ್ಞವಲ್ಕ್ಯಯನಿಂತು ಮೈತ್ರೇಯಿ ।
ಪರತತ್ತ್ವವನು ಬೆಸಗೊಂಡಳು ॥

ಮೈತ್ರೇಯಿ ಮುನಿಶ್ರೇಷ್ಠನಾದ ಯಾಜ್ಞವಲ್ಕ್ಯರಿಗೆ ಕೆಳಗಿನಂತೆ ನಿಜತತ್ವದ ವಿಚಾರ ಕುರಿತು ಪ್ರಶ್ನೆ ಕೇಳಿದಳು.

ಶ್ರೀಮದಾಚಾರ್ಯ ಶಿಖಾಮಣಿ ಪರಮಾತ್ಮ।
ರಾಮನಖಿಳ ವಿದನುರು ಪುಣ್ಯ॥
ಧಾಮನುನ್ನತ ಸುಖನಿಧಿ ಯಾಜ್ಞವಲ್ಕ್ಯದ।
ಯಾಮೂರ್ತಿ ಸುಗುಣಸಂಪನ್ನನು ॥ 1 ॥

ಶ್ರೀಮತ್ ಎಂದರೆ ಐಶ್ವರ್ಯ, ಧರ್ಮ, ತೇಜ, ಕೀರ್ತಿ, ಜ್ಞಾನ, ಬಲ ಹಾಗೂ ಶಕ್ತಿ ಎಂಬಾರು ಗುಣಗಳಿಂದ ಮೆರೆವ, ಆಚಾರ್ಯ ಕುಲಕೆ ಶಿಖಾಮಣಿಯಂತಿರುವ ಪರಮ ಆತ್ಮಾರಾಮನೆ ತಾನಾದ ಸಕಲ ತತ್ತ್ವಬಲ್ಲ ಶ್ರೋತ್ರಿಯನು, ವರಪುಣ್ಯಮಯ ಶರೀರಿ, ಉನ್ನತ ಸುಖಶರಧಿಯಾಗಿ, ದಯಾಮೂರ್ತಿ ಮತ್ತು ಸುಗುಣ ಸಂಪನ್ನನಾಗಿ ಮೆರೆವ ಶ್ರೀ ಯಾಜ್ಞವಲ್ಕ್ಯ ಮುನಿವರನು.

ಮನದೊಲವಿಂದೆ ತನ್ನಿನಿಯೆ ಮೈತ್ರೇಯಿಯೋ।
ಆನಿಸಗಲದೆ ಕೂಡಿಸುಖಿಮಿರೆ॥
ವನಜಾಕ್ಷಿಯೊಂದು ದಿನದೊಳಿನಿದಾಗಲಾ।
ಮುನಿಪತಿಯನು ಬೆಸಗೊಂಡಳು ॥ 2 ॥

ತನ್ನ ಪತಿಯಾದ ಮೈತ್ರೇಯಿಯಲ್ಲಿ ಅತ್ಯಂತ ಅನುರಾಗವುಳ್ಳವನಾಗಿ ಅವಳೊಡನೆ ಕಿಂಚಿತ್ತು ಆಗಲದೆ ಯಾಜ್ಞವಲ್ಕ್ಯ ಮುನಿಗಳಿದ್ದರು. ಒಂದು ದಿನ ಕಮಲಮುಖಿ ಮೈತ್ರೇಯಿ ಪ್ರೀತಿಯಿಂದ ಮೃದು ಮಧುರ ಮಾತುಗಳಿಂದ ಮುನಿಪತಿಗೆ (ಕೆಳಗಿನಂತೆ) ಪ್ರಶ್ನೆ ಮಾಡಿದಳು.

ವನಿತೆ ಮೈತ್ರೇಯಿ ತನ್ನಿನಯನಂ ಭಕ್ತಿ ಭಾ।
ವನೆಯಳವಟ್ಟು ವಂದಿಸಿ ತನ್ನ॥
ಮನದನುರಾಗ ವಲರುತಿರೆ ಬೆಸಗೊಂಡ।
ಳನುಪಮಾದ್ವೈತ ವಿಷಯವನು ॥ 3 ॥

ವನಿತೆ ಮೈತ್ರೇಯಿ ತನ್ನ ಪತಿಗೆ ಭಕ್ತಿಪುರಸ್ಸರವಾಗಿ ವಂದಿಸಿ ತನ್ನ ಮನದೊಲವಿನ ಪುಷ್ಪ ಅರಳುತ್ತಿರಲು ನಿರುಪಮವಾದ ಅದ್ವೈತ ತತ್ತ್ವವನ್ನು ಕೇಳಿಕೊಂಡಳು.

ಪರಮವಿರಕ್ತೆ ತಾನುರುಭಕ್ತಿಭಾವಮೊ।
ಪ್ಪಿರೆ ಪರಬ್ರಹ್ಮ ವಿಷಯವನು
ಸರಸಿಜ ನೇತ್ರ ಮೈತ್ರೇಯಿ ಮೆಲ್ನುಡಿ ಮನೋ।
ಹರಮಾಗೆ ಬೆಸಗೊಂಡಳನಿಯನ ॥ 4 ॥

ಪರಮ ವಿರಕ್ತಳಾದ ಕಮಲದಂತೆ ನೇತ್ರವುಳ್ಳ ಮೈತ್ರೇಯಿ ಅತ್ಯಂತ ಭಕ್ತಿ ಭಾವನೆಯೊಡಗೂಡಿ, ವಿನಯದಿಂದ ಮೆಲುನುಡಿಯಿಂದ ಪರಬ್ರಹ್ಮ ವಿಷಯವನ್ನು ಮುನಿಪತಿಗೆ ಮನೋಹರವಾಗಿ ಬೆಸಗೊಂಡಳು.

ಒಂದು ದುಃಖದೊಳು ತಾನೊಂದದೆ ಪರಿಪೂರ್ಣಾ।
ನಂದರೂಪಿಂದೆ ಸಂತತಮಿರ್ಪ॥
ಅಂದಕುಪಾಯವಿದೆಂದೊಲವಿಂದೆ ನೀ।
ನಿಂದೆನಗರುಪು ಸನ್ಮುನಿಮುಖ್ಯ ॥ 5 ॥

ಸನ್ಮುನಿ ಶ್ರೇಷ್ಠನೆ, ತನಗೆ ಕಿಂಚಿತ್ತಾದರೂ ದುಃಖವಾಗದೆ, ತಾನು ಪರಿಪೂರ್ಣ ಆನಂದ ಸ್ವರೂಪಳಾಗಿ ಸಂತತವಾಗಿ ಇರಲಿಕ್ಕೆ ನಿಶ್ಚಯವಾಗಿ ಇದೇ ಉಪಾಯವೆಂದು ನೀನು ಮನದೊಲವಿಂದೆ ನನಗೆ ತಿಳಿಸು.

ಸ್ಮೃತಿ ಮಾತ್ರದಿಂದೆ ಸಂಸೃತಿ ಬಂಧವಳಿದು ಸ।
ನ್ನುತನಿಜಸುಖದೊಳಾನಿರುತಿರ್ಪ ॥
ಹಿತಕಿದೇ ಮತವನ್ಯವಿಲ್ಲವೆಂದೆನಿಪ ಸ।
ದ್ಗತಿಯನೆ ಪೇಳೆನಗಮಳಾತ್ಮ। ॥ 6 ॥

ನಿರ್ಮಲಾತ್ಮನೇ, ಸ್ಮರಣ ಮಾತ್ರದಿಂದ ಸಂಸಾರದ ಬಂಧನಾಶವಾಗಬೇಕು ಮತ್ತು ಸತ್ಪುರುಷರು ಹೊಗಳುವ ನಿಜಸುಖದಲ್ಲಿ ನಾನಿರಬೇಕು. ನನ್ನ ಇಹಪರ ಹಿತಕ್ಕೆ ನೀವು ನಿರ್ದೇಶಿಸುವ (ಟಿಪ್ಪಣಿ :– ನಿರಾಕೃತ್ಯ ತಮೋಭಾಗಂ ಸಂಸಾರಸ್ಯ ಪ್ರವರ್ತಕಂ। ನಿರ್ದಿಶ್ಯತೇ ತು ಯದ್ಜ್ಞಾನಂ ಸ ನಿರ್ದೇಶ ಇತಿ ಸ್ಮೃತಃ॥ ಸಂಸಾರಕ್ಕೆ ಪ್ರೇರಕವಾದ ತಾಮಸ ಭಾಗವನ್ನು ನಿರಾಕರಿಸಲು ಯಾವ ಜ್ಞಾನವು ಉಪದೇಶಿಸಲ್ಪಡುವದೋ ಅದು ನಿರ್ದೇಶ.) ದಾರಿ ಅದೊಂದೆ ನಿಶ್ಚಿತವಾಗಿ ನೇರವಾಗಿ ಇರಬೇಕು. ಅದನುಳಿದು ಇನ್ನೊಂದು ಪಥವಿರಬಾರದು. ಇಂತಪ್ಪ ಸದ್ಗತಿಯನ್ನು ನನಗೆ ಕರುಣಿಸಿರಿ.

ವರಮುನಿಪತಿ ನಿನ್ನ ಚರಣಪಂಕರುಹಕ್ಕೆ।
ಶರಣೆಂಬುದಲ್ಲದೆ ಪೆರತೇನು॥
ಪರಿಕಿಸಲರಿಯೆ ನಾನದರಿಂದೆ ನೀನತಿ।
ಕರುಣದಿಂದೊರೆದು ರಕ್ಷಿಪುದೆನ್ನ॥ 7 ॥

ಮುನೀಶ್ವರನೇ ಎನ್ನ ಮಂಗಲಸೂತ್ರನೇ ನಿನ್ನ ಪಾದಕಮಲಗಳಿಗೆ ಶರಣು ಶರಣೆಂಬೆ, ಇದು ಭಕ್ತಿ ಪಥ, ವಿಚಾರಿಸಲಾಗಿ ಇನ್ನೊಂದು ದಾರಿ ಅಬಲೆಯಾಗಿರುವ ನಾನರಿಯೆ ಆದುದರಿಂದ ನೀನು ಅತಿ ಕರುಣೆಯಿಂದ ಸರಳ, ಸಮೀಪ ಹಾಗೂ ನೇರವಾದ ಸದ್ಗತಿಯ ದಾರಿ ತೋರಿಸಿ ನನ್ನನ್ನು ರಕ್ಷಿಸು.

ಎನಿತು ತತ್ತ್ವಾರ್ಥವನೆನಗೆ ಬೋಧಿಸಬೇಹು।
ದನಿತೆಲ್ಲವನು ಸವಿಸ್ತರವಾಗಿ॥
ಇನಿತು ಸಂದೇಗಮಿಲ್ಲದಂತಲಸದೆ ಪೇಳು।
ಮುನಿಮುಖ್ಯ ತಿಳಿವಂತೆ ಕೃಪೆಯಿಂದ ॥ 8 ॥

ಮುನಿವರನೇ ಎಷ್ಟೊಂದು ತತ್ತ್ವಾರ್ಥಗಳನ್ನು ನನ್ನ ನಿಃಶ್ರೇಯಸ್ಸಿಗೆ ಬೋಧಿಸಬೇಕು. ಅದನ್ನೆಲ್ಲ ನೀನೇ ವಿಚಾರಿಸಿ ನನಗಾವ ಸಂಶಯಬಾರದಂತೆ ನನಗೆ ತಿಳಿಯುವಂತೆ ಮತ್ತು ಬೇಸರ ಪಡದೆ ಕೃಪೆಯಿಂದ ಪೇಳಿರಿ.

– ಇತಿ ಪ್ರಶ್ನೆ ನಿರೂಪಣೆ –

## 4ನೇ ಸೂತ್ರ

ಮತಿಯುಂಟೆ ಜಡರಿಗದ್ವೈತವನರಿಯಲ್ಕೆ ।
ಸತಿ ನೀನೆ ಸುಕೃತಿ ಪೇಳ್ವೆನು ಕೇಳು ॥

ಪ್ರಿಯ ಸತಿ, (ನೀನು ಕೇಳಿದ) ಅದ್ವೈತ ತತ್ತ್ವವನ್ನು ಅರಿಯಲಿಕ್ಕೆ ಜಡರಿಗೆ ಅಂದರೆ ಹೊರಗಿನ ವಿಷಯಾಳಿಗಳನ್ನೆ ಕಾಮಿಸಿ, ಭೋಗಿಸಿ ಶಕ್ತಿಹೀನರಾದವರಿಗೆ ತನ್ನ ತಾನು ಅರಿದು ಮುಕ್ತನಾಗಬೇಕೆಂಬ ಸುಮನ ಅಥವಾ ಸುಮತಿ ಇರುವದಿಲ್ಲ. ನೀನು ಮಾತ್ರ ಸೂಕ್ಷ್ಮಮತಿಯುಳ್ಳ ಪುಣ್ಯಶಾಲಿ ಇರುವೆ. ಆದ್ದರಿಂದ ನಿನಗೆ ಅಕಲಂಕವಾದ ಅದ್ವೈತವನು ಹೇಳುವೆ. ನೀನು ಒಮ್ಮನದಿಂದ ಕೇಳು.

ಎಂದು ಬಿನ್ನೈಸಿ ವಂದಿಸಿ ಭಕ್ತಿರಸತೀವಿ । ದಿಂದುನಿಭಾಸ್ಯೆ ಮೈತ್ರೇಯಿಗೆ ॥
ಮುಂದುವರಿವ ಮೋಹದಿಂದಲಾ ಮುನಿಪತಿ। ಯೆಂದನಿಂತೆಂದು ಸನ್ಮುದದಿಂದ॥ 1 ॥

(ಮೇಲಿನಂತೆ) ಚಂದ್ರಮುಖಿ ಮೈತ್ರೇಯಿ ಬಿನ್ನೈಸಿ, ವಂದಿಸಿ, ಭಕ್ತಿರಸದುಂಬಿ ಬೇಡಿಕೊಳ್ಳಲು, ಮುನಿಪತಿಯು ಮೋಹದಿಂದ ಮುಂದುವರಿವ ಪ್ರೇಮದಿಂದ ಮುಂದೆ ಹೇಳುವಂತೆ ಮಡದಿಯ ಪ್ರಶ್ನೆಗಳಿಗೆ ಉತ್ತರಿಸಿದನು.

ಸುದತಿ ಕೇಳೀ ವಿಶ್ವದೊಳಗಿಂತು ನಿನ್ನಂತೆ।
ಪದಪಿಂದೆ ಕೇಳ್ದವರಾರುಂಟು॥
ಸದಮಳಾನಂದಾತ್ಮಪದ ಮುಕ್ತಿ ಪುಣ್ಯವಿ।
ಲ್ಲದವರ್ಗದೆಂತು ಪೇಳ್ದೊರಕೊಳ್ಗು॥ 2 ॥

ಸುದತಿ ನಲ್ಲೆ ನೀನು ಕೇಳು, ಈ ಜಗತ್ತಿನಲ್ಲಿ ನಿನ್ನಂತೆ ಪ್ರೀತಿಯಿಂದ ಅದ್ವೈತವನ್ನು ಕೇಳಿದವರು ಯಾರುಂಟು ? ( ಇಲ್ಲೆಂಬ ಭಾವ) ಸದಮಳಾನಂದ ಆತ್ಮ ಪದವೆನಿಪ ಮುಕುತಿ ಸುಖವು ಪುಣ್ಯವಿಲ್ಲದ ಪಾಮರರಿಗೆ (ಪುಣ್ಯ–ಫಲಮಿಚ್ಛಂತಿ ನರಾಃ ಪಾಪಂ ಕುರ್ವಂತಿ–ಶ್ರುತಿ) ಎಂತು ದೊರಕೊಂಬುದು (ದೊರಕೊಳ್ಳದೆಂಬ ಭಾವ).

ಅದರಿಂದೆ ಧನ್ಯೆ ನೀನದರಿಂ ಕೃಥಾರ್ಥೆ ನೀ।
ನದರಿಂದೆ ನೀನಿಲ್ಲಿ ಕೃತಕೃತ್ಯೆ॥
ಅದರಿಂದೆ ನಿನಗೆ ಪೇಳ್ವೆನು ಕೇಳು ಮೈತ್ರೇಯಿ।
ಪದಪಿಂದದ್ವೈತ ವಿಷಯವನು ॥ 3 ॥

ಮೈತ್ರೇಯಿ ನೀನು ಧನ್ಯಳು ನೀನು ಕೃತಕೃತ್ಯಳು ಅದರಿಂದೆ ನಿನಗೆ ಅದ್ವೈತ ವಿಷಯವನ್ನು ಪ್ರೀತಿಯಿಂದ ಪೇಳುವೆನು ಕೇಳು.

ನೆರೆ ಕೇಳು ಕೇಳ್ದುದನರಿಯರಿದುದನೊಮ್ಮೆ।
ಮರೆಯದಿರು ಗುರುಪೇಳ್ದ ತೆರದೊಳು।
ತೊರೆ ವಿಷಯವನು ತೊರೆದು ನಿರ್ವಿಷಯದೊಳು।
ಕರಿಗೊಂಡುನಿಲೆ ನೀನೆ ಸುಖಿಯಪ್ಪೆ॥ 4 ॥

ಚನ್ನಾಗಿ ಕೇಳು, ಕೇಳಿದುದನ್ನು ಮನನ ಮಾಡು. ಮನನ ಮಾಡಿದ ಅರಿವನ್ನೆ ನಿದಿಧ್ಯಾಸನಮಾಡು (ಶ್ರೋತವ್ಯೋ, ಮಂತವ್ಯೋ ನಿದಿಧ್ಯಾಸಿತವ್ಯೋಃ। ಬ್ರಹದಾರಣ್ಯಕ. ಉಪ.). ಶ್ರೀ ಗುರು ಹೇಳಿದಂತೆ ನೀನರಿ. ಅರಿದುದನ್ನು ಎಂದೂ ಮರೆಯದಿರು. ವಿಷದಂತೆ ಇರುವ (ವಿಷಯಾನ್ ವಿಷವತ್ ತ್ಯಜ) ವಿಷಯಗಳನ್ನು ಬಿಟ್ಟು ಬಿಡು. ನಾನು ಬಿಟ್ಟೆ ನಾನು ತ್ಯಾಗಿ ಎಂಬ ಅಹಂ ಭಾವವನ್ನು ತ್ಯಜಿಸು. ವಿಷಯಾತೀತವಾದ ಸುಜ್ಞಾನದಲ್ಲಿ ನಿನ್ನ ಅಜಡ ಬುದ್ಧಿಯು ಕರಿಗೊಂಡು ನಿಲ್ಲಲಿ. ನೀನು ನಿನ್ನಲ್ಲಿ ನಿನ್ನಂತೆ ಇರು. ನಿನ್ನ ಅರಿವು ಇರುವು ಸುಖರೂಪವಿದೆ.

– ಇತಿ ಮುನಿವರನ ಸುಬೋಧೆ ನಿರೂಪಣೆ –

## 5ನೇ ಸೂತ್ರ

ಪರದೊಳಾಕಸ್ಮಿಕವಾದನಾಕಲ್ಪಿತ ।
ಪುರುಷನಖಿಳಭಾವದೊಡಗೂಡಿ ॥

ಏಕಮೇವಾದ್ವಿತೀಯ ಬ್ರಹ್ಮದಲ್ಲಿ ಆಕಸ್ಮಿಕವಾಗಿ (ಕಾರಣವಿಲ್ಲದೆ) ಕೆಳಗೆ ಹೇಳುವ ಹತ್ತು ಭಾವನೆಗಳಿಂದ ಒಡಗೂಡಿದ ಕಲ್ಪಿತ ಪುರುಷನು ತೋರಿದನು.

ಏನೊಂದು ತೋರದಜ್ಞಾನವಲ್ಲದ ಸಚ್ಚಿ।
ದಾನಂದಾದ್ವಯ ನಿತ್ಯ ಪರಿಪೂರ್ಣ॥
ಮಾನವಿದೂರನಕಲ್ಪಿತನವಿಕೃತಿ।
ತಾನೇಕನಚಲನಾ ಪರಮಾತ್ಮ॥ 1 ॥

ಪರಮಾತ್ಮನ ಲಕ್ಷಣ :– ಏನೊಂದಾಗನು, ಏನೊಂದು ತೋರನು, ಅಜ್ಞಾನವಲ್ಲದ ಸಚ್ಚಿದಾನಂದ ಅದ್ವಯ, ನಿತ್ಯ ಪರಿಪೂರ್ಣನು. ಪ್ರತ್ಯಕ್ಷ, ಅನುಮಾನಾದಿ

ಪ್ರಮಾನಗಳಿಗೆ ಅತೀತನು. ಕಲ್ಪನಾ ರಹಿತನು. ವಿಕಾರವಿಲ್ಲದವನು, ಏಕನು, ಅಚಲನಾ ಪರಮಾತ್ಮನು ಸಕಲ ಜೀವಿಗಳಲ್ಲಿರುವನು.

ಅಲ್ಲಿ ನಿಮಿತ್ತಮೊಂದಿಲ್ಲದೆ ಸುಖಸುಪ್ತ।
ನಲ್ಲಿ ಕನಸಿನ ಜೀವತ್ವವು॥
ನಲ್ಲಳೆ ಪರಿತೋರ್ಪುದಂತೆ ಪರಬ್ರಹ್ಮ।
ದಲ್ಲಿ ಕಲ್ಪಿತನಾದ ನೋರ್ವನು ॥ 2 ॥

ಆ ಪರಮಾತ್ಮನಲ್ಲಿ ಯಾವ ನಿಮಿತ್ತವಿಲ್ಲದೆ ಸುಖವಾಗಿ ಮಲಗಿದವನಲ್ಲಿ ಕನಸಿನ ಪುರುಷ ಮತ್ತು ಅವನ ಪ್ರಪಂಚ ತೋರಿದಂತೆ, ನಲ್ಮೆಯ ಸತಿ ಕೇಳು, ಪರಬ್ರಹ್ಮನಿಗೆ ಅಭಿನ್ನನಾದ ಪ್ರತ್ಯಗಾತ್ಮನಲ್ಲಿ ಕಲ್ಪಿತಪುರುಷನು ಜನಿಸಿದನು.

ಕಾಂತೆ ಕಲ್ಪಿತ ಜೀವನಿಂತಾತ್ಮಪದದೊಳೋ।
ರಂತೆ ತೋರಿದ ನನ್ಯವಿಲ್ಲೆಂದು॥
ಭ್ರಾಂತಿರಭ್ರಾಂತಪೂರ್ವಕಮೆಂಬ ವಚನದಿಂ।
ದಂತಿಳಿ ಸತ್ಯಾನುಭವವಿದು ॥ 3 ॥

ಕಾಂತೆ (ಮೈತ್ರೇಯಿ), ಕಲ್ಪಿತ ಜೀವನು ಆತ್ಮಪದದಲ್ಲಿ (ತನ್ನಲ್ಲಿ) ರಂಜನವಾಗಿ ತೋರುವನು. ಆದರೆ ಅವನು ಆಧಾರವಾದ ಪರಮಾತ್ಮನಿಗೆ ಅನ್ಯನಲ್ಲ. ನಿರ್ವಿಕಲ್ಪ ಭ್ರಾಂತಿರಹಿತ ಪರಮಾತ್ಮನ ಆಧಾರದ ಮೇಲೆ ತೋರುವ ಕಲ್ಪಿತ ಪುರುಷನು ಪರವಸ್ತುವಿಗೆ ಯಾವ ಹಾನಿ ಮಾಡನು !ಇದು (ವೇದೋಕ್ತ) ಸತ್ಯದ ಅನುಭಾವ. (ಟಿಪ್ಪಣಿ)

ಆ ಕನಸಿನ ಜೀವನೆಂತು ತನ್ನಿಂತಾನ।
ನೇಕ ವಿಕೃತಿಯೊಳೊಂದಿದ ನಿಂತು॥
ರಾಕೇಂದುಮುಖಿ ನೋಡು ಕಲ್ಪಿತಪುರುಷನೆ।
ಸ್ವೀಕರಿಸಿದನೀ ಭಾವನೆಗಳ ॥ 4 ॥

ಹುಣ್ಣಿವೆ ಚಂದ್ರನಂತೆ ಮುಖವುಳ್ಳವಳೇ, ಕನಸಿನ ಜೀವನು ಯಾವ ರೀತಿ ತನ್ನಿಂದ ತಾನೆ ಸ್ವಪ್ರಪಂಚ ರಚಿಸುತ್ತ ಹೇಗೆ ಅನೇಕ ವಿಕಾರಹೊಂದುವನೊ ಅದೇ ರೀತಿ ಕಲ್ಪಿತ ಪುರುಷನು (ಮುಂದೆ ಹೇಳುವ) ಹತ್ತು ಪ್ರಕಾರದ ಭಾವನೆ(ಬಗೆ)ಗಳನ್ನು ತಾನೇ ಸ್ವೀಕರಿಸಿದನು.

[ ಟಿಪ್ಪಣಿ :– "ಭ್ರಾಂತಿರಭಾಂತ ಪೂರ್ವಕ" ವಚನದ ಅರ್ಥ– ಅಧಿಷ್ಠಾನ ವಸ್ತುವಿನಲ್ಲಿ ಯಾವ ಕಾರಣವಿಲ್ಲದೆ ಹಗ್ಗದಲ್ಲಿ ಹಾವು ತೋರಿದಂತೆ ಅಧಿಷ್ಠಾನದಲ್ಲಿ ಭ್ರಾಂತಿಯೊಡಗೂಡಿ (ಅಧ್ಯಸ್ತ) ವಸ್ತು ತೋರಿ ಅಡಗುವದು. ]

ಪರಿಕಿಸು ನೀರೆ ಕಲ್ಪಿತನೆ ಯಹಂಭಾವ।
ಪರನಜ್ಞಭಾವ ಸಹಿತನೆಂದು ॥
ಸರಸಿದಳನೇತ್ರೆ ಕೇಳಾ ಪ್ರಕೃತಿ ಭಾವ।
ಧರನಿದಂಭಾವತ್ರಿತಯ ದರುಶಿ ॥ 5 ॥

ಸತಿ ಪರಿಕಿಸು, ಕಲ್ಪಿತ ಭಾವಗಳನ್ನು (1) ಅಹಂಭಾವಪರನು (2) ಅಜ್ಞಭಾವ ಸಹಿತನು (3) ಪ್ರಕೃತಿಭಾವಧರನು (4) ಇದಂ ಭಾವತ್ರಿತಯದರ್ಶಿ.

ವಿದ್ಯಾರೂಪನು ತಾನವಿದ್ಯಾತ್ಮಕನು ವಿದ್ಯಾ।
ವಿದ್ಯಾಮಯನು ತ್ರಿವಿಕೃತಿಗನು ॥
ಹೃದ್ಯೆ ಕೇಳೀ ಜಗದ್ವೀಜನು ಬಳಿಕ ಬೋ।
ಧಾದ್ಯುತಿಯೆನಿಸುವನವನಿಂತು ॥ 6 ॥

(5) ವಿದ್ಯಾರೂಪನು (6) ಅವಿದ್ಯಾತ್ಮಕನು (7) ವಿದ್ಯಾವಿದ್ಯಾಮಯನು (8) ತ್ರಿವಿಕೃತಿಗನು (9) ಜಗದ್ಭೀಜನು ಮತ್ತು(10) ಬೋಧಾದ್ಯುತಿ ಇಂತು ತೋರುವನು.

ಸ್ವಗತಾದಿ ಭೇದವಿಲ್ಲದ ಪರಬ್ರಹ್ಮದೊ। ಳೊಗೆದಿಂತು ತೋರ್ಪನೀನಾನೆಂಬ।
ಬಗೆಯನೆ ತೋರಿ ತೊಡೆಯ ಕಲ್ಪಿತನನಿಲ್ಲಿ। ನೆಗಳಿ ಪೇಳಿದೆನ್ನೆಸೆ ಪೆರತುಂಟೆ ॥ 7 ॥

ಸ್ವಗತ, ಸಜಾತಿ, ವಿಜಾತಿ ಭೇದವಿಲ್ಲದ ಪರಬ್ರಹ್ಮನಲ್ಲಿ ಇಂತು ಕಲ್ಪಿತನಾಗಿ ನಾನು, ನೀನು ಅದಿದೆಂದು ಹಲವು ಬಗೆಯಿಂದ ತೋರುವ ಕಲ್ಪಿತ (ಇಲ್ಲದ) ಜೀವನನ್ನು ಅಧ್ಯಾರೋಪ (ಟಿ)ಮಾಡಿ ಬಳಿಕ ಅಪವಾದದಿಂದ ತೊಡೆದು ಹಾಕುವೆನು. ಮುಮುಕ್ಷುಗಳ ಬೋಧನೆಗಾಗಿ ಈ ಪ್ರಕ್ರಿಯೆ ಕಲ್ಪಿಸಿ (ನೆಗಳಿ) ಪೇಳುವೆನು ನಿಜ ಹೇಳಬೇಕೆಂದರೆ ತಾನು ಪರಮಾತ್ಮನಿಗೆ ಬೇರೆಯಿಲ್ಲ.

[ ಟಿಪ್ಪಣಿ:– ಕಲ್ಪಿತವಾದ ಅಧ್ಯಾರೋಪ ಅಪವಾದ ವಿವೇಕ:– ಇರುವ ಹಗ್ಗ ಮತ್ತು ಶುಕ್ತಿಯಲ್ಲಿ ಕ್ರಮದಿಂದ ಇಲ್ಲದ ಹಾವು, ರಜತ (ಬೆಳ್ಳಿ) ಇವನ್ನು ಕಲ್ಪಿಸುವಂತೆ, ಸದ್ರೂಪ ಬ್ರಹ್ಮದಲ್ಲಿ ಇಲ್ಲದ ಮಾಯಾ ಪ್ರಪಂಚದ ಕಲ್ಪನೆಯೆ ಅಧ್ಯಾರೋಪವೆನಿಸುವದು. ಬಳಿಕ ಹಾವು ಅಲ್ಲ ಹಗ್ಗವೇ ಇದು. ಬೆಳ್ಳಿಯಲ್ಲ ಶುಕ್ತಿಯೇ (ಕಪ್ಪೆಶಿಂಪು) ಎಂಬಂತೆ ವಿಚಾರಮುಖದಿಂದ ಪ್ರಪಂಚವೆಲ್ಲ ಮಿಥ್ಯೆ, ಬ್ರಹ್ಮವೇ ಸತ್ಯ ಎಂಬುದೆ ಅಪವಾದವು. ಈ ಪದ್ಯದಲ್ಲಿ ಕಲ್ಪಿತ ಪುರುಷನನ್ನು ಪರಮಾತ್ಮನಲ್ಲಿ ಆರೋಪ ಮಾಡಿದೆ. ]

ಅಧಿಷ್ಠಾನ :– ಭ್ರಾಂತಿಕಾಲದಲ್ಲಿ ಯಾವುದರ ಪ್ರತೀತಿ ಆಗಲಿಲ್ಲವೋ ಮತ್ತು ಅದರ ಪ್ರತೀತಿಯಿಂದ ಭ್ರಾಂತಿಯ ನಿವೃತ್ತಿಯಾಗುವದೊ ಅದು ಅಧಿಷ್ಠಾನ.

ಅಧ್ಯಸ್ತ:– ಭ್ರಾಂತಿಕಾಲದಲ್ಲಿ ಯಾವುದು ತೋರುವುದೋ ಮತ್ತು ಅಧಿಷ್ಠಾನದ ಜ್ಞಾನ ಕಾಲದಲ್ಲಿ ಯಾವುದು ತೋರುವದಿಲ್ಲವೋ ಅದು ಅಧ್ಯಸ್ತ

– ಇತಿ ಕಲ್ಪಿತಪುರುಷನ ಉತ್ಪತ್ತಿ ನಿರೂಪಣೆ –

## 6ನೇ ಸೂತ್ರ

**ಪೇಳುವೆನಾ ದಶಭಾವಲಕ್ಷಣವನು ।**
**ಕೇಳಿ ನೀನರಿವುದಿಂತಿನಿಯಳೆ ॥**

ಆ ಕಲ್ಪಿತಪುರುಷನ ದಶಭಾವಗಳ ಲಕ್ಷಣಗಳನ್ನು ನಾನು (ನಿಜಗುಣ) ಹೇಳುವೆನು. ನೀನು ಹೇ ಸತಿಯಳೇ, ಕೇಳಿ ತಿಳಿಯಬೇಕು.

**ತನು ಮಾನಸಾದಿಗಳೆನಿಪಲ್ಲಿ ಪರತತ್ತ್ವ।**
**ದನುಭೂತಿಯೊಳು ನಾನೆಂದಲ್ಲದೆ॥**
**ಅನುದಿನಮಿರಲರಿಯದ ಕತದಿಂದೆ ಮಾ।**
**ನಿನಿ ಕೇಳಹಂ ಭಾವಪರನಕ್ಕು ॥ 1 ॥**

ದೇಹ, ಮನಸ್ಸು ಇಂದ್ರಿಯಗಳಲ್ಲಿ ಮತ್ತು ಪರತತ್ತ್ವದ ಅನುಭಾವದಲ್ಲಿ ಸಹ 'ನಾನು ನಾನು', ಎಂದು ಹಂಕರಿಸದೆ ಎಂದೆಂದೂ ಇರಲಾರನು. ಆದುದರಿಂದ ಮಾನಿನಿ ಮೈತ್ರಾ, ಇವನಿಗೆ ''ಅಹಂಭಾವಪರನು'' ಎಂದು ಕರೆಯುವರು.

**ಜೀವರೂಪಿನೊಳಾತ್ಮಭಾವಮಂ ಮರೆದಿದಂ।**
**ಭಾವದ ಸುಖದುಃಖಾದಿಗಳನು ॥**
**ಆವಗಮರಿವುತಿರ್ಪುದರಿಂದೆ ತಿಳಿಯಜ್ಞ।**
**ಭಾವಸಹಿತನೆಂದೆನಿಸುತಿರ್ಕು ॥ 2 ॥**

ಜೀವಭಾವದ ನಟನೆಯಲ್ಲಿ (ತನ್ನನಿಜವಾದ) ಆತ್ಮಭಾವ (ಅರಿವು) ಮರೆತು, ಇದಂ ಭಾವದ ಸುಖದುಃಖ, ಅಹುದು–ಅಲ್ಲ, ಮೇಲು ಕೀಳು ಮುಂತಾದ ದೃಶ್ಯಗಳನ್ನೆ ಯಾವಾಗಲೂ ಅರಿಯುತ್ತ ಇರುವದರಿಂದ (ಕಲ್ಪಿತನು) ''ಅಜ್ಞಭಾವಸಹಿತನು'' ಎಂದೆನಿಸುವನು.

**ಸತಿ ಕೇಳು ತನುಭಾವ ರತಿಯನುಳಿಯದಿರ್ಪ ।**
**ಕತದಿಂದೆ ತನುವಿಲ್ಲದೊಮ್ಮೆಯು॥**
**ಪ್ರತಿದೋರಲರಿಯನದಾಗಿ ಭಾವಿಸಲಾ ಪ್ರ।**
**ಕೃತಿ ಭಾವಧರನೆಂದೆನಿಸುತಿರ್ಕು ॥ 3 ॥**

ಸತಿ ಕೇಳು. 'ನಾನು' ಎಂದರೆ ದೇಹ. ದೇಹ ಭಾವವನುಳಿದು ಅದರ ಪ್ರೇಮ ಬಿಟ್ಟು ತಾನು ಅರಘಳಿಗೆ ಇರಲಾರ ಮತ್ತು ದೇಹ ತಾನೆಂಬ ಮೋಹ ಬಿಟ್ಟು ಅದನ್ನು ಎದಿರಿಟ್ಟು (ಉಳಿದ ದೃಶ್ಯಗಳಂತೆ) ನೋಡಲಾರ. ಇದನ್ನು ಪರಿಭಾವಿಸಿದರೆ ಕಲ್ಪಿತ ಪುರುಷಗೆ ''ಪ್ರಕೃತಿ ಭಾವಧರನು'' ಎಂಬ ನಾಮ ಸಲ್ಲುವದು.

**ನಿಯತದವಸ್ಥೆ ಮೂರನು ಕಾಯಕರಣಸಂ।**
**ಚಯವಿಡಿದರಿವ ಕಾರಣದಿಂದೆ॥**
**ಪ್ರಿಯತಮೆ ನೀನಿಂತು ತಿಳಿವುದಿದಂ ಭಾವ।**
**ತ್ರಯದರುಶಿಯವನೆಂದೊಲವಿಂದೆ ॥ 4 ॥**

ದಿನದಿನವೂ ನಿಯಮಿತವಾಗಿ ಬಂದು ಹೋಗುವ ಮೂರವಸ್ಥೆಗಳು– ಜಾಗ್ರ, ಸ್ವಪ್ನ, ಸುಷುಪ್ತಿ (ಗಾಢನಿದ್ರೆ) ಇವುಗಳಲ್ಲಿ ಸ್ಥೂಲ, ಸೂಕ್ಷ್ಮ ಕಾರಣ ಮೂರು ಶರೀರಗಳು– ಇವುಗಳಿಗೆ ಕ್ರಮವಾಗಿ 25 ತತ್ತ್ವಗಳು, 17 ತತ್ತ್ವಗಳು ಮತ್ತು ಒಂದೇ ಅಜ್ಞಾನವೆಂಬ ಕರಣ. ಈ ಸಾಧನಗಳಿಂದ ಕೂಡಿಕೊಂಡು ನಾನಾ ವಿಷಯಗಳನ್ನು ಕಲ್ಪಿತಜೀವನು ಮೋಹಿಸಿ ಪ್ರತಿನಿತ್ಯ ಭೋಗಿಸುವನು. ಒಂದರೊಳಗೆ ಒಂದಿಲ್ಲದ ಇದಂಭಾವದಿಂದ ಎದಿರಿಟ್ಟು ತೋರುವ ಈ ಮೂರವಸ್ಥೆಗಳನ್ನು ಹೊಂದುವ ಕಲ್ಪಿತ ಜೀವಂಗೆ ''ಇದಂ ಭಾವತ್ರಯದರ್ಶಿ'' ಎಂದು, ಪ್ರಿಯತಮೆ ಮೈತ್ರೇಯಿ, ನೀ ತಿಳಿವುದು.

ಅರಿದಹಮೆನೆ ವಿದ್ಯಾರೂಪನು ನಿಜವನು।
ಮರೆದುದರಿಂದವಿದ್ಯಾತ್ಮನು ॥
ಅರಿವು ಮರವೆಯೆಂಬೆರಡನೊಂದಿ ತೋರೆ ನೀ।
ನರಿ ವಿದ್ಯಾವಿದ್ಯಾಮಯನುಮೆಂದು ॥ 5 ॥

(ನಾನು) ಅರಿವೆನೆಂದು ಅರುವಿನ ಹಮ್ಮಿನಿಂದ ವರ್ತಿಸುವಾಗ ''ವಿದ್ಯಾರೂಪನು'' ಎಂದು, ಇರುವ ನಿಜವನ್ನು ಮರೆತೆನೆಂದು ಹೇಳುವಾಗ ''ಅವಿದ್ಯಾರೂಪನು'' ಮತ್ತು ಅರಿವು ಮರೆವು ಎರಡನ್ನು ಕೂಡಿಕೊಂಡಿರುವಾಗ ಅದೇ ಜೀವನು ''ವಿದ್ಯಾವಿದ್ಯಾಮಯನು'', ಎಂದು ಕರೆಯಲ್ಪಡುವನು. ಈ ಒಂದು ಪದ್ಯದಲ್ಲಿ ಕಲ್ಪಿತ ಜೀವಂಗೆ ಮೂರು ಭಾವ ಹೇಳಲಾಯಿತು.

ವಿಕೃತಿ ಜಾಲಕ್ಕಿವೆ ಮೊದಲೆನಿಪ ಜ್ಞಾನ।
ವಿಕೃತಿ ಬೇರಿನ್ನೊಂದು ಮೋಹನ ॥
ವಿಕೃತಿ ಮೇಣರಿಯೆ ವರ್ತನ ವಿಕೃತಿಗಳಿಂತು ॥
ವಿಕೃತಿತ್ರಯವನ್ನೈದಿದವನಕ್ಕು ॥ 6 ॥

''ತ್ರಿವಿಕೃತಿಗನು'' ಎನಿಸುವ ಜೀವನ ಮೂರು ವಿಕಾರಗಳನ್ನು ಈಗ ಹೇಳುವರು. ಒಂದು ಜ್ಞಾನ ವಿಕೃತಿ– ಬೇರೊಂದು ಮೋಹನ ವಿಕೃತಿ, ಮೂರನೆಯದು ವರ್ತನ ವಿಕೃತಿ. ಜೀವನ ನಾನಾ ವಿಕಾರಗಳಿಗೆ ಕಾರಣವಾದ ಈ ಮೂರು ವಿಕೃತಿಗಳ ಲಕ್ಷಣವನ್ನು ಮುಂದಿನ ಪದ್ಯದಲ್ಲಿ ಹೇಳುವರು.

ವಿದ್ಯೆಯೆ ಜ್ಞಾನ ಮವಿದ್ಯೆಯೇ ಮೋಹನ।
ವಿದ್ಯಾವಿದ್ಯೆಗಳೆ ವರ್ತನವಕ್ಕು ॥
ಹೃದ್ಯೆ ಮೈತ್ರೇಯಿ ನೀನೀಕ್ರಮದೊಳು ಶುದ್ಧ।
ವಿದ್ಯೆಯಿಂದಿವನಿಂತು ತಿಳಿವುದು ॥ 7 ॥

[ ಟಿಪ್ಪಣಿ :– (5ನೇ ಪದದಲ್ಲಿ ಹೇಳಿದ ಮಾತುಗಳನ್ನು ಮೂರು ವಿಕಾರಗಳಿಗೆ ಸಂಬಂಧಿಸುವರು] .

(ಅರಿದಹಮ್ಮು ಎನಿಪ) ವಿದ್ಯೆಯೆ ಜ್ಞಾನ ವಿಕೃತಿ. (ನಿಜವನು ಮರೆದ) ಅವಿದ್ಯೆ ಮೋಹನ ವಿಕೃತಿ ಮತ್ತು ವಿದ್ಯಾವಿದ್ಯೆಗಳೆ ವರ್ತನ ವಿಕೃತಿ, ಸದು ಹೃದಯದ ಮೈತ್ರೇಯಿ, ನೀನು ಈ ಕ್ರಮವನ್ನು ಶುದ್ಧವಿದ್ಯೆಯಿಂದ ತಿಳಿವುದು.

ಬೀಜದಲ್ಲಿಯೇ ಸಸ್ಯ ಬೀಜ ತುಷಂಗಳಿ।
ರ್ಪೋಜೆಯಿಂದೀ ತ್ರಿವಿಕೃತಿಗಳು॥
ರಾಜೀವದಳನೇತ್ರ ಮೈತ್ರೇಯಿ ನೋಡು ನಿ-।
ರ್ವ್ಯಾಜವಾ ಕಲ್ಪಿತನೊಳಗಿರ್ಕು॥ 8 ॥

(ನೀರಿನಲ್ಲಿ ಉಬ್ಬಿರುವ) ಬೀಜದಲ್ಲಿ ಮೊಳಿಕೆ, ಹೊಳಿಕೆ, ಸೊಳಿಕೆ (ತುಷ)ಗಳು ಹೊಂದಿಕೊಂಡು ಇರುವಂತೆ, ಕಮಲದಳಗಳಂತೆ ನೇತ್ರವುಳ್ಳ ಮೈತ್ರೇಯಿ, ಮೇಲೆ ಹೇಳಿದ ಮೂರು ವಿಕೃತಿಗಳು ಕಲ್ಪಿತ ಪುರುಷನಲ್ಲಿರುವವೆಂದು ನೀನು ನಿಶ್ಚಯವಾಗಿ ತಿಳಿ.

ಪ್ರಿಯತಮೆ ಮಹದಹಮಾದಿ ವಿಕಾರ ಸಂ।
ಚಯಕೆ ತಾನಾದಿ ಕಾರಣನಾಗಿ॥
ನಿಯಮದೊಳಿರ್ಪುದರಿಂದ ಜಗದ್ಬೀಜ।
ಮಯನೆನಿಪನು ಕಲ್ಪಿತನೆ ಕೇಳು॥ 9 ॥

ಪ್ರಿಯತಮೆ (ಮೈತ್ರೇಯಿ), ಪ್ರಕೃತಿಯ ವಿಕಾರಗಳಾದ ಮಹತ್ತು, ಅದರಿಂದ ಮೂರು ಹಂಕಾರಗಳು, ಮೂರು ಗುಣಗಳು ಹಾಗೂ ಇವುಗಳಿಂದ ಮೂರು ಲೋಕ (ಜಗತ್ತು)ಗಳು ಜನಿಸುವವು. (ಈ ವಿಷಯ ಮುಂದೆ 8 ನೇ ಸೂತ್ರದಲ್ಲಿ ಹೇಳುವರು). ಈ ಎಲ್ಲ ವಿಕಾರಗಳಿಗೆ ಮೂಲ ಕಾರಣನಾದ ಕಲ್ಪಿತ ಪುರುಷನೆ "ಜಗದ್ಬೀಜಮಯ"ನೆನಿಸುವನು.

ಅಹಿಬುದ್ಧಿ ನೇಣಸಹಿಗೆ ಬೀಜವಾದಂತೆ।
ಮಹದಾದಿ ಜಗಕೆ ತಾನದು ತನ್ನ॥
ಸಹಮಿರ್ಪ ಬಗೆಯ ನೀನರಿ ಕಲ್ಪಿತನೊಳಿಂತು।
ವಿಹಿತಮಿದಂಬುಜಲೋಚನೆ॥ 10 ॥

ಹಗ್ಗದಲ್ಲಿ (ಭ್ರಮೆಯಿಂದ) ತೋರುವ ಹಾವಿಗೆ (ತನ್ನ ಮನದಲ್ಲಿರುವ) ಹಾವಿನ ಬುದ್ಧಿಯೆ ಬೀಜ ವಾದಂತೆ, ಕಮಲ ಸದೃಶ ನೇತ್ರವುಳ್ಳ ಮೈತ್ರೇಯಿ, (ಮೇಲೆ ಹೇಳಿದ) ಮಹತ್ತು, ಮೂರಹಂಕಾರಗಳಿಂದ ಉತ್ಪತ್ತಿಯಾದ ಜಗತ್ತಿಗೆ ಬೀಜ ರೂಪವು, (ಆ ಬೀಜ ಭೂಮಿಯಲ್ಲಿ ಅಂಕುರಿಸಲು ವೃಕ್ಷವು, ಪುನಃ ವೃಕ್ಷದಲ್ಲಿ ಬೀಜಗಳು ಹುಟ್ಟುವಂತೆ ತಾನೇ ಬೀಜಮಯನಾಗಿ ತೋರುವ ಕಲ್ಪಿತ ಪುರುಷನ ಬಗೆಯನು ನೀನರಿ. ಜಗತ್ತೆಂಬ ವೃಕ್ಷಕ್ಕೆ ತಾನೇ ಬೀಜನು ಮತ್ತೆ ಆ ವೃಕ್ಷದಲ್ಲಿ ತಾನೇ ಅನಂತ ಬೀಜಗಳಾಗಿ ಜನಿಸುವನು. ಈ ಬಗೆಯಿಂದ (ಬೀಜವೃಕ್ಷ ನ್ಯಾಯ) ನೋಡಲು ಕಲ್ಪಿತ ಪುರುಷನಿಗೆ "ಜಗದ್ಬೀಜಮಯನು" ಎಂಬ ನಾಮ ಸಲ್ಲುವದು.

ಮರೆದೊಡೆ ಜೀವಾತ್ಮ ನರಿದೊಡೆ ಪರಮಾತ್ಮ।
ನರಿವು ಮರವೆಗಳೆಂಬೆರಡನು ॥
ನೆರೆ ಕೂಡಲಂತರಾತ್ಮನು ನೀರೆ ನೀನಿದ।
ನರಿ ಕಲ್ಪಿತನ ಬೋಧಾದ್ಯುತಿಯೆಂದು ॥ 11 ॥

ನೀರೆ (ಚಲುವೆ, ಲಾವಣ್ಯವತಿ) ಮೈತ್ರೇಯಿ, ತನ್ನ ತಾನು ಮರೆತಾಗ ಜೀವಾತ್ಮನೆನಿಸುವನು. (ಗುರುಗಳಿಂದ) ಅರಿತಾಗ ತಾನೆ ಪರಮಾತ್ಮನೆನಿಸುವನು. ಅರಿವು–ಮರೆವು ಎರಡರ ಸಂಗಮ ತನ್ನಲ್ಲಿ ಆಗಲು ತಾನೆ ಅಂತರಾತ್ಮನೆನಿಸುವನು. ಈ ಮೂರವಸ್ಥೆಗಳ ಬೆಸುಗೆಗೆ ಕಲ್ಪಿತಪುರುಷನ ''ಬೋಧ್ಯಾದ್ಯುತಿ'' ಎಂದು ತಿಳಿ. (ಅಂದರೆ ಜ್ಞಾನದ ಆಭಾಸ). ಇದಕ್ಕೆ ದೃಷ್ಟಾಂತ ಮುಂದೆ. ನೋಡಿರಿ......

ಜನಪನೆ ಮರೆದಲ್ಲಿ ವ್ಯಾಧನು ಮಧ್ಯಸ್ಥ।
ನೆನಿಪನು ತನ್ನ ತಾನರಿವಲ್ಲಿ ॥
ವನಿತೆ ಮೇಣರಿದಲ್ಲಿ ಜನಪನೆನಿಸುವನೀ।
ಯನುವ ನೀನರಿ ಬೋಧಾದ್ಯುತಿಯೊಳು ॥ 12 ॥

(ಕೃಷ್ಣನು ಕರ್ಣನಿಗೆ ಯುದ್ಧಕಾಲದಲ್ಲಿ ಹೇಳಿದ ಆತನ ಜನ್ಮ ವೃತ್ತಾಂತವು ಬೋಧಾದ್ಯುತಿಭಾವ ತಿಳಿಸಲು ಇಲ್ಲಿ ದೃಷ್ಟಾಂತವಿದೆ). ಕರ್ಣನು ತಾನು ನಿಜವಾಗಿ ಯಾರ ಮಗನು ಎಂಬುದನ್ನು ಮರೆತು, 'ನಾನು ರಾಧಾ ಪುತ್ರ, ಬೇಡರವ ಎಂದು ತಿಳಿದಿದ್ದ.(ಕೃಷ್ಣನಿಂದ) ತನ್ನ ನಿಜ ಜನ್ಮ ವೃತ್ತಾಂತ ಅರಿಯುವ ಕಾಲಕ್ಕೆ ಮಧ್ಯಸ್ಥನು (ಅಂತರಾತ್ಮನು). ಮತ್ತೆ ಅರಿದ ಬಳಿಕ ರಾಜನು (ಪಾಂಡುರಾಜನ ಜ್ಯೇಷ್ಠಪುತ್ರನು) ಇದೇ ರೀತಿ ಒಬ್ಬ ಜೀವನಲ್ಲಿ ಕಲ್ಪಿತವಾದ ಜೀವಾತ್ಮ ಪರಮಾತ್ಮ ಮತ್ತು ಅಂತರಾತ್ಮನೆಂಬ ಮೂರವಸ್ಥೆಗಳು ತೋರುವವು.

ಅದು ಕಾರಣದೆ ಬೋಧಾದ್ಯುತಿ ನಿಜಾತ್ಮನೆಯಲ್ಲ।
ವದು ತಿಳಿದೊಡೆ ಮಿಥ್ಯೆಯಹುದಾಗಿ ॥
ಸುದತಿ ನೀನೀ ಕ್ರಮದೊಳು ಕಲ್ಪಿತನ ಭಾವ।
ದುದಯಂಗಳಿರವನಿಂತರಿವುದು ॥ 13 ॥

ಆದ್ದರಿಂದ ಬೋಧಾದ್ಯುತಿ ನಿಜವಾದ ಆತ್ಮನಲ್ಲ, ಆತ್ಮನಿಗೆ ಮರವೆಯಿಲ್ಲ, ಆದ್ದರಿಂದ ಅರಿವು ಇಲ್ಲ, ಅರ್ಥಾತ್ ಬಂಧ ಮೋಕ್ಷಗಳೂ ತನಗಿಲ್ಲ, ತನ್ನ ತಾನು ಯಥಾರ್ಥವಾಗಿ ತಿಳಿದಾಗಲೆ ಕಲ್ಪಿತನ ಮೂರು ಭಾವಗಳು ಸ್ವಪ್ನದಂತೆ ಪುಸಿ ದೋರಿಕೆ (ಮಿಥ್ಯ) ಎನಿಸುವವು. ಒಳ್ಳೆಯದಂತವುಳ್ಳ ರಮಣಿ, ನೀನು ಮೇಲೆ ಹೇಳಿದ ಕ್ರಮದಂತೆ ಕಲ್ಪಿತ ಪುರುಷನ ದಶ (ಹತ್ತು) ಭಾವಗಳ ಲಕ್ಷಣಗಳನ್ನು ಅರಿಯಬೇಕು.

ಕಲ್ಪಿತ ಪುರುಷನ ಸಂಕಲ್ಪನೆಯಿಂದೆ ವಿ।
ಕಲ್ಪರೂಪಾದ ಜಗತ್ತಿನ।
ಕಲ್ಪನೆಯಹುದಿದು ನಿಜವೆಂದು ನೀನರಿ।
ಕಲ್ಪಭೂರುಹಪಲ್ಲವಾಧರೆ ॥ 14 ॥

ಜಗವೆಂದರೇನು ? ಕಲ್ಪಿತ ಪುರುಷನ ವಿಕಲ್ಪನೆಯಿಂದ ಜನಿಸಿದ ಕಲ್ಪನಾಮಯ (ಅಥವಾ ಮನೋಮಯ) ಜಗವಿದು, ಅಹುದೆಂದು, ಕಲ್ಪವೃಕ್ಷದ ತಳಿರೆಲೆಯಂತೆ ತುಟಿಗಳುಳ್ಳ ಮೈತ್ರಾ, ನೀನು ಚೆನ್ನಾಗಿ ತಿಳಿ.

– ಇತಿ ಕಲ್ಪಿತನ ದಶಭಾವ ಲಕ್ಷಣ ನಿರೂಪಣೆ –

## ಕಲ್ಪಿತ ಪುರುಷನ ಬಗ್ಗೆ ಸಮಾಲೋಚನೆ

ಈ ಪ್ರಕ್ರಿಯೆಯನ್ನು ಯಾವದೇ ಉಪನಿಷತ್ತು ನಿಗಮಾಗಮ, ಬ್ರಹ್ಮಸೂತ್ರ ಅಥವಾ ಶಂಕರಾಚಾರ್ಯರ ಭಾಷ್ಯಗಳಲ್ಲಿ ಕಾಣಲಾಗದು. ಇದು ಶ್ರೀ ಮನ್ನಿಜಗುಣರ ಸ್ವಂತ ವಿಚಾರದ ಕೊಡುಗೆ. ಆಧ್ಯಾತ್ಮ ಲೋಕಕ್ಕೆ ಉಪಕ್ರಮ ಉಪಸಂಹಾರವೆಂಬ ಶ್ರುತಿ ಷಡ್ಲಿಂಗದ ಸಾರವನ್ನೊಂದು ಸರಳ ಮಾತಿನಲ್ಲಿ ನಿವೇದಿಸಿದ್ದಾರೆ. ಬ್ರಹ್ಮಸೂತ್ರ ಭಾಷ್ಯವನ್ನು ಶಂಕರ ಭಗವತ್‌ಪಾದರು ಅಧ್ಯಾಸ ಪ್ರಕರಣದಿಂದಾರಂಭ ಮಾಡಿದಂತೆ ನಿಜಗುಣರು ತಮ್ಮ ಪರಮಾನುಭವ ಬೋಧೆಯೆಂಬ ಈ ಪ್ರಕರಣವನ್ನು ಕಲ್ಪಿತ ಪುರುಷನುತ್ಪತ್ತಿ ಅವನ ದಶಭಾವಗಳ ಲಕ್ಷಣ ಮತ್ತು ಅವನಿಂದಲೆ ಬಂಧ ಮೋಕ್ಷ ಪ್ರಕ್ರಿಯೆಗಳ ಉತ್ಪತ್ತಿ– ಉಪಸಂಹಾರಗಳನ್ನು ಪ್ರತಿಪಾದಿಸಿದ್ದಾರೆ. ತಾನು ನಿರ್ಮಲನು, ನಿರಂಜನನು, ಸದಾ ನಿರ್ವಿಕಲ್ಪ ಚೇತನನು, ತನ್ನ ನಿಜ ಅರುವಿನ ಇರುವಿನಲ್ಲಿ ತೋರ್ಪುದೆಲ್ಲ ಕಾಲ್ಪನಿಕ, ಪುಸಿದೋರಿಕೆ, ಮಿಥ್ಯೆ, ಕನಸು, ಎಂದು ಸುಖಪೂರ್ಣ ಅದ್ವೈತ ಸಿದ್ಧಾಂತವನ್ನು ನಿಜಗುಣ ಯೋಗಿ ಸುಲಭವಾಗಿ ನಿರೂಪಿಸಿದ್ದಾರೆ.

## 7ನೇ ಸೂತ್ರ

ಜನನಾರಂಭಕ್ರಿಯೆ ಪ್ರಕೃತಿಯವಿದ್ಯೆಯೆಂ ।
ದೆನಿಪವಾಕಲ್ಪಿತನೊಳು ತೋರ್ಕು ॥

ಕಲ್ಪಿತ ಪುರುಷನ ಜನನ, ಅವನ ಆರಂಭ (ಮೊದಲಾದ) ಕರ್ಮ, ಪ್ರಕೃತಿ ಅಂದರೇನು? ಅವಿದ್ಯೆ ಅಂದರೇನು ? ಅವಿದ್ಯೆಯ ಪಂಚ ಪ್ರಕಾರಗಳು ಕಲ್ಪಿತನಲ್ಲಿ ಹೇಗೆ ಜನಿಸಿ ತೋರುವವು ? ಈ ವಿಷಯಗಳನ್ನು ಈ ಸೂತ್ರದಲ್ಲಿ ನಿರೂಪಿಸುವರು.

ತಿಳಿ ನೀರೆ ನಿಖಿಳ ತೋರ್ಕೆಗೆ ಕಾರಣಾತ್ಮತೆ।
ದಳೆದಾದಿ ಕಲ್ಪಿತ ಪುರುಷನು ॥
ಒಳಪುಗದರಿವಿನೊಳೊಂದಿ ಭಲ್ಲಾತಕಿ।
ಫಳ ಬೀಜದಂದದಿಂದೆಸೆವನು ॥ 1 ॥

ಲಾವಣ್ಯವತಿಯೇ, ಸಕಲ ಸ್ಥೂಲ ಸೂಕ್ಷ್ಮ ತ್ರೋರ್ಕೆಗಳಿಗೆ ಕಾರಣಾತ್ಮನು ಕಲ್ಪಿತ ಪುರುಷನು. ಇನ್ನು ಬಳಿಕ ಹೇಳುವದೆಲ್ಲವೂ ಅವನ ಕಲ್ಪನಾ ಸಾಮ್ರಾಜ್ಯದ ಕಾರ್ಯವು. ನಿನ್ನ ಅರುವಿನಾಧಾರದಲ್ಲಿ ಅವನು ಹೇಗಿರುವನು ? ಎಲ್ಲ ಹಣ್ಣುಗಳಲ್ಲಿ ಬೀಜವು ಹಣ್ಣಿನೊಳಗೆ ಇರುವದು. ಆದರೆ ಭಲ್ಲಾತಕಿ ಅಂದರೆ ಗೇರು ಹಣ್ಣಿನ ಬೀಜವು ಹೊರಗೆ ಇರುವದು. ಇದೇ ರೀತಿ ಕಲ್ಪಿತ ಜೀವನು ಹಾಗೂ ಅವನ ಪ್ರಪಂಚವೆಲ್ಲ, ಮೈತ್ರೇಯಿ, ನಿನ್ನೊಳಗೆ ಇರದೆ ಹೊರಗೇ ಇದ್ದ ಹಾಗೆ ತೋರುತ್ತ ರಂಜಿಸುವದು ಎಂದು ತಿಳಿ.

ಅಂತಾ ಜಗತ್ಕಲ್ಪನೆಯೊಳಾ ಕಲ್ಪಿತನಹಂ।
ಭ್ರಾಂತಿ ತಾನಾರಂಭಕ್ರಿಯೆಯೈಸೆ ॥
ಕಾಂತೆ ನೀನರಿ ಕರ್ಮವನ್ಯಮೊಂದಿಲ್ಲಮ।
ನಂತ ಚಿದ್ಬ್ರಹ್ಮವದ್ವಯವಾಗಿ ॥ 2 ॥

ಅಂತು (ಮೇಲೆ ಹೇಳಿದಂತೆ, ಕಲ್ಪಿತ ಪುರುಷನ ಸಂಕಲ್ಪನೆಯಿಂದ ವಿಕಲ್ಪ ರೂಪಾದ) ಆ ಜಗತ್‌ಕಲ್ಪನೆಯಲ್ಲಿ ಆ ಕಲ್ಪಿತನ 'ನಾನು, ನಾನು' ಎಂಬ ಅಹಂಭ್ರಾಂತಿಯೆ ಆರಂಭ ಕ್ರಿಯೆಯಾಗಿದೆಯಲ್ಲವೆ ? ಕಾಂತೆ ನೀನರಿ. ಅನಂತನೂ, ಆದಿ ಮಧ್ಯಾಂತಶೂನ್ಯನೂ ಅದ್ವಯನೂ ಆದ ಪರಬ್ರಹ್ಮನಲ್ಲಿ (ಅಂದರೆ ನಿನ್ನಲ್ಲಿ) ಆರಬ್ಧ ಆಗಾಮಿ ಮುಂತಾದ ಯಾವ ಕರ್ಮಗಳೂ ಇಲ್ಲ.

ಇನಿಯಳೆ ಜ್ಞಾನ ಮೋಹನ ವರ್ತನಾದಿ ಭಾ- ।
ವನೆಗಳಿಗಾದಿ ಕಾರಣವಾಗಿ ॥
ಮಿನುಗುವಹಂಬಾವನೆಯೆ ನೋಡು ಕರ್ಮವೆಂ ।
ದೆನಿಪುದಾ ಕಲ್ಪಿತ ಪುರುಷನ ॥ 3 ॥

ಹಾಗಾದರೆ ಕರ್ಮ ಕಾಂಡ ಯಾರಲ್ಲಿದೆ ? (ಹಿಂದಿನ ಸೂತ್ರ 6 ನೇ ಪದ ನೋಡು), ಜ್ಞಾನವಿಕೃತಿ, ಮೋಹನವಿಕೃತಿ, ವರ್ತನವಿಕೃತಿ ಎಂಬೀ ವಿಕಾರಭಾವತ್ರಯಗಳಿಗೆ ಆದಿಕಾರಣವಾಗಿ ಮಿನುಗುವ ಕಲ್ಪಿತಜೀವನ ಅಹಂಭಾವನೆಯೆ ಅವನ ಮೊದಲ ಕರ್ಮವೆನಿಪುದೆಂದು, ಇನಿಯಳೆ (ಪ್ರಿಯೆ), ನಿರ್ಧರಿಸು.

ತನ್ನಹಂಭಾವದಿಂದಂ ನಿಜ ಜ್ಞತ್ವಮಂ ।
ತನ್ನೊಳು ಮರೆದು ತಾನಜ್ಞನು ॥
ಎನ್ನಲಂತದು ಮೂಲ ಪ್ರಕೃತಿಯಪ್ಪುದು ಮನ ।
ದನ್ನೆ ಬೇರೊಂದುಂಟೆ ನಿಜವಲ್ಲಿ ॥ 4 ॥

ಎನ್ನೊಲವಿನ ಸತಿ ಕೇಳು. ಕಲ್ಪಿತ ಪುರುಷನು ತನ್ನ ಅಹಂಭಾವದಿಂದ ತನ್ನೊಳಗೆ ತನ್ನ ನಿಜವಾದ ಅರುವಿನ (ಜ್ಞಾನದ) ಇರವನ್ನು ಮರೆತು, ತಾನು ಅಜ್ಞನು (ಏನೊಂದರಿಯದವ), ಎಂದು ಭಾವಿಸಲು ಅದೇ ಮೂಲ ಪ್ರಕೃತಿಯೆನಿಸುವದು.

ಪ್ರಿಯಳೇ, ನಿನ್ನ ನಿಜ ಸ್ವರೂಪದಲ್ಲಿ ಬೇರೊಂದು ಭಾವ (ಅಥವಾ ಅನಿಸಿಕೆ, ಕಲ್ಪನೆ) ಇರುವದೇ ? ಎಂದೂ ಇಲ್ಲ. (ನಿಜ ಅಖಂಡ ಅರುವಿನಲ್ಲಿ ಅನ್ಯ ಕಲ್ಪನೆಯಿಲ್ಲ.)

ಅರಿವು ತಾನಾಗಿರ್ದು ಮರೆದೆ ನಾನೆನ್ನನೆಂ ।
ದರಿಯಲವಿದ್ಯೆ ಯೆಂದೆನಿಪುದು ॥
ಪೆರೆನೊಸಲಳೆ ಪಂಚವಿಧವಪ್ಪುದದು ತಾನು ।
ನೆರೆ ತಿಳಿಯಲು ಮಿಥ್ಯೆಯೆನಿಪುದು ॥ 5 ॥

ಅವಿದ್ಯಾ ಲಕ್ಷಣ :– ಅರಿವು ತಾನಿರ್ದು, 'ಮರೆದೆನು, ನಾನು ನನ್ನನು' ಎಂದು ತಾನೇ ಅರಿತು ಹೇಳುವನು. ಇದು ಅವಿದ್ಯೆಯೆನಿಸುವದು. (ಇದು ಹೇಗಿದೆ, ಎಂದರೆ 'ನನ್ನ ಬಾಯಲ್ಲಿ ನಾಲಿಗೆಯಿಲ್ಲ', ಎಂದು ನಾಲಿಗೆಯಿಂದಲೆ ನುಡಿದು ಹೇಳುವವನಂತೆ ಹಾಸ್ಯಾಸ್ಪದ). ಹರವಾದ ಹಣೆಯುಳ್ಳ ಮೈತ್ರೇಯಿ, (ವಿಶಾಲ ವಿದ್ಯಾವತಿ ಎಂಬ ಭಾವ). ಅವಿದ್ಯೆ ಐದು ಪ್ರಕಾರವಾಗಿದೆ. ಆದರೆ ಸಮ್ಯಗ್ ರೀತಿಯಿಂದ ವಿಚಾರಿಸಲು (ಮೇಲೆ ಹೇಳಿದ ಉದಾಹರಣೆಯಂತೆ) ನುಡಿಮಾತ್ರ, ಕನಸಿನಂತೆ ಪುಸಿದೋರಿಕೆ (ಮಿಥ್ಯೆ) ಎನಿಸುವದು.

ಅದು ತಮೋರೂಪಿಂದವದು ಮಾಯಾ ರೂಪಿಂದ ।
ವದು ಮೋಹಾಜ್ಞಾನದ ರೂಪಿಂದೆ ।
ಅದು ಬಳಿಕನೃತದ ರೂಪಿಂದೆ ತೋರ್ಪುದು ।
ಸುದತಿ ಕೇಳಿದನರುಪುವೆನಿಲ್ಲಿ ॥ 6 ॥

ಅವಿದ್ಯೆಯು ಐದು ರೂಪದಿಂದ ತೋರುವದು. (1) ತಮ (ಕತ್ತಲೆ) (2) ಮಾಯೆ (3) ಮೋಹ (4) ಅಜ್ಞಾನ ಮತ್ತು (5) ಅನೃತ. (ಅಸತ್ಯ) ಸುದತಿ (ದಾಳಿಂಬರ ಬೀಜದಂತೆ ಶೋಭಿಸುವ ಹಲ್ಲುಗಳಿರುವ) ಮೈತ್ರೇಯಿ, ಇವುಗಳ ಲಕ್ಷಣ ಮುಂದೆ ತಿಳಿಸುವೆ. ಆಲಿಸು.

ಕಮಲಾಸ್ಯೆ ಕೇಳಹಂಭ್ರಮೆ ಯಜ್ಞಾನೆಂಬ ।
ಭ್ರಮೆ ಜಗದ್ಭ್ರಮೆಗಳು ಪುಸಿಯೆಂದು ॥
ಸುಮನಸರ್ಗಾದೊಡಮರಿದು ಕಾಣಲ್ಕನೆ ।
ತಮವಪ್ಪುದದು ತಮದಂದದಿ ॥ 7 ॥

ಕಮಲಮುಖಿ ಕೇಳು, ಅಹಂ ಭ್ರಮೆ, ಅಜ್ಞಾನೆಂಬ ಭ್ರಮೆ ಜಗದ್ ಭ್ರಮೆಗಳು ಸುಳ್ಳು ತೋರಿಕೆ. (ಅವುಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ.) ಈ ಮಾತು ದೇವತೆಗಳೂ ಸಹ ಅರಿಯಲಸಮರ್ಥರು. ಈ ಮಾತು, ಸತ್ಯವದೆ. ನಮ್ಮ ಬುದ್ಧಿಗೆ (ಮನಾದಿಕರಣಗಳಿಗೆ) ಕಾಣದಂತೆ ಸತ್ಯವಿದೆ. ಇದ್ದ ಇರುವಿಕೆ (ಸತ್ಯ) ಯನ್ನು ತಮಸ್ಸು ಮುಚ್ಚಿದೆ. ಆವರಿಸಿದ ಈ ತಮಸ್ಸು ಕತ್ತಲೆಯಂತಿದೆ.

ಇಲ್ಲದುದಾಗಿಯುಮುಳ್ಳುದೆನಿಸಿ ತೋರು।
ತೆಲ್ಲೆಲ್ಲಿ ನೋಡೆ ತನ್ಮಯವಾಗಿ॥
ಬಲ್ಲವರ್ಗಾದೊಡಚ್ಚರಿದೋರುತೀ ಪರಿ।
ಯಲ್ಲಿರ್ಪುದದು ಮಾಯೆ ಮನದನ್ನೆ॥ 8 ॥

ಮಾಯೆ ಇಲ್ಲ 'ಯಾಮಾ ಸಾ ಮಾಯಾ' ಎಂಬ ಶ್ರುತಿಯಂತೆ ಇಲ್ಲದುದಾಗಿಯೂ ಉಳ್ಳುದೆನಿಸಿ, ಎಲ್ಲ ಕಡೆ ತೋರುತ, ತನ್ಮಯವಾಗಿ ರಂಜಿಸುವದು. ಒಮ್ಮೆ ಸತ್, ಒಮ್ಮೆ ಅಸತ್ (ಇಲ್ಲದ್ದು) ಇನ್ನೊಮ್ಮೆ ಸದಸದ್ವಿಲಕ್ಷಣವಾಗಿ ತೋರುವ ಮಾಯೆ ಬಲ್ಲವರಿಗೂ ಸಹ ಆಶ್ಚರ್ಯವನ್ನುಂಟು ಮಾಡುವೀ ಮಾಯೆಗೆ, ಮನೋಹರ ಮೈತ್ರೇಯಿ, ಏನೆಂದು ಹೆಸರಿಸೋಣ ?

ತನ್ನಹಂಭ್ರಮೆಯನೆಂದುಂ ನೀಗಿ ನಿಲಲೀಯ।
ದುನ್ನತಮಾದನ್ನ ರತಿಯನು॥
ತನ್ನೊಳೆಸಗಿ ಕಾಡುತಿಹುದರಿವುಳ್ಳರು।
ಮುನ್ನೋಡಲದು ಮೋಹವೆನಿಪುದು॥ 9 ॥

'ನಾನು ನನ್ನದು' ಎಂಬ ಅಹಂ ಭ್ರಮೆಯನ್ನು ನೀಗಲಿಕ್ಕೆ ತೆರಹುಗೊಡದೆ ಉನ್ನತ ಮಾದ ಪ್ರೇಮವನ್ನು ತನ್ನದೆಂಬ ದೇಹಾದಿಕರಣಗಳಲ್ಲಿ ಎಸಗಿ (ತೂರಿ, ನಿಲ್ಲುವಂತೆ ಮಾಡಿ) ಕಾಡುತ್ತಿರುವದೇ ಮೋಹವು. (ಉದಾ– ಕೆಡುವ ದೇಹವಿದ್ದರೂ ಅದು ಕೆಡದು, ಸ್ಥಿರವಾದುದೆಂದು ದೇಹವನ್ನು ಮೋಹಿಸುವದು). ಅರಿವುಳ್ಳ ಪ್ರಾಜ್ಞರು ವಿಷಯ ಮೋಹಿಸುವ ಮುನ್ನ ಮೋಹದ ಮೋಸಗಾರಿಕೆಯನ್ನು ತಿಳಿದಿರಬೇಕು.

ತಾನಾರು ಜಗವಿದೇನೆಂತಾದುದೀ ತನು।
ವೇನೆಂದು ತಿಳಿಯಲಿಕ್ಕೆಡೆಯನು।
ತಾನೀಯದೆಲ್ಲರೊಳಿರ್ಪ ಕಾರಣದಿನ-।
ಜ್ಞಾನಮಿದೆಂದು ಭಾವಿಸು ನೀರೆ॥ 10 ॥

ಅಜ್ಞಾನದ ಲಕ್ಷಣ:– 'ತಾನಾರು ? ಜಗವಿದೇನು ? ಈ ದೇಹವು ಎಂತು (ಹೇಗೆ) ಜನಿಸಿತು ? ತನುತಾನೆಂಬ ಮೋಹವು ಯಾರಿಗೆ, ಯಾಕೆ ಹುಟ್ಟಿತು ? ಜನನ ಮರಣಗಳು ಯಾರಿಗೆ ? ನನಗೆ ಎಂದರೆ ನಾನಾರು ? ಈ ಸಮಸ್ಯೆಗಳು ಯಾರಿಗೆ ? ನನಗೆ ಎಂದರೆ ನಾನಾರು ? ಈ ಸಮಸ್ಯೆಗಳಿಗೆ ಪರಿಹಾರವೇನೆಂದು ತಿಳಿಯಲಿಕ್ಕೆ ಆಸ್ಪದಗೊಡದಂತೆ ತಾನು ಎಲ್ಲರ ಒಡಲೊಳಿಹುದು. ನಲ್ಲಳೆ (ನೀರೆ, ಚಲುವೆ), ಈ ರೀತಿ ಇರುವ ನಿಮಿತ್ತ ಇದಕ್ಕೆ ಅಜ್ಞಾನವೆಂದು ಭಾವಿಸು.

ಅರಿವಿಂದೆ ನೋಡಲ್ಕೆ ಪುಸಿಯಾಗಿ ತಾನಾವ।
ತೆರದಿಂದೆ ಮರಳಿ ಕಾಣಿಸದೆಂದು॥
ಪರಿಪಟ್ಟುಪೋಪುದರಿಂದದನೃತವದೆಂ।
ದರಿವುದು ಮೈತ್ರೇಯಿ ನಿಜದಿಂದೆ॥ 11 ॥

ಅವಿಚಾರದಲ್ಲಿ ತೋರ್ಪುದು. ವಿಚಾರಿಸಿ ನೋಡಲು ಕಾಣಿಸದು. ಅರಿವಿನಿಂದ (ವಿವೇಕದಿಂದ) ಈ ದೃಶ್ಯ ಪ್ರಪಂಚವೇನೆಂದು ನೋಡಲು, ಅದು ಪುಸಿಯಾಗಿ ಮರಳಿ ಕಾಣಿಸದಂತೆ ದಿಕ್ಕೆಟ್ಟು ಓಡುವದು. (ಮೃಗಜಲದಂತೆ ತೋರಿ, ವಿಚಾರದಿಂದ ನೋಡಲು) ಸುಳ್ಳಾಗುವ ಜಡದೃಶ್ಯ ಮಾಯೆಗೆ, ಮೈತ್ರೇಯಿ, ''ಅನೃತ'' ವೆಂದು ಅರಿಯಬೇಕು.

– ಇತಿ ಕಲ್ಪಿತ ಪುರುಷಗೆ ಅವಿದ್ಯಾಪಂಚಕ ನಿರೂಪಣೆ –

ಟಿಪ್ಪಣಿ :– ಈ ಸೂತ್ರವು ಅತ್ಯಂತ ಮಹತ್ವವಾದುದೆಂದು ಪ್ರಿಯ ವಾಚಕರು ಗಮನಿಸಬೇಕು.

## 8ನೇ ಸೂತ್ರ

ತಿಳಿ ಮೂಲಪ್ರಕೃತಿಯಿಂದಹಮಾದಿ ಕಾರ್ಯಸಂ ।
ಕುಳವಾದವೆಂದು ಹೆಂಗಳರನ್ನೆ ॥

ಹೆಣ್ಣುಮಕ್ಕಳಲ್ಲಿ ರತ್ನ ಪ್ರಾಯಳೇ, ಮೂಲ ಪ್ರಕೃತಿಯಿಂದ (ಮಾಯೆಯ ಒಂದಂಶ) ಮಹತ್ತತ್ತ್ವ, ಅದರಿಂದ ಮೂರು ಅಹಂಕಾರಗಳು, ಅದರಿಂದ ಮೂರು ಗುಣಗಳು, ಮೂರು ಲೋಕಗಳು ಉತ್ಪತ್ತಿಯಾದವು, ಎಂದು ತಿಳಿ.

ಅದು ತಾನನಾದಿ ತೋರ್ಪುದರಿಂದೆ ಘಟದವೋ।
ಲದು ಪುಸಿ ಕಲ್ಪಿತಾತ್ಮಕನಲ್ಲಿ॥
ಒದವಿದ ವಿಕೃತಿ ತಾನಹುದಾಗಿ ಕೆಡುವುದಂ।
ತದು ಮೂಲಪ್ರಕೃತಿ ನಿಖಿಳಬೀಜ॥ 1 ॥

ಕಲ್ಪಿತ ಪುರುಷನಲ್ಲಿ ಅನಾದಿಕಾಲದಿಂದ ತೋರ್ಪುದು ಪ್ರಕೃತಿ. (ಹಿಂದಿನ ಸೂತ್ರ–4) ಮೃತ್ತಿಕೆಯಲ್ಲಿ ಮಡಿಕೆಗಳು ಜನಿಸಿ ಕೆಡುವಂತೆ ವಿಕಲ್ಪರೂಪಾದ ಪ್ರಕೃತಿಯು ವಿಕೃತಿಯಾಗಿ (ಕಾಲವಶದಿಂದ) ಕೆಡುವದು ಸಹಜ. ಇದೇ ಮುಂದೆ ಹೇಳುವ ಕಾರ್ಯ ಸಂಕುಳ (ಸಮೂಹ)ಕ್ಕೆ ಮೂಲ ಬೀಜವು.

ಅದು ನಾನಾ ವಿಕೃತಿರೂಪದೆ ತೋರಿ ಪರಿಣಮಿ।
ಸಿದೊಡೆ ಮೊದಲು ಮಹತ್ತೆಂಬುದು॥
ಸುದತಿ ಕೇಳುದಿಸಿತಂತದು ತಾನ ಹಂತ್ರಿತ।
ಯದತೋರ್ಕೆಗಾದಿ ಕಾರಣವಕ್ಕು॥ 2 ॥

ಸ್ಫಟಿಕದಂತೆ ಹೊಳೆವ ಹಲ್ಲುಗಳುಳ್ಳ ಮೈತ್ರೇಯಿ, ಪ್ರಕೃತಿಯು ಅನೇಕ ರೂಪದಿಂದ ತೋರಿ ಪರಿಣಮಿಸಲು, ಮೊದಲು ಮಹತ್ತು ಹುಟ್ಟಿತು. ಅದುವೆ (ಮುಂದೆ ಹೇಳುವ) ಮೂರು ಅಹಂಕಾರಗಳ ತೋರ್ಕೆಗೆ ಮೂಲ ಕಾರಣವಾಯಿತು.

ಗುಣಬುದ್ಧಿ ಮೇಣವಗುಣಬುದ್ಧಿ ದುರ್ಗುಣ।
ಗುಣಬುದ್ಧಿಯೊಳು ಮಹತ್ತತ್ವವ ॥
ಗುಣವಂತೆ ತಿಳಿ ಬಳಿಕದನನ್ಯಥಾಜ್ಞಾನ।
ದಣು ರೂಪವಾ ಪ್ರಕೃತಿ ನಿಜವೆಂದು ॥ 3 ॥

ಮಹತ್ತತ್ತ್ವವು ಸತ್ಯ ಗುಣ, ರಜೋಗುಣ ಮತ್ತು ತಮೋ ಗುಣ ಇಂತು ಮೂರುಗುಣ ಗರ್ಭವೆಂದು, ಗುಣವಂತೆ ತಿಳಿ. ಬಳಿಕ ಅದು ಅನ್ಯಥಾ ಜ್ಞಾನದ ಅಣುರೂಪವು. ಹೀಗೆ ತೋರ್ಪುದು ಪ್ರ–ಕೃತಿಯ ಕಿಂಚಿತ್ ವಿಕೃತಿ.

ಒಳ್ಳಿದನಹುದಲ್ಲವೆರಡುಳ್ಳನೆಂಬೀ ಹಂ।
ಮೆಲ್ಲಕ್ಕೆ ಬೀಜವಿಂತಿದು ಬೇರೆ॥
ಇಲ್ಲವೆಂದೆನಿಸಿ ತೋರುವ ಬುದ್ಧಿ ತಾನೆ ತ।
ನ್ನಲ್ಲಿ ಮಹತ್ತೆಂದೆನಿಸುತಿರ್ಕು ॥ 4 ॥

ಮಹತ್ತು ತನ್ನೊಳು ತಾನು ಸವಿಕಲ್ಪಕ ಜ್ಞಾನದಿಂದ ಅಹಂ ರೂಪಾಗಿ 'ಇದು ಒಳ್ಳೆದಹುದು, ಇದು ಒಳ್ಳೇದಲ್ಲ' ಎಂದೂ ಮತ್ತೊಮ್ಮೆ ಅಹುದು– ಅಲ್ಲ' ಎರಡೂ ಭಾವಗಳಿಂದ ವರ್ತಿಸುವದು. ಈ ತೆರನಾದ (ಜಡ) ಬುದ್ಧಿ ತಾನೆ ತನ್ನಲ್ಲಿ ಮಹತ್ತೆ' ನಿಸಿ (ಮುಂದೆ ಹೇಳುವ) ಅಖಿಳ ವಿಕಾರಕ್ಕೆ ಬೀಜವೆನಿಸುವದು.

ಅದರಿಂದ ಹಂತ್ರಿತಯದ ತೋರ್ಕೆಯಪ್ಪುದಂ।
ತದು ಸಾತ್ವಿಕಾದಿ ಗುಣಂಗಳ ॥
ಉದಯಕ್ಕೆ ಹೇತು ವದನ್ಯಥಾಜ್ಞಾನದ।
ಪದವಾದಿಬೀಜವೀ ತ್ರಿಜಗಕ್ಕೆ ॥ 5 ॥

ಆ ಮಹತ್ತಿನಿಂದ ಮೂರು ಅಹಂಕಾರಗಳು (ಅನಿಮಿತ್ತವಾಗಿ ಜನಿಸಿ) ತೋರುವವು. ಇವು ಸತ್ವ, ರಜ, ತಮೋಗುಣಗಳ ಉದಯಕ್ಕೆ ಕಾರಣವು. (ಮುಂದೆ ಹೇಳುವ) ಮೂರು ಹಂಕಾರಗಳೆ ಅನ್ಯಥಾ ಜ್ಞಾನದ ತವರು, ಮೂರು ಜಗತ್ತಿಗೆ ಮೂಲ ಬೀಜ.

[ ಟಿಪ್ಪಣಿ :– ಅಜ್ಞಾನದಿಂದ ಅನ್ಯಥಾ ಜ್ಞಾನದೆವೆ (ಕಣ್ಣಲ್ಲಿ) ತೆರೆಯಲು ಅದಕ್ಕೆ ಮಹತ್ತು ಎಂಬ ನಾಮ. ಪರಮಾತ್ಮನಿಗೆ ಅನ್ಯವಾದ ವಸ್ತು ಬೇರೊಂದಿಲ್ಲ, ಇದೆ, ಎಂಬ ತಪ್ಪು ತಿಳುವಳಿಕೆಯೆ ಅನ್ಯಥಾ ಜ್ಞಾನವು. ]

ಮೊದಲು ವೈಕಾರಿಕ ವದರಿಂದೆ ತೈಜಸ।
ವದರಿಂದೆ ಭೂತಾದಿಯೆನಿಸುವವು ॥
ಒದವಿದ ಪೆಸರು ವಡೆದ ಮೂರಹಂಕೃತಿ।
ಯುದಯಿಸಿ ತೋರ್ಪವಾ ಕ್ರಮದಿಂದೆ ॥ 6 ॥

ಮೊದಲು ವೈಕಾರಿಕ ಅಹಂಕಾರ, ಅದರಿಂದ ತೈಜಸ ಅಹಂಕಾರ, ಅದರಿಂದ ಭೂತಾದಿ ಅಹಂಕಾರ, ಈ ರೀತಿ ಹೆಸರು ಪಡೆದು ಮಹತ್ತತ್ತ್ವದಿಂದ ಮೂರಹಂಕಾರಗಳು ಉದಿಸಿ ತೋರುವು.

ಸಕಲ ವಿಜ್ಞಾನಕ್ಕೆ ನಿಖಿಳ ವಿಕಾರಕ್ಕೆ।
ಪ್ರಕೃತಿ ತಾನಾಗಿ ಪೊಳೆಯುತಿರ್ಪ ॥
ಸುಕರದಹಂಕೃತಿ ತಾನೆ ತಿಳಿಯೆ ವೈಕಾ।
ರಿಕವಪ್ಪುದದು ಸತ್ವಗುಣ ಮೂಲ ॥ 7 ॥

ಸಕಲ ವಿಜ್ಞಾನಕ್ಕೆ, ನಿಖಿಳ ವಿಕಾರಕ್ಕೆ, ಪ್ರಕೃತಿ (ಒಡಲು) ತಾನಾಗಿ ಪೊಳೆಯುವ ಸುಕರದ ವೈಕಾರಿಕ ಅಹಂಕಾರವು ತಿಳಿಯೆ, ತಾನೆ ಸತ್ವಗುಣಕ್ಕೆ ಮೂಲವಾಗಿದೆ.

ರಾಗಕ್ಕೆ ಸಕಲ ಸಂಯೋಗಕ್ಕೆ ನಿಜಬೀಜ।
ವಾಗಿ ತೋರ್ಪಹಮು ತೈಜಸವೆಂದು ॥
ರಾಗಾಧರಾಂಚಿತೆ ತಿಳಿಯದು ತಾನೆ ರ।
ಜೋಗುಣದಾದಿಯೆಂದೆನಿಸಿರ್ಕು ॥ 8 ॥

ರಾಗಕ್ಕೆ (ವಿಷಯಗಳಲ್ಲಿ ಸುಖ ಬುದ್ಧಿ) ಯಾವತ್ತೂ ವಿಷಯ ಇಂದ್ರಿಯಗಳ ಸಂಯೋಗ (ಸಂಪರ್ಕ)ಕ್ಕೆ ತಾನೆ ಬೀಜವಾಗಿ ತೋರುವ ಅಹಂಕಾರವೇ ತೈಜಸವೆಂದು ತಿಳಿ. ಕೆಂಪು ವರ್ಣದಿಂದ ಹೊಳೆವ ತುಟಿಯುಳ್ಳ ಮೈತ್ರೇಯಿ, ರಜೋಗುಣಕ್ಕೆ ಈ ತೈಜಸಹಂಕಾರವು ಕಾರಣವಾಗಿದೆ.

ಭೂತಂಗಳಿಗೆ ಜಾಡ್ಯ ಬೌತಿಕಂಗಳಿಗಾದಿ।
ಭೂತವೆನಿಸುವಹಂಕಾರವೆ ॥
ಭೂತಾದಿಯೆಂದೆನಿಪುದು ತಮೋಗುಣಕದು।
ಹೇತುವೆಂದರಿವುದಾಯತನೇತ್ರೆ ॥ 9 ॥

ಆಕಾಶಾದಿ ಪಂಚ ಮಹಾಭೂತಗಳಿಗೆ, ಅವುಗಳಿಂದ ಹುಟ್ಟಿದ ಜಡವಾದ ಭೌತಿಕ ವಸ್ತುಗಳಿಗೆ ಮೂಲವಾದುದೆ ಭೂತಾದಿ ಅಹಂಕಾರವು. ವಿಶಾಲಾಕ್ಷಿಯೇ, ಇದು ತಮೋಗುಣಕ್ಕೆ ಹೇತುವಾಗಿದೆ, ಎಂದರಿವುದು.

ಜ್ಞಾನವೆ ಸತ್ವವಜ್ಞಾನವೆ ತಮಮಿನ್ನು।
ಜ್ಞಾನಾಜ್ಞಾನದ್ವಯಾತ್ಮಕವಾಗಿ ॥
ತಾನಿಹುದದು ರಜವೆನಿಪುದೀ ಗುಣ ಮೂರು।
ತಾನೆ ಲೋಕತ್ರಯಗಂಗಳ ಬಿತ್ತು ॥ 10 ॥

ಜ್ಞಾನವೆ ಸತ್ವಗುಣ. ಅಜ್ಞಾನವೆ ತಮೋಗುಣ. ಜ್ಞಾನಾಜ್ಞಾನಗಳ ಮಿಶ್ರಣವೆ ರಜೋಗುಣ. ಇವೇ (ಮುಂದೆ ಹೇಳುವ) ಮೂರುಲೋಕಗಳಿಗೆ ಬೀಜವಾಗಿವೆ.

ಮೂರು ಗುಣಗಳೊಳಾ ಮೂರಹಂಕೃತಿ ಬೇರೆ।
ಬೇರೊಂದಿ ನಿಂದಾಕ್ಷಣದೊಳು।
ಮೂರು ಲೋಕಂಗಳುದಿಸಿ ತೋರುತಿಹವೆಂದು।
ನೀರೆ ನೀನರಿವುದೀ ಕ್ರಮದಿಂದ ॥ 11 ॥

ಮೂರುಗುಣಗಳಲ್ಲಿ, ಆ ಮೂರು ಅಹಂಕಾರಗಳು ಬೇರೆ ಬೇರೆ ಹೊಂದಾಣಿಕೆಯಿಂದ ನಿಲ್ಲಲಾಗಿ ಮೂರು ಲೋಕಗಳು ಉದಿಸಿ ತೋರುವವೆಂದು ನೀನರಿವುದು.

ತರುಣಿ ಕೇಳಂತಃಕರಣ ಬಾಹ್ಯೇಂದ್ರಿಯ ಭೂತ।
ಪರಿಕರಂಗಳೆ ಲೋಕತ್ರಯವಿವು ॥
ಪರಿವಿಡಿಯಿಂದಹಂಕಾರ ತ್ರಿತಯದಲ್ಲಿ।
ನಿರುತದಿಂದುದಿಸಿ ತೋರುವವಿಂತು ॥ 12 ॥

ತರುಣಿ ಕೇಳು. ಮನಾದಿ ಅಂತಃಕರಣವು ಆಂತರಿಕ ಲೋಕ. ಬಾಹ್ಯ ಇಂದ್ರಿಯಗಳಾದ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯ ಇವುಗಳ ಸಮೂಹವೆ ಮಧ್ಯಮವಾದ ಮೃತ್ಯುಲೋಕ ಮತ್ತು ಪಂಚ ಭೂತ ಭೌತಿಕ ಸಮೂಹವೇ ಮೂರನೆಯ ಲೋಕ, ಈ ಮೂಲೋಕಗಳು ಕ್ರಮವಾಗಿ ವೈಕಾರಿಕ, ತೈಜಸ ಮತ್ತು ಭೂತಾದಿ ಅಹಂಕಾರಗಳಿಂದ ಯಾವಾಗಲೂ ಉದಿಸಿ ಜೀವರಿಗೆ ತೋರುವವು.

– ಇತಿ ಮಹದಾದಿ ಜಗದ ಉತ್ಪತ್ತಿಕ್ರಮ ನಿರೂಪಣೆ –

## 9 ನೇ ಸೂತ್ರ

ಭೂತಾದಿಯಿಂದಾದವೈದುಭೂತಂಗಳಾ ।
ಭೂತದಿಂದಖಿಳವಿಷಯುವಕ್ಕು ॥

ಭೂತಾದಿ ಹಂಕಾರದಿಂದ ಆಕಾಶ, ವಾಯು, ಅಗ್ನಿ, ಜಲ, ಭೂಮಿ ಈ ಐದು ಭೂತಗಳು ಮತ್ತು ಅವುಗಳಿಂದ ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಪಂಚ ವಿಷಯಗಳು ಉತ್ಪತ್ತಿಯಾದವು.

ಭೂತಾದಿಯೆಂಬಹಂಕಾರದಿಂದವೆ ಪಂಚ।
ಭೂತಂಗಳುದಿಸಿದವವು ತಾವು ॥
ಈ ತೋರ್ಪ ವಿಷಯ ಸಂಭವ ಬೀಜವಪ್ಪವಾ।
ಭೂತಗಳಂಬರಾದಿಗಳಕ್ಕು ॥ 1 ॥

(ಅರ್ಥ ಮೇಲೆ ಹೇಳಿದಂತೆ) ಪಂಚವಿಷಯಗಳಿಗೆ ಅಂಬರ (ಆಕಾಶ) ಆದಿ ಪಂಚಭೂತಗಳೆ ಬೀಜವಾಗಿವೆ.

ತರಳಾಕ್ಷಿ ಕೇಳಂಬರಾನಿಲಾನಲ ವಾರಿ।
ಧರೆಯೆಂಬವೈದು ಭೂತಂಗಳು ॥
ಪರಿವಿಡಿದಿಪ್ಪವವರ ಲಕ್ಷಣಂಗಳ।
ನೊರೆವೆನಾನಿಲ್ಲಿ ನೀನರಿಯಲ್ಕೆ ॥ 2 ॥

ಚಂಚಲ ನೇತ್ರಗಳ ಚಲುವೆ, ಆಕಾಶಾದಿ ಪಂಚಭೂತಗಳ ಲಕ್ಷಣಗಳನ್ನು ನಾನಿಲ್ಲಿ ಹೇಳುವೆನು, ನೀನು ಅರಿಯುವ ಹಾಗೆ.

ಇರಲೆಡೆಯಾಗಿ ಸುಷಿರ ರೂಪವಾಗಿ ಸು।
ಸ್ಥಿರ ಸೂಕ್ಷ್ಮಮಾಗಿ ಭರಿತಮಾಗಿ ॥
ವರಶಬ್ದಗುಣಯುತಮಾಗಿರಲದು ತಾನೆ।
ನಿರುತದಿಂದರಿವುದಂಬರವೆಂದು ॥ 3 ॥

ವಾಯು ಆದಿಯಾಗಿ ನಾಲ್ಕು ಭೂತಗಳಿಗೆ ಆಶ್ರಯವಾಗಿ, ಪೊಳ್ಳಾಗಿ, ಸುಸ್ಥಿರ ಹಾಗೂ ಸೂಕ್ಷ್ಮವಾಗಿ, ಎಲ್ಲ ದಿಕ್ಕುಗಳಲ್ಲಿ ಭರಿತವಾಗಿ (ತುಂಬಿ), ಶಬ್ದಗುಣವುಳ್ಳುದಾಗಿರುವದೆ ಆಕಾಶವು.

ಚಲಿಸುವೆಚ್ಚರಿಸುವ ತೊಳಲುವ ರೂಪಿಂದೆ।
ಸಲೆ ಶಬ್ದಸ್ಪರ್ಶನ ಗುಣದಿಂದೆ ॥
ಬಲಮುಳ್ಳುದಾಗಿರಲದು ವಾಯುವೆಂದರಿ।
ಲಲನೆ ಮೈತ್ರೇಯಿ ನೀನೊಲವಿಂದೆ ॥ 4 ॥

ಚಲಿಸುವ, (ಮಲಗಿದವರನ್ನು) ಎಚ್ಚರಿಸುವ, ತೊಳಲುವ ಶಬ್ದ ಹಾಗೂ ಸ್ಪರ್ಶ ಗುಣಗಳಿಂದ ಕೂಡಿ ಬಲವುಳ್ಳುದಾಗಿರುವದೆ ವಾಯುವೆಂದು, ಲಲನೆ ಮೈತ್ರೇಯಿ, ಒಲವಿನಿಂದ ನೀನರಿ.

ಬೆಳಗುವ ಸಂತಾಪಿಸುವ ಸತಿ ಮೇಲಕು।
ಚ್ಚಳಿಸುವ ಪಚಿಸುವ ನಿಜದಿಂದೆ॥
ತಿಳಿ ಶಬ್ದ ಸ್ಪರ್ಶನ ರೂಪೆಂಬ ಗುಣದಿಂದೆನಿಲೆ।
ವಹ್ನಿಯದು ತಾನೆ ಲಲಿತಾಂಗಿ ॥ 5 ॥

ಬೆಳಗುವ, (ಉಷ್ಣತೆಯಿಂದ) ತಾಪಗೊಡುವ, ಮೇಲೆ ಮುಖವಾಗಿ ಉರಿವ, (ಅನ್ನವನು) ಪಚನಮಾಡುವ, ಶಬ್ದ, ಸ್ಪರ್ಶ, ರೂಪು ಈ ಮೂರು ಗುಣಗಳಿಂದ ಕೂಡಿರುವದೇ ಅಗ್ನಿಯೆಂದು, ಲಲಿತಾಂಗಿ, ನೀನರಿವುದು.

ದ್ರವಣ ಪಿಂಡೀಕರಣಾದಿ ಲಕ್ಷಣದಿಂದೆ।
ರವಮುಖ್ಯವಾಗಿ ನಾಲ್ಕೆನಿಸುವ ॥
ವಿವಿಧ ಗುಣಂಗಳಿಂದೆಸೆವುದೆ ಜಲವೆಂದು।
ಯುವತಿ ಚಿತ್ತದೊಳವಧರಿಪುದು ॥ 6 ॥

ಪ್ರವಾಹರೂಪದಿಂದ, (ಭರ್ಫದಂತೆ) ಘನರೂಪದಿಂದ, ಶಬ್ದ, ಸ್ಪರ್ಶ, ರೂಪ ಮತ್ತು ರಸ ಈ ನಾಲ್ಕು ಗುಣಗಳಿಂದ ಹೊಳೆವುದೇ ಜಲವೆಂದು, ಯುವತಿ (ತರುಣಿ), (ಜಲ ತತ್ತ್ವದಿಂದಾದ) ನಿನ್ನ ಚಿತ್ತಗೊಟ್ಟು ಗಮನಿಸು.

ಅತಿಶಯಮೆನೆ ಧೃತಿ ಕಾಠಿಣ್ಯ ಗೌರವ।
ಸ್ಥಿತಿಯೆಂಬ ನಿಜದಿಂದೆ ಗಂಧಾದಿ॥
ನುತಗುಣದಿಂದ ತೋರ್ಪುದನೆ ಮೇದಿನಿಯೆಂದು।
ಮತಿವಂತೆ ನೀನಿಂತು ಬಗೆವುದು ॥ 7 ॥

ಅತಿಶಯವಾದ ಧಾರ್ಢ್ಯ, ಕಾಠಿಣ್ಯ, ಗೌರವ ಸ್ಥಿತಿಯಿಂದಿರುವ, ಶಬ್ದ ಸ್ಪರ್ಶ, ರೂಪ, ರಸ, ಗಂಧ (ಕೊನೆಯದು ಭೂಮಿ ಗುಣ) ಈ ಐದು ಗುಣಗಳಿಂದ ತೋರುವದೆ ಮತಿವಂತೆ, ಮೇದಿನಿ (ಭೂಮಿ) ಎಂದು ನೀನು ತಿಳಿವುದು.

ಗಗನಕೊಂದಾ ವಾಯುವಿಗೆ ಬಳಿಕೆರಡು ವ।
ಹ್ನಿಗೆ ಮೂರು ನಾಲ್ಕು ವಾರಿಗೆ ಮತ್ತೆ ॥
ಬಗೆಯಲೈದವನಿಗೆ ರವಮುಖ್ಯ ಗುಣವಿಂತು।
ನೆಗಳಿರ್ಪವೀ ಕ್ರಮದೊಡಗೂಡಿ ॥ 8 ॥

ಆಗಸಕೆ1, ವಾಯುವಿಗೆ 2, ಅಗ್ನಿಗೆ 3, ನೀರಿಗೆ 4 ಮತ್ತು ಭೂಮಿಗೆ 5 ಗುಣಗಳು ಇರುವವೆಂದು ಅರಿವುದು.

ರಾಗಾದಿ ದೋಷದಾಗರಮಾಗಿ ಸುಖ ದುಃಖ।
ಭೋಗಕ್ಕೆ ನಿಜಬೀಜ ರೂಪಾಗಿ॥
ಆಗಳೊಂದಿರ್ಪವಾ ಶಬ್ದಾದಿ ವಿಷಯಂಗ।
ಳಾ ಗಗನಾದಿಗಳೊಡನಿಂತು ॥ 9 ॥

ಪಂಚವಿಷಯಗಳ ಧರ್ಮ ಹೇಗಿದೆ ? ರಾಗದ್ವೇಷಾದಿ ದೋಷಗಳ ಆಗರ (ಖಣಿ), ಸುಖ, ದುಃಖ, ಎರಡರ ಮಿಶ್ರ ಈ ಭೋಗಗಳಿಗೆ ಬೀಜ ರೂಪಾಗಿ ಯಾವಾಗಲೂ ಈ ವಿಷಯಗಳು ಆಕಾಶಾದಿ ಪಂಚ ಭೂತಗಳೊಡನೆ ಬೆರೆತು ಮೋಹಕವಾಗಿವೆ.

ಜಡಮಾಗಿ ಖಂಡಿತಮಾಗಿ ದೃಶ್ಯತೆಯಾಗಿ।
ಬಿಡಲರಿದಾಗಿ ಕ್ಷಣಿಕಮಾಗಿ॥
ಮಡದಿಕೇಳಾ ವಿಶ್ವವಿಷಯಂಗಳಾ ಭೂತ।
ದೊಡನಗಲದೆ ಮೋಹಿಸುತಮಿರ್ಕು ॥ 10 ॥

(ವಿಷಯಗಳ ಲಕ್ಷಣವನ್ನೆ ಮುಂದರಿಸುವರು). ಜಡವಾಗಿ (ಅರಿಸಿಕೊಳ್ಳುವ ಗುಣ) ಖಂಡಿತವಾಗಿ, ದೃಶ್ಯ (ಕಾಣಿಸಿಕೊಂಬ) ರೂಪಾಗಿ, (ಅವನ್ನು) ಬಿಡಲಿಕ್ಕೆ ಬಾರದಷ್ಟು ಮೋಹಕವಾಗಿ, ಕ್ಷಣಭಂಗುರವಾಗಿ, ಮಡದಿ ಕೇಳು, ವಿಶ್ವದೊಳಗಿನ ಎಲ್ಲ ವಿಷಯಗಳು ಪಂಚಭೂತಗಳೊಡನೆ (ಕ್ರಮವಾಗಿ) ಅಗಲದೆ ಇರುತ್ತ ಜಡ ಜೀವಿಗಳಿಗೆ ಮೋಹ ಪಾಶವೆಸಗುತ್ತ ಇರುವವು.

ತನುವಿನುದಯ ಭೇದದೊಳು ಸಚೇತನವಚೇ।
ತನವೆಂಬೆರಡು ರೂಪವನೆ ತೋರ್ಪ॥
ಅನಿತು ವಿಷಯವೆಸೆವವು ಚಿತ್ರಗತಿಯಿಂದೆ।
ಜನಕೆ ಸಂಸೃತಿ ಬಂಧಕರಮಾಗಿ ॥ 11 ॥

ದೇಹ ಜನಿಸಿ ಮರಣವಾಗುವವರೆಗೆ ಈ ವಿಷಯಗಳು ಕೆಲವು ಸಚೇತನ, ಕೆಲವು ಅಚೇತನ ಎಂಬೆರಡು ರೂಪಾಗಿ, ಸಿನೇಮಾದ ಚಿತ್ರಗಳಂತೆ ತೋರುತ್ತ ಅಡಗುತ್ತ ಈ ವಿಶ್ವವಿಷಯಗಳು ಅಜ್ಞಜನರನ್ನು ಸಂಸಾರ ಬಂಧನದಲ್ಲಿ ನೂಕುತ್ತ ರಂಜಕವಾಗಿ ತೋರುವವು.

– ಇತಿ ಪಂಚಭೂತಗಳು ಗುಣಗಳು ಅವುಗಳಿಂದ ಉತ್ಪತ್ತಿಯಾದ ಪಂಚವಿಷಯಗಳ ನಿರೂಪಣೆ –

## 10ನೇ ಸೂತ್ರ

**ಬಗೆಯೆ ವೈಕಾರಿಕ ತೈಜಸಮಿಶ್ರದಿಂ ।**
**ದೊಗೆದವಖಿಳ ಕರಣಂಗಳು ॥**

ವಿಚಾರಿಸಲು ವೈಕಾರಿಕ ಮತ್ತು ತೈಜಸ ಇವೆರಡು ಹಂಕಾರಗಳ ಮಿಶ್ರಣದಿಂದ ಎಲ್ಲ ಕರಣಗಳು ಜನಿಸಿದವು. (ಯಾವವೆಂದರೆ ಐದು ಕರ್ಮೇಂದ್ರಿಯ, ಐದು ವಾಯುಗಳು, ಐದು ಜ್ಞಾನೇಂದ್ರಿಯ ಮತ್ತು ಐದು ಅಂತಃಕರಣಗಳು)

**ಭಾಮಿನಿ ವಾಕ್ಪಾಣಿ ಪಾದ ಪಾಯೂಪಸ್ಥ।**
**ನಾಮದ ಕರ್ಮೇಂದ್ರಿಯಂಗಳು ॥**
**ಆ ಮಹಾ ತೈಜಸವೆಂಬ ಹಂಕೃತಿಯಿಂದೆ।**
**ನೇಮದಿಂದುದಯವಾದವು ನೋಡು ॥ 1 ॥**

ಭಾಮಿನಿ, ನಿನ್ನೊಳಗೆ ತಿಳಿದು ನೋಡು. ವಾಕ್, ಪಾಣಿ, ಪಾದ ಪಾಯು (ಗುದ) ಮತ್ತು ಉಪಸ್ಥ (ಜನನೇಂದ್ರಿಯ) ಎಂಬ ನಾಮದ ಕರ್ಮೇಂದ್ರಿಯಗಳು ತೈಜಸಹಂಕಾರದಿಂದ ಉದಯವಾದವು.

**ನುಡಿವುದು ಪಿಡಿವುದು ನಡೆವುದು ಬಿಡುವುದು।**
**ಪಡೆವುದು ವಿಷಯ ಸುಖವನೆಂಬ।**
**ಗಡಣದ ವರ್ತನವನರಿಯಲಾವಚನಾದಿ ।**
**ಯೊಡನೊಂದಿ ಪರಿವಿಡಿದಿರ್ಪವು ॥ 2 ॥**

ಅವುಗಳ ಕರ್ಮಗಳು ಕ್ರಮವಾಗಿ ನುಡಿವುದು, ಹಿಡಿವುದು, ನಡೆವುದು, (ಮಲಮೂತ್ರ) ಬಿಡುವುದು, ಮತ್ತು ವಿಷಯ (ರತಿ) ಸುಖ ಪಡೆವುದು, ಎಂಬೀ ವರ್ತನೆಗಳು ವಚನ, ಮುಂತಾದ ಪದಾರ್ಥಗಳನೊಡನೆ ಸಂಧಿಸುತ್ತ ಈ ಪಂಚಕರ್ಮೇಂದ್ರಿಯಗಳಿರುವವು.

**ಪ್ರಾಣಾಪಾನ ವ್ಯಾನೋದಾನ ಸಮಾನವೆಂ।**
**ದೂಣೆಯಮಿಲ್ಲದೈದಸುಗಳು ॥**
**ಮಾಣದೆ ತೈಜಸದಿಂದುದಿಸಿದವೆಂದು।**
**ಜಾಣೆ ಮೈತ್ರೇಯಿ ನಿಶ್ಚಯಿಪುದು ॥ 3 ॥**

ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಪಂಚ ಪ್ರಾಣಗಳು ಯಾವ ನ್ಯೂನತೆಯಿಲ್ಲದೆ, ಹಗಲಿರುವ ಈ ವಾಯುಗಳು ತೈಜಸಹಂಕಾರದಿಂದ ಉದಿಸಿದವೆಂದು ಜಾಣೆ ಮೈತ್ರೇಯಿ, ನೀನು ನಿಶ್ಚಯಿಸು.

ಧರಿಸಿ ದೇಹವನು ಕಿಟ್ಟವನು ವಿಸರ್ಜಿಸಿ।
ಕರಗಿದಶನ ರಸವನು ಪೀರ್ದು।
ಪಿರಿದುದ್ಗಾರಿಸಿಯನ್ನುವನು ಸಮಭಾಗಿಸಿ।
ಚರಿಪವಾ ಪರಿವಿಡಿದಸುಗಳು ॥ 4 ॥

ದೇಹವನ್ನು ಧರಿಸಿ (ಎತ್ತಿ ಹಿಡಿದು), ಒಡಲೊಳಗಿನ ಕಿಟ್ಟ (ಮಲ)ವನ್ನು ವಿಸರ್ಜಿಸಿ, ಪಚನವಾದ ಅನ್ನ ರಸವನ್ನು ಹೀರಿ, ಮೇಲ್ಮುಖವಾಗಿ ಉದ್ಗಾರಿಸಿ, ಅನ್ನರಸವನು (ಎಲ್ಲ ಅಂಗಾಂಗಗಳಿಗೆ) ಸಮನಾಗಿ ಹಂಚಿ ಆ ಪಂಚವಾಯುಗಳು ದೇಹದಲ್ಲಿ ಸಂಚರಿಸುವವು.

ಶ್ರವಣ ಚರ್ಮಾಕ್ಷಿ ಜಿಹ್ವಾಘ್ರಾಣವೆಂಬ ನಾ।
ಮವನುಳ್ಳ ಬುದ್ಧೀಂದ್ರಿಯಂಗಳು।
ಹವಣಿಸಿ ವೈಕಾರಿಕಾ ಹಂತೆಯಿಂದೆ ತೋ।
ರುವವು ಮೈತ್ರೇಯಿ ಸಂಭಾವಿಸು ॥ 5 ॥

ಶ್ರೋತ್ರ, ತ್ವಚೆ, ನೇತ್ರ, ನಾಲಿಗೆ ಮತ್ತು ನಾಸಿಕ (ಮೂಗು) ಎಂಬ ಹೆಸರಿನ ಪಂಚಜ್ಞಾನೇಂದ್ರಿಯಗಳು ಪ್ರಮಾಣಿಸಿ ವೈಕಾರಿಕ ಹಂಕಾರದಿಂದ ತೋರುವವು ಎಂದು ಮೈತ್ರೇಯಿ ಸಂಭಾವಿಸು (ಪರಿಭಾವಿಸು).

ರವಮುಖ್ಯವಾದ ವಿಷಯ ಸಮುದಾಯವನು।
ತವೆ ಕೇಳ್ವಸೋಂಕುವಾಲೋಕಿಪ॥
ಸವಿವ ವಾಸಿಸುವ ವಿಜ್ಞಾನ ವರ್ತನವಿಡಿ।
ದವಿರತಮೆಸೆವವಾಕ್ರಮದಿಂದೆ ॥ 6 ॥

(ಬೇರೆ ಬೇರೆ) ಶಬ್ದ ಸಮುದಾಯ ಕೇಳುವದು, (ಪದಾರ್ಥ) ಸೋಂಕು (ಮುಟ್ಟುವದು), ನೋಡುವದು, ಸವಿಯು (ಉಣ್ಣು) ವದು, ಮೂಸಿಸುವದು,ಇದು (ಕ್ರಮವಾಗಿ ಮೇಲೆ ಹೇಳಿದ ಬುದ್ಧೀಂದ್ರಿಯಗಳ ವಿಜ್ಞಾನ ವರ್ತನವಾಗಿದೆ (ಅವಿರತವಾಗಿ) ಸದಾಕಾಲ.

ಸತಿ ಕೇಳು ತೈಜಸ ವೈಕಾರಿಕದ ಮಿಶ್ರ।
ಗತಿಯೊಳ್ಮನೋಬುದ್ಧ್ಯ ಹಮು ಚಿತ್ತ।
ಅತಿಶಯ ಜ್ಞಾತೃವೆಂದೆನಿಸುವ ಕರಣ ಸಂ।
ತತಿ ಪರಿಪಾಟಿಯಿಂದೊಗೆವವು ॥ 7 ॥

ಸತಿ ಕೇಳು, ತೈಜಸ ಮತ್ತು ವೈಕಾರಿಕ ಇವೆರಡು ಹಂಕಾರಗಳ ಮಿಶ್ರಗತಿಯಿಂದ ಮನ, ಬುದ್ಧಿ, ಹಂಕಾರ, ಚಿತ್ತುಮತ್ತುಮಿಗಿಲಾದ ಜ್ಞಾತೃ ಎಂಬ ಐದು ಅಂತಃಕರಣಗಳು ಜನಿಸುವವು.

ನೆನಹು ನಿಶ್ಚಯ ಗರ್ವಧಾರಣವರಿವೆಂಬಿ।
ವನು ಬಿಡದಾ ಕ್ರಮದೊಡಗೂಡಿ ॥
ಅನಿತು ಕರಣಮಿರ್ಪವರಿದೆನೆ ಜಯಿಸಲ್ಕೆ।
ತನುವಿಕೃತಿಗೆ ಮೊಟ್ಟಮೊದಲಾಗಿ ॥ 8 ॥

(ಇವುಗಳ ಧರ್ಮ) : ನೆನಹು, ನಿಶ್ಚಯ, ಗರ್ವದಿಂದ (ಹಮ್ಮಿನಿಂದ) ಇರು, ಸ್ಮರಣದಲ್ಲಿರಿಸು ಮತ್ತು ಅರಿವು, ಎಂಬಿವು ಕ್ರಮವಾಗಿ ಅಂತಃಕರಣದ ಧರ್ಮಗಳು ಇವನ್ನು ಜಯಿಸುವದು ಕಠಿಣ. (ಕರಣ ವಿಜಯದಿಂದ ಬೇರೆಕಲಿತನವಿಲ್ಲ). ದೇಹದ ಜನನಾದಿ ಆರು ವಿಕಾರಗಳಿಗೆ ಇವೇ ಬೀಜ.

ಪೇಳಿದೀ ಭೂತಪಂಚಕವ ದಶೇಂದ್ರಿಯ।
ವಾಲೋಕಿಸಲ್ಪ್ರಾಣ ಪಂಚಕ॥
ಮೇಳವೈದಂತಃಕರಣವೆಂಬ ಬಹುತತ್ವ।
ಜಾಲದೊಬ್ಬುಳಿ ತೋರತನುವಕ್ಕು ॥ 9 ॥

ಇಂತು ಪೇಳಿದ ಐದು ಗಗನಾದಿ ಭೂತಗಳು, ಹತ್ತು ಬಾಹ್ಯೇಂದ್ರಿಯಗಳು, ಪಂಚಪ್ರಾಣಗಳು, ಮೇಲೆ ಐದು ಅಂತಃಕರಣಗಳು, ಇಂತು ಇಪ್ಪತ್ತೈದು (ಪಂಚ ವಿಂಶತಿ) ತತ್ತ್ವಗಳ 'ಜಾಲದೊಬ್ಬುಳಿ'– ಸಮೂಹವೇ ತೋರುವೀ ಸ್ಥೂಲತನುವು.

ಇನಿತು ತತ್ವಾನುರೂಪಿತಮಾದ ತನು ತನ್ನ।
ದೆನಿಪ ತಾನೆಂಬವೆರಡು ಹಂತೆ॥
ತನಗುಳ್ಳವನು ತಾನೆ ಕಲ್ಪಿತಪುರುಷನ।
ಪ್ಪನು ಕೇಳು ತನ್ನ ಜ್ಞಭ್ರಮೆಯಿಂದೆ ॥ 10 ॥

ಇನಿತು (25) ತತ್ತ್ವಾನುರೂಪಿತಮಾದ ಈ ತನು 'ತಾನು, ತನ್ನದು' ಎಂಬೆರಡು ಹಂಕಾರಗಳಿಂದ ಮೆರೆವ ಕಲ್ಪಿತ ಪುರುಷನು ತನ್ನ ಅಜ್ಞಭ್ರಮೆಯಿಂದ ಮೂರು ಕಾಲ, ಮೂರವಸ್ಥೆಗಳಲ್ಲಿ ಸಂದು ಇಲ್ಲದೆ ಇರುವನು.

ಬೀಜವೇ ವೃಕ್ಷವಾಬೀಜ ಮುಮಾದವೋ।
ಲೀ ಜಗಜ್ಜೀವನು ರೂಪಿತನಾಗಿ॥
ರಾಜಿಸುತಿರ್ಪನಂತಾ ಕಲ್ಪಿತನು ಜಗ।
ದ್ಬೀಜ ಭಾವಾನ್ವಿತ ನದರಿಂದೆ ॥ 11 ॥

ಬೀಜವೆ ವೃಕ್ಷ, ಆ ವೃಕ್ಷ (ಗಿಡ) ದಲ್ಲಿ ಮತ್ತೆ ಅನೇಕ ಬೀಜಗಳು ಹುಟ್ಟುವ ಹಾಗೆ, ಕಲ್ಪಿತ ಪುರುಷನು ''ಜಗದ್ಬೀಜಭಾವಾನ್ವಿತನಾಗಿ'' (ಜಗದ್ಬೀಜ ರೂಪಿತನಾಗಿ) ರಾರಾಜಿಸುತ್ತಿರುವನು. (ಇದೇ ಸಂಧಿ, 6 ನೇ ಸೂತ್ರ, 9 ನೇ ನುಡಿ ನೋಡಿರಿ.)

ಕಾದ ಕಬ್ಬುನದೊಂದು ಘಟ್ಟಿಯೊಳಗಣೆತ।
ಮಾದ ಕಿಡಿಗಳುದಯಿಸುವಂತೆ ॥
ಭೇದರೂಪಿನ ಜಗಜ್ಜೀವರಾ ಕಲ್ಪಿತ।
ನಾದ್ದೋರ್ವನಲ್ಲಿ ಮಸಗಿತೋರ್ಕು ॥ 12 ॥

ಒಂದು ಕಬ್ಬಿಣದ ಪಟ್ಟಿಯನ್ನು ಕಾಸಿ ಸುತ್ತಿಗೆಯಿಂದ ಹೊಡೆದರೆ, ಅಸಂಖ್ಯ (ಅಗ್ನಿಯ) ಕಿಡಿಗಳು ಉತ್ಪತ್ತಿಯಾಗುವಂತೆ, ಭೇದ ರೂಪಿನ (ಅನೇಕ) ಜಗಜ್ಜೀವರು ಆ ಕಲ್ಪಿತನಾದ ಒಬ್ಬ ಪುರುಷನಲ್ಲಿ ವಿಜ್ರಂಭಿಸಿ (ಉಬ್ಬಿ) ತೋರುವವು.

ಕೊರಡಿನ ಚೋರನಿಂದಾದ ಭಯಾದಿಕ।
ದಿರವದು ನಿಜವೆನಲೆಸೆವಂತೆ ॥
ಪರಮಾರ್ಥವೆನಿಸುತೀ ಜಗವಿಂತು ಕಲ್ಪಿತ।
ಪುರುಷನಿಂದಾದುದಂಗನೆ ಕೇಳು ॥ 13 ॥

ಮೋಟಮರವು (ಕೊರಡು) ಕಳ್ಳನೆನಿಸಿ (ತನ್ನ ಹತ್ತಿರ ಹಣವಿದ್ದ ದಾರಿಕಾರನಿಗೆ) ಭಯಕ್ಕೆ ಕಾರಣವಾಗುವಂತೆ, ಅಲ್ಲಿ ಕಳ್ಳನಿರುವದು ನಿಜವೆಂಬಂತೆ, ಕಲ್ಪಿತ ಪುರುಷನ ವಿಕಲ್ಪನೆಯಿಂದಾದ ಜಗವಿದು, ಅಂಗನೆ– ಮೈತ್ರೇಯಿ, ಪರಮಾರ್ಥವೆಂಬಂತೆ (ದಿಟವೆಂಬಂತೆ) ಅನಿಸುವದು.

– ಇತಿ ಬಾಹ್ಯ ಇಂದ್ರಿಯ ದಶಕ, ವಾಯು ಪಂಚಕ ಮತ್ತು ಅಂತಃಕರಣಗಳೈದು ಇವುಗಳ ಉತ್ಪತ್ತಿ ನಿರೂಪಣೆ –

## 11ನೇ ಸೂತ್ರ

ತಿಳಿಯನ್ನರಸವೇಳುಧಾತುವೆನಿಸಿ ಗರ್ಭ ।
ದೊಳು ಜನಿಪುದು ತೋರತನುವಿದು ॥

ತಂದೆ ತಾಯಿಗಳುಂಡ ಅನ್ನರಸವು ಸಪ್ತ (ಏಳು) ಪ್ರಕಾರದ ಧಾತು ಎನಿಸುವದು. ತಂದೆಯ ಬಿಂದು (ವೀರ್ಯ) ತಾಯಿ ಗರ್ಭದೊಳು ನಿಲ್ಲಲು, ಈ ತೋರತನುವು (ಸ್ಥೂಲದೇಹ) ಜನಿಸುವದು.

ಪರಮನ ಸತ್ತುಚಿತ್ತೆಂದೆರಡು ತಾವೆ।
ತರುಣಿ ಕೇಳ್ ಪ್ರಕೃತಿ ಪುರುಷರೆಂದು ॥
ಪರಿವಿಡಿಯಿಂದ ದ್ವೈತಾದ್ವೈತವೆನಿಸುಗೆಂ।
ದೊರೆವವಾಗಮ ವೇದತತಿಗಳು ॥ 1 ॥

ಆಗಮಗಳು, ನಾಲ್ಕು ವೇದಗಳು ಪ್ರತಿ ಪಾದಿಸುವ ತತ್ತ್ವವನ್ನು ತರುಣಿ ಮೈತ್ರೇಯಿ ಕೇಳು. ಪರಮಾತ್ಮನ ಸದ್ರೂಪು ಪ್ರಕೃತಿ ಎಂದು ಮತ್ತು ಅವನ ಚಿದ್ರೂಪು ಪುರುಷನೆಂದು

ಕರೆಯಲ್ಪಡುವವು ಮತ್ತು ಪ್ರಕೃತಿಯು ದ್ವೈತ ರೂಪದಿಂದ, ಪುರುಷನು ಅದ್ವೈತ (ಅಖಂಡ) ರೂಪದಿಂದ ನಿನ್ನೊಳಗೆ ಅನನ್ಯವಾಗಿ ಇರುವದು.

**ವರಮೂಲ ಪ್ರಕೃತಿ ಪುರುಷರಿಂದೆ ವಿಕರಿಸಿ।**
**ಚಿರಮೆನೆ ಮಹದಹಮಂಬರ ॥**
**ಮರುದಗ್ನಿ ಜಲ ವಸುಮತಿಗಳೆಂಬೀ ತತ್ತ್ವ।**
**ಪರಿಕರಮುದಿಸುಗಾಕ್ರಮದಿಂದೆ ॥ 2 ॥**

ಪ್ರಕೃತಿ (ಇರುವದು) ಮತ್ತು ಪುರುಷ (ಅರಿವುದು) ಇವೇ ಮೂಲತತ್ತ್ವಗಳು ಎಲ್ಲ ಜೀವರೊಡಲಲ್ಲಿ ಮೆರೆವವು. ಇವು ವಿಕಾಸವಾಗುತ್ತ ಮಹತ್ತು ಮೂರಹಂಕಾರಗಳು, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ (ವಸುಮತಿ) ಎಂಬೀ ಪಂಚಭೂತಗಳು (ಭೂತಾದಿಹಂಕಾರದಿಂದ ಸೂತ್ರ 9) ಹಿಂದೆ ಹೇಳಿದ ಕ್ರಮದಿಂದ (ಸೂತ್ರ 8) ಈ ಯಾವತ್ತೂ ತತ್ತ್ವ ಸಮೂಹ (ಪರಿಕರ) ಉದಯವಾಯಿತು.

**ಅವನಿಯಿಂದೋಷಧಿನಿವಹ ಸಂಜನಿಸಿದ।**
**ವವರೊಳನ್ನಂಗಳುದಿಸುತಿರ್ಕು ॥**
**ಯುವತಿ ನೀನರಿವುದು ಬಳಿಕನ್ನವದನನು।**
**ಭವಿಪರಾ ತಾಯಿತಂದೆಗಳಲ್ಲಿ ॥ 3 ॥**

ಭೂಮಿಯಿಂದ ಪ್ರಾಣಿಗಳು ಸೇವಿಸಲು ಯೋಗ್ಯವಾದ ಆಹಾರ ಸಾಮಗ್ರಿ, ಹಣ್ಣುಕಾಯಿ, ಗಡ್ಡೆ ಗೆಣಸು– (ಇವಕ್ಕೆ ಔಷಧಿ ಎಂದು ಕರೆವರು) ಈ ಅನ್ನಂಗಳು ಉತ್ಪನ್ನವಾಗುವವು, ಎಂದು ಯುವತಿ ಮೈತ್ರೇಯಿ ನೀನರಿವುದು. ಬಳಿಕ ಆ ಅನ್ನವನ್ನು (ಔಷಧಿ) ತಂದೆ ತಾಯಿಗಳು ಉಣ್ಣುವರು.

**ಅವರನುಭವಿಸಿದನ್ನವೇ ಸಪ್ತಭಾಗದಿಂ।**
**ದವೆ ಸಪ್ತದಿನಕುದರಾಗ್ನಿಯ ॥**
**ವ್ಯವಹಾರದಿಂದೆ ಪಚಿಸಿ ಸಪ್ತಧಾತು।**
**ಸಂಭವಿಸುಗುಮವರೊಡಲುಗಳೊಳು ॥ 4 ॥**

ಅವರು ಭುಂಜಿಸಿದ ಅನ್ನವು ಸಪ್ತ(ಏಳು) ದಿನಕೆ ಸಪ್ತಭಾಗವಾಗಿ ಅಂದರೆ ಜಠರಾಗ್ನಿಯ ಪಚನಕ್ರಿಯೆಯಿಂದ (ಮುಂದೆ ಹೇಳುವ) ಸಪ್ತಧಾತುಗಳಾಗಿ ಪರಿಣಮಿಸುವದು. ಮಾತಾಪಿತೃಗಳ ಒಡಲಲ್ಲಿ (ದೇಹದಲ್ಲಿ).

**ಮೊದಲು ರುಧಿರವಹುದದರಿಂದೆ ಮಾಂಸವಂ।**
**ತದರಿಂದೆ ಮೇಧಸ್ಸುವದರಿಂದೆ ॥**
**ಉದಿಪುದು ನರವದರಿಂದಸ್ಥಿ ಮಜ್ಜೆಯಂ।**
**ತದರಿಂದೆ ರೇತಮಿಂತೊಗೆವವು ॥ 5 ॥**

(ಅನ್ನರಸದಿಂದ) ಮೊದಲು ಹುಟ್ಟುವದು ರಕ್ತ, ಅದರಿಂದ ಮಾಂಸ, ಅದರಿಂದ ಮೇಧಸ್ಸು, ಅದರಿಂದ ಉದಯಿಸುವದು ನರ, ಅದರಿಂದ ಎಲುವು, ಮಜ್ಜೆ ಅಂತು ಅದರಿಂದ ರೇತಸ್ಸು, ಇಂತು ಸಪ್ತಧಾತುಗಳು ಉತ್ಪತ್ತಿಯಾಗುವವು. ಉದಯಿಪ ಕ್ರಮ ಮುಂದೆ ಹೇಳುವರು.

ಸಪಿನೆ ಕೇಳೇಳು ದಿನಕೆ ಪುರಷನೊಳನ್ನ।
ರಸವದು ರೇತವಹುದು ಮತ್ತೆ ॥
ಬಿಸಜಾಕ್ಷಿ ರೇತವೆನಿಸಲಾರದಬಲೆಯೊ।
ಳೆಸೆವುದು ರಕ್ತ ರೂಪಿಂದದು ॥ 6 ॥

ನನ್ನ ಒಲವಿನ ಸತಿಯಳೆ (ಸಸಿನೆ) ಮೈತ್ರೇಯಿ, ಅನ್ನರಸವು ಏಳು ದಿನಕೆ ಪುರುಷನ ಒಡಲಲ್ಲಿರೇತ (ವೀರ್ಯ)ವಾಗುವದು.

– ಇತಿ ಸಪ್ತಧಾತುಗಳ ಉತ್ಪತ್ತಿ ಪ್ರಕಾರವನ್ನು ನಿರೂಪಿಸಲಾಯಿತು –

(ಟಿಪ್ಪಣಿ:– ಕಮಲಾಕ್ಷಿಯೆ, ಕೇಳು. ಅಬಲೆಯರಲ್ಲಿ ಅನ್ನರಸವು ಏಳು ದಿನಕ್ಕೆ ರೇತಸ್ಸು ಆಗದೆ ರಕ್ತರೂಪಿಂದ ರಂಜಿಸುವದು.)

ಟಿಪ್ಪಣಿ:– ಅನ್ನರಸ ಏಳು ದಿನಕ್ಕೆ ರಕ್ತವಾಗುವದು. ರಕ್ತವು ಏಳು ದಿನಕ್ಕೆ ಮಾಂಸವಾಗಲು ಮುಂದೆ ಏಳು ದಿನಕ್ಕೆ ಅದುವೆ ಮೇಧಸ್ಸಾಗುವದು. ಮುಂದೆ ಮೇಧಸ್ಸು ಏಳು ದಿನಕ್ಕೆ ನರವಾಗುವದು. ನರವು ಮುಂದೆ ಏಳು ದಿನಕ್ಕೆ ಎಲುವು ಆಗಲು, ಅದೆ ಮತ್ತೆ ಏಳು ದಿನಕ್ಕೆ ಮಜ್ಜೆಯಾಗಲು ಕೊನೆಗೆ ಏಳು ದಿನಕ್ಕೆ ವೀರ್ಯವಾಗುವದು. ಸ್ತ್ರೀಯರಲ್ಲಿ ವೀರ್ಯ ಉತ್ಪತ್ತಿಯಾಗುವದು. ಅವರಲ್ಲಿ ಆರು ಧಾತುಗಳಿರುವವು.

## 12ನೇ ಸೂತ್ರ

ಜನನೀಜನಕರ ಮೇಳನದಿಂದೆ ತನುವಿದು ।
ಜನಿಸುಗುವಾಜೀವನೊಡಗೂಡಿ ॥

ಜನನಿ ಜನಕ (ತಾಯಿ ತಂದೆ) ಈರ್ವರ ಕೂಟದಿಂದ ಕಲ್ಪಿತ ಜೀವನೊಡಗೂಡಿ ಸ್ಥೂಲ ದೇಹ ಜನಿಸುವದು.

ಭೂತ ವಿಕೃತಿ ಕರ್ಮಪಾಕದಿಂದ ಪುರುಷನೊ।
ಳೋತು ಮುನ್ನುದಿಸಿ ಜೀವನ ಪಿಂಡ ॥
ರೇತದೊಡನೆ ಕೂಡಿ ರತಿಯೋಗದೊಳು ಮತ್ತೆ।
ಮಾತೆಯುದರದೊಳು ನಿಲುವುದು ॥ 1 ॥

ಭೂತ ವಿಕೃತಿಯಾದ ಜಡದೇಹವು ಕರ್ಮ ಪಕ್ವವಾಗಲು ತಂದೆಯ ವೀರ್ಯದಲ್ಲಿ ಜೀವನ ಪಿಂಡವೆನಿಸಿ ಉದಿಸುವುದು. (ಅಂದರೆ ಮೊದಲು ಪುರುಷನು ಬಸರಾಗುವನು) ಆಬಳಿಕ ಸತಿ ಪತಿ ರತಿಯೋಗ ಕಾಲಕ್ಕೆ ರೇತದೊಡನೆ ಆ ಜೀವನ ಪಿಂಡವು ಮಾತೆಯ ಉದರದಲ್ಲಿರುವ ರಕ್ತದೊಡನೆ ಕೂಡಿ ನಿಲ್ಲುವದು.

ಅದು ಬಳಿಕಲ್ಲಿ ದೈವಾನುಕೂಲತೆ ಭೋಗ।
ಮೊದವಿದ ಕರ್ಮಾನುಗತಿಯಿಂದ ॥
ಉದರಾಗ್ನಿಯಿಂದೆ ಬೇಯದೆ ಸುರಕ್ಷಿತಮಿಹು।
ದಿದು ವೇದ ವಿದಿತವಂಗನೆ ನಂಬು ॥ 2 ॥

ಬಳಿಕ ಆ ಪಿಂಡವು ಭೋಗ ಒದಗಿದ ಕರ್ಮಾನುಗತಿಯಿಂದ ಮತ್ತು ದೈವಾನುಕೂಲತೆಯಿಂದ ತಾಯಿಯ ಗರ್ಭದಲ್ಲಿ ಜಠರಾಗ್ನಿಯಿಂದ ಬೇಯದೆ ಪಿಂಡವು ಸುರಕ್ಷಿತವಾಗಿರುವದು. ಈ ಮಾತು ವೇದ ಸಮ್ಮತವಾಗಿದೆ ಎಂದು, ಸ್ತ್ರೀಯಳೆ ನಂಬು.

ರುದಿರವಧಿಕ ಮಾಗೆ ಜನಿಪುದು ಪೆಣ್ಣುಗಂ।
ಡುದಿಪುದು ರೇತೋತಿಶಯದಿಂದೆ॥
ಪುದಿದು ಸಮಾನಮಾಗಿರೆ ರೇತೋರಕ್ತ ವಂ।
ತದರಿಂದೆ ಷಂಡನೆನಿಸುವನು ॥ 3 ॥

ರಕ್ತವು ಹೆಚ್ಚಿನ ಪ್ರಮಾಣದಲ್ಲಿದ್ದರೆ ಹೆಣ್ಣುಹಾಗೂ ರೇತಸ್ಸು ಅತಿಶಯವಾಗಿರಲು ಗಂಡು ಮಕ್ಕಳು ಹುಟ್ಟುವವು, ಆದರೆ ರೇತೋರಕ್ತಗಳೆರಡೂ ಸಮ ಪ್ರಮಾಣದಲ್ಲಿರಲು. ಷಂಡನೆನಿಸುವನು.

ಸತಿ ಕೇಳು ರೇತೋ ರುಧಿರಮೊಂದಿ ಕಲಲದಾ।
ಕೃತಿಯಾಗಿ ಮೊದಲ ದಿನದೊಳಿರ್ಕು ॥
ಪ್ರತಿ ದಿನ ವೈದಕಂತದು ಬೊಬ್ಬುಳಿಕೆಯೆನಿ।
ಸುತೆ ರಂಜಿಪುದು ವಿಚಿತ್ರತೆಯಿಂದೆ ॥ 4 ॥

ರೇತೋರುಧಿಗಳು ಒಂದು ಗೂಡಲು ಮೊದಲ ದಿನದೊಳು ಕಲಿಲದ (ರಾಡಿಯ) ಆಕೃತಿಯಾಗಿರುವದು. ಬಳಿಕ ಐದು ದಿನಕ್ಕೆ ಗುಳ್ಳೆಯೆನಿಸಿ ವಿಚಿತ್ರತೆಯಿಂದ ಅದು ರಂಜಿಸುವದು.

ಬಳಿಕೇಳು ರಾತ್ರಿಗಂತದು ಫೇನದಾಕೃತಿ।
ದಳೆವುದು ದಶರಾತ್ರಿಗಳು ಮತ್ತೆ ॥
ಪೊಳೆವುದು ಪಿಂಡದಾಕಾರವೆನಿಸಿ ನೀರೆ।
ತಿಳಿ ನೀನಿದನು ವೇದಮತವೆಂದು ॥ 5 ॥

ಏಳು ರಾತ್ರಿಗಳಾದ ಬಳಿಕ ಆ ನೀರಗುಳ್ಳೆಯು ಬುರುಗಿನಾಕೃತಿ ತಳೆಯುವುದು. ಮತ್ತು ಹತ್ತು ರಾತ್ರಿಗತಿಸಲು ಅದು ಪಿಂಡದಾಕಾರವಾಗಿ ಹೊಳೆಯುವುದು. ಪ್ರಿಯೆ, ಇದು ವೇದ ಮತ (.ಗರ್ಭೋಪನಿಷತ್ತು ಹೇಳಿದುದು) ಎಂದು ತಿಳಿ.

ಪದಿನೈದು ದಿವಸದೊಳದು ದಂಡಾಕೃತಿಯಹು।
ದದರೊಳು ಬಳಿಕೊಂದು ಮಾಸಕ್ಕೆ॥
ಉದಿಪುದು ಶಿರವತಿಶಯವೆನೆ ಬಾಹುಗ।
ಳದರೊಳೆರಡು ತಿಂಗಳೊಳಗಕ್ಕು ॥ 6 ॥

ಹದಿನೈದು ದಿವಸಗಳಲ್ಲಿ ಆ ಪಿಂಡವು ದಂಡಾಕೃತಿ ಆಗುವದು. ಬಳಿಕ ಒಂದು ತಿಂಗಳಿಗೆ ಅದರ ಶಿರ ಉದಯಿಸಿ, ಎರಡು ತಿಂಗಳೊಳಗೆ ಬಾಹು (ಭುಜ)ಗಳು ಬೆಳೆಯುವವು.

ಉದರವಹುದು ಮೂರು ಮಾಸಕ್ಕೆ ನಾಲ್ಕು ಮಾ।
ಸದೊಳು ಪಾದಾದಿ ಸರ್ವಾಂಗವು ॥
ಒದವಿ ಬಲಿವುದು ರೋಮಾಳಿಗಳೈದು।
ಮಾಸದೊಳುದಿಸುವವಂಚೆನಡೆಯಳೆ ॥ 7 ॥

ಮೂರು ಮಾಸಕ್ಕೆ ಉದರ (ಹೊಟ್ಟೆ) ನಾಲ್ಕು ಮಾಸಕ್ಕೆ ಕೈಕಾಲುಗಳು ಬೆಳೆದು, ಐದು ತಿಂಗಳಲ್ಲಿ ರೋಮಗಳೂ, ಹಂಸದಂತೆ ನಡಿಗೆಯುಳ್ಳ ವೈತ್ರೇಯಿ ಉದಯವಾಗುವವು.

ಆದರೊಡನಾರುತಿಂಗಳೊಳಸ್ಥಿಗಳ ತೋರ್ಕೆ।
ಪದಪಿಂದೆ ಮೇಲೇಳು ಮಾಸಕ್ಕೆ ॥
ಒದವಿ ಚೇತನ ಭಾವದೊಡಗೂಡಿ ಪ್ರಾಣಾದಿ।
ಪದಗತಿಗಳು ಪಸರಿಸುತಿರ್ಕು ॥ 8 ॥

ಮೇಲೆ ಹೇಳಿದ ದೇಹದ ಅಂಗಾಂಗಗಳೊಡನೆ ಆರು ತಿಂಗಳಲ್ಲಿ ಎಲುವುಗಳು ತೋರಿ, ಮೇಲೇಳು ಮಾಸಕ್ಕೆ ಚೇತನ ಭಾವದೊಡನೆ (ತಾಯಿಯ ಗರ್ಭದಲ್ಲಿದ್ದ) ಶಿಶುವಿಗೆ ಪ್ರಾಣಾಪಾನ ಮೊದಲಾದ ವಾಯುಗತಿ ಪಸರಿಸುವದು.

ಬಳಿಕೆಂಟನೆಯ ಮಾಸದೊಳಗದು ತನಗಲ್ಲಿ।
ನೆಲೆಯಾದುದಾವ ಸೋಜಿಗವೆಂದು ॥
ಗಳಿಲನೆ ಪೊರಮಡಲಾವುದು ಮಾರ್ಗವೆಂ।
ದಳಲುತಿರ್ಪುದು ತನ್ನ ಭ್ರಮೆಯಿಂದೆ ॥ 9 ॥

ಬಳಿಕ ಎಂಟನೇ ತಿಂಗಳಿಗೆ ಆ ಕೂಸು, "ಇಲ್ಲಿ ನನಗೆ ನೆಲೆಯಾದುದು ಯಾವ ಸೋಜಿಗ ? (ಅಲ್ಲಿರುವ ಹೇಯದ ಅತಿಬಾಧೆಗೆ ಮನನೊಂದು) ನಾನೀಗ ತೀವ್ರವಾಗಿ ಹೊರಗೆ ಹೋಗುವ ಮಾರ್ಗ ಯಾವುದು ? " ಎಂದು ದುಃಖಿಸುತ್ತಿರುವದು. ತನ್ನ ಭ್ರಮೆಯಿಂದ ತಾನೆ ಅಳಲುವದು.

ನವಮಾಸವಾಗೆ ಕಾಲತ್ರಯ ಜ್ಞಾನ ಸಂ।
ಭವಿಸುಗಾ ಜೀವನಿಗದರಿಂದ ॥
ವಿವರಿಸಿ ನೋಡಿ ಸಕಲ ವಿಷಯಂಗಳ- ।
ನಿವು ದುಃಖಕರವೆಂದು ತಿಳಿವನು ॥ 10 ॥

ನವಮಾಸವಾಗಲು ಗರ್ಭದಲ್ಲಿರುವ ಜೀವನಿಗೆ ಕಾಲತ್ರಯ ಜ್ಞಾನ ಸಂಭವಿಸುವದು. (ಅಂದರೆ ಹಿಂದೆ, ಇಂದು, ಮುಂದಿನ ದೇಹದ ತಾಪತ್ರಯವು ನೆನಪಿಗೆ

ಬರುವದು ಆ ಸ್ಮೃತಿಜ್ಞಾನದ ಬಲದಿಂದ ಜೀವನು ವಿವೇಕಿಸಿ (ವಿವರಿಸಿ) ನೋಡಿ ಲೌಕಿಕದ ಯಾವತ್ತೂ ವಿಷಯಗಳು ದುಃಖಕರವೆಂದು ತಿಳಿಯುವನು.

– ಇತಿ ಪಿಂಡ ವಿವರ್ಧನಕ್ರಮ ನಿರೂಪಣೆ –

## 13ನೇ ಸೂತ್ರ

ಜನನಿಯಜಠರದಿಂದುಸಿ ಜೀವಾತ್ಮನೀ- ।
ತನುವೆತಾನೆಂದು ಸಂಸ್ಕರಿಪನು ॥

ತಾಯಿಯ ಗರ್ಭದಿಂದ ಹುಟ್ಟಿದ ಜೀವಾತ್ಮನು ಈ ದೇಹವೆ ತಾನೆಂಬ ಸಂಸ್ಕಾರದಿಂದ (ಪ್ರಕೃತಿಭಾವಧರನಾಗಿ) ಬಾಳುವನು.

ಕೇಳು ಮೈತ್ರೇಯಿ ಮೇಲಾ ಜೀವನಲ್ಲಿತಾ ।
ನಾಳೋಚಿಸುತ್ತ ತನ್ನೊಳಗಿಂತು ॥
ಪೇಳಬಾರದ ಹೇಸಿಕೆಯ ದುಃಖದೊಡೆತನ ।
ಮೇಳವೆಂತಾದುದೆಂದಳಲ್ವನು ॥ 1 ॥

ಮೈತ್ರೇಯಿ ಕೇಳು. ಜನನಿಯ ಗರ್ಭದಲ್ಲಿ ಒಂಬತ್ತು ತಿಂಗಳಾಗಲು ತನ್ನೊಳಗೆ ತಾನಿಂತು ಆಲೋಚಿಸುವನು. ''ಹೇಳಬಾರದ ಹೇಸಿಕೆಯ ದುಃಖ ಸಾಮ್ರಾಜ್ಯದ ಒಡೆತನದ ಮೇಳನವು ನನಗೆ ಹೇಗೆ ಸಂಭವಿಸಿತು ? ಲಗುಬಗೆಯಿಂದ ನಾನು ಹೊರಗೆ ಹೋಗುವ ಮಾರ್ಗ ಆವುದು ? ಎಂದು ಅಳುವನು. (ಟಿಪ್ಪಣಿ :– ವಾಮದೇವ ಮುನಿಗಳು, ''ಲೋಕದಲ್ಲಿ ಸಕಲ ವಿಷಯಗಳು ದುಃಖದಾಯಕ ಇವೆ. ಗರ್ಭದಿಂದ ಹೊರಗೆ ಹೋಗಲಾರೆ'' ಅಂದರು. ಅವರ ತಂದೆ, ''ಒಂಬತ್ತು ತಿಂಗಳಾಗಿವೆ. ನಿನ್ನ ತಾಯಿ ಪ್ರಸವವೇದನೆಯಿಂದ ಬಳಲುತ್ತಿದ್ದಾಳೆ. ಮಗು, ಹೊರಗೆ ಬಾ'' ಅಂದರು.) ಗರ್ಭವಾಸದ ದುಃಶ್ಚರಿತ್ರೆಯನ್ನು ''ಜೀವ ಸಂಬೋಧನ ಸ್ಥಳ'' 1ನೇ ಪದ 2ನೇ ನುಡಿಯಲ್ಲಿ ನೋಡಿರಿ.

ಮುನ್ನಾದ ದುಃಖವನಿನ್ನೊದಗುವ ಬಾಧೆ ।
ಯನ್ನೆರೆ ಕಂಡು ತಾನಲ್ಲಿಂದ ।
ಇನ್ನೆಂದಿಗೆಯು ಪೊರಮಡಲೊಲ್ಲೆನೆಂದು ಜೀ ।
ವನ್ನಾಡೆ ತನ್ನೊಳು ಭ್ರಮಿಸುಗು ॥ 2 ॥

(ನವಮಾಸದಲ್ಲಿ ಕುಕ್ಕುಟಾಸನದಲ್ಲಿ ಹೇಳಬಾರದ ದುಃಖ ಜೀವಾತ್ಮ ಅನುಭವಿಸುವಾಗ ತ್ರಿಕಾಲಜ್ಞಾನ ಆತಗೆ ಜನಿಸುವದೆಂದು ಹಿಂದಿನ ಸೂತ್ರದಲ್ಲಿ ಹೇಳಿದಂತೆ) ಈಗ ಜೀವಾತ್ಮನು ತನ್ನೊಳಗೆ ತನ್ನ ಭ್ರಮೆಯಿಂದ ಹೀಗೆ ಆಲೋಚಿಸುವನು. ''ಮುನ್ನಾವ ಪಾಪ ನಾನು ಮಾಡಿದ್ದೆನೋ ? ನನಗಿಲ್ಲಿ ಹೇಯದತಿ ಬಾಧೆಯನ್ನು ಭೋಗಿಸುವ ಸಮಯ ಒದಗಿತಲ್ಲಾ? ನಾನು ಈ ಗರ್ಭದಿಂದ ಹೊರಗೆ ಹೋದ ಬಳಿಕ ಹೆಚ್ಚಿನ ತಾಪತ್ರಯಗಳನ್ನು ಜೀವಲೋಕದಲ್ಲಿ ಅನುಭವಿಸಬೇಕಾಗುವದು. ಆದುದರಿಂದ

ಹೊರಗೆ ಹೋಗಲು ಒಲ್ಲೆನು, '' ಎಂದು ಜೀವನು ದುಃಖಿಸುವನು. (ಟಿಪ್ಪಣಿ :– ವಾಮ ದೇವ ಮುನಿಗಳು, ''ಲೋಕದಲ್ಲಿ ಸಕಲ ವಿಷಯಗಳು ದುಃಖದಾಯಕ ಇವೆ. ಗರ್ಭದಿಂದ ಹೊರಗೆ ಹೋಗಲಾರೆ'' ಅಂದರು. ಅವರ ತಂದೆ, ''ಒಂಬತ್ತುತಿಂಗಳಾಗಿವೆ. ನಿನ್ನ ತಾಯಿ ಪ್ರಸವವೇದನೆಯಿಂದ ಬಳಲುತ್ತಿದ್ದಾಳೆ. ಮಗು, ಹೊರಗೆ ಬಾ'' ಅಂದನು.)

ಪೊರಮಟ್ಟಡೆಯು ದುಃಖದುರುಬದರಿಂದಾನು ।<br>
ಪೊರಮೊಡಲೊಲ್ಲೆ ನಿಂತೊಳಗಿರ್ಪೆ ॥<br>
ಬರಿದೆ ಬಾಧಕವಿಂತು ತನಗಾದುದೆಂದವ ।<br>
ನರಿದಿರೆ ದೈವಾನುಗತಿಯಿಂದೆ ॥ 3 ॥

(ಮೇಲೆ ಹೇಳಿದ ದುಃಖದ ಪ್ರಸಂಗ ಮುಂದುವರೆವುದು): ಜನನಿಯ ಜಠರದಲ್ಲಿರುವ ಜೀವಾತ್ಮ ಹೇಳುವನು : 'ನಾನು ಇಲ್ಲಿಂದ ಹೊರಗೆ ಹೋದಕೂಡಲೆ ಉರುತರ ದುಃಖದ ಜಾಲದಲ್ಲಿ ಬೀಳುವೆನು. ಆದ್ದರಿಂದ ಹೋಗಲೊಲ್ಲೆ. ಇಲ್ಲಿಯೇ ಇರುವೆನು. ನನ್ನ ಪೂರ್ವ ಕರ್ಮಾನುಸಾರ ಸಂಭವಿಸಿದ ದುಃಖವನ್ನು ನಾನು ಇಲ್ಲಿಯೇ ಉಂಡು ತೀರಿಸುವೆನು'' ಎಂದು ಜೀವನು ಆಲೋಚಿಸುತ್ತ ಇರುವಾಗ 'ದೈವಗತಿಯಿಂದ'...

ಯುವತಿ ಬೇರೊಂದವಸತೆಯಾಗುವಂತೆ ವೈ ।<br>
ಷ್ಣವ ಮಾಯೆ ಮುಸುಗುಗಾಕ್ಷಣದೊಳು ॥<br>
ತವೆಸೂತಿಯೆಂಬ ಮಾರುತನುರೆ ಪೊಡೆವುದಂ ।<br>
ತವನಧೋಮುಖವಾಗುವಂದದಿ ॥ 4 ॥

''ಯುವತಿ'' ಮೈತ್ರೇಯಿ, ಪ್ರಾರಬ್ಧದ ಕರ್ಮಾನುಸಾರ ಆ ಜೀವಾತ್ಮನ ಅವಸ್ಥೆ ಗರ್ಭದಲ್ಲಿದ್ದಾಗ ಏನಾಗುವದು, ಕೇಳು. ವೈಷ್ಣವ ಮಾಯೆ ಆ ಜೀವನನ್ನು ಮುಸುಗುವದು. ತತ್‌ಕ್ಷಣದಲ್ಲಿ ಅವನ ತ್ರಿಕಾಲ ಜ್ಞಾನ ಮರೆಯಾಗುವದು ಮತ್ತು 'ಪ್ರಸೂತಿ' ಎಂಬ ವಾಯು ಆ ಜೀವನಿಗೆ ಮೇಲಿಂದ ಮೇಲೆ ಬಲವಾಗಿ ಬಡಿಯುವದು. (ನೆಟ್ಟಗೆ ಕುಳಿತ ಜೀವನು) ವಾಯುವಿನ ಹೊಡೆತದಿಂದ ಕೆಳಮುಖವಾಗಿ, ಪೊರಮಡುವ ಮಾರ್ಗದಲ್ಲಿಯೆ ಇರುವನು.

ಯೋನಿಯ ರಂಧ್ರದೊಳು ನುಸುಳಿ ಪೊರಮಡುತನ್ನ ।<br>
ಪಾನದಿಂದಾ ತನು ವರ್ಧಿಸಿ ॥<br>
ಮಾನಿನಿ ಕೇಳು ಮತ್ತಾಜೀವನಾ ತನು ।<br>
ತಾನೆಂದು ಬಗೆದು ಸಂಸ್ಕರಿಪನು ॥ 5 ॥

ಯೋನಿಯ ರಂಧ್ರದಲ್ಲಿ ನುಸುಳಿ, ಅವನು ಹೊರ ಬರುವನು ಮಾನಿನಿ ಕೇಳು. ಅನ್ನ ಪಾನಾದಿಗಳಿಂದಾ ಜೀವನ ದೇಹವು ಬೆಳೆಯುವದು ಮತ್ತು ತನುವೆ ತಾನೆಂದು (ಹಾಗು ತನ್ನದೆಂಬ) ಹಂಬ್ರಮೆಯ ಸಂಸ್ಕಾರವು ಆತನ ಮೈಗೂಡುವದು.

ವನಿತೆ ಕೇಳೀ ತನುವಾರು ಕೌಶಿಕಮಯ ।<br>
ವೆನೆ ಚರ್ಮರುಧಿರ ಮಾಂಸಂಗಳು ॥<br>
ಜನನಿಯ ರುಧಿರಾಂಶ ವೆಲು ಮಜ್ಜನರವಿವು ।<br>
ಜನಕನ ರೇತಾಂಶವೆನಿಪವು ॥ 6 ॥

ವನಿತೆ ಕೇಳು, ಈ ತನುವು ಆರು ಕೌಶಿಕಮಯವಿದೆ. ಚರ್ಮ ರಕ್ತಮಾಂಸಗಳು ತಾಯಿ ರಕ್ತದ ಅಂಶ (ಕೌಶಿಕ) ಮತ್ತು ನರ, ಎಲುವು, ಮಜ್ಜೆ ಇವು ತಂದೆಯ ರೇತಾಂಶಗಳು.

ತಾತನ ರೇತವೆಂಬುದು ಕರ್ಮವೆನಿಪುದು।
ಮಾತೆಯ ರುಧಿರವೆಂಬುದು ಮಾಯೆ ॥
ರೇತೋರಕ್ತದ ಮೇಳವೆಂಬುದಾಣವ ಮೆನ।
ಲೀತನು ತಾನೆ ಮುಮ್ಮಲಜಾತ ॥ 7 ॥

(ಮೂರು ಮಲಗಳು)– ತಂದೆಯ ವೀರ್ಯವು ಕಾರ್ಮಿಕ ಮಲ, ತಾಯಿಯ ರುಧಿರ (ರಕ್ತ) ಮಾಯಾ ಮಲವು ಮತ್ತು ರೇತೋರಕ್ತದ ಮೇಳನವೆ ಆಣವ ಮಲವೆನಿಸುವವು.

ಇಂತು ಈ ತನುವು ''ಘಮ್ಮಲ ಜಾತ'' (ಮೂರು ಮಲಗಳಿಂದ ಹುಟ್ಟಿದೆ ಮೂಬೆರಿಕಿ, ಎಂದು ಈ ಶರೀರಕ್ಕೆ ಸಿಟ್ಟಿನಿಂದ ಬಯ್ಯುವ ವಾಡಿಕೆಯಿದೆ.)

ತಿಳಿ ಮೂರನೆಯ ಮಾಸದೊಳು ಗರ್ಭಮಿರ್ಪೆಡೆ।
ಯೊಳು ಪೊಕ್ಕಪಾನ ಮಾರುತನಲ್ಲಿ॥
ಸುಳಿದು ತತ್ಪಿಂಡವನೊಡೆಯಲ್ಕೆ ಜವಳಿ ಮ।
ಕ್ಕಳುಗಳುದಿಸುತಿರ್ಪರಂಗನೆ ॥ 8 ॥

ಪ್ರಿಯ ಅಂಗನೆ, ಮೂರನೆಯ ಮಾಸದಲ್ಲಿ ಗರ್ಭದಲ್ಲಿ ಜೀವಪಿಂಡವಿರುವಾಗ ಅಪಾನವಾಯು ಒಳಗೆ ಸುಳಿದು, ಆ ಪಿಂಡವನ್ನು ಒಡೆಯಲು (ಅವಳಿ) ಜವಳಿ ಮಕ್ಕಳು ಹುಟ್ಟುವವು.

[ ಟಿಪ್ಪಣಿ:– (ಅನುಭವಸಾರ5–3ನೇ ಸೂತ್ರ) ಕೋಳಿಯು ಸೂರ್ಯಾಸ್ತವಾಗಲು ಹೊರಗೆ ಮೇಯುತ್ತಿರುವ ತನ್ನ ಮರಿಗಳನ್ನುಬರಮಾಡಿಕೊಂಡು ತನ್ನ ಪಕ್ಕದೊಳಗೆ ಸಂಚರಿಸದಂತೆ ಇರಿಸಿಕೊಂಡು, ಅವುಗಳೊಡನೆ ತಾನೂ ಗೂಡಿನಲ್ಲಿ ನಿದ್ರೆ ಮಾಡುವಂತೆ ಪ್ರಕೃತಿಯು ವಿಕರಿಸದೆ ಉಪರತಿಯಿಂದ ಇರುವ ಮನ ಬುದ್ಧ್ಯಾದಿ ಸಕಲ ಕರಣಗಳೊಡಗೂಡಿ ಚಿದಾತ್ಮನಾಶ್ರಯದಲ್ಲಿಸುಖವಾಗಿರುವದು. (ಇದು ನಿದ್ರಾವಸ್ಥೆ) ]

– ಇತಿ ಪಿಂಡೋತ್ಪತ್ತಿ ಕ್ರಮ ನಿರೂಪಣೆ –

## 14ನೇ ಸೂತ್ರ

ತನುವಿದು ತಾನೆಂಬ ಬಗೆಯಿಂದ ಜೀವಂಗೆ ।
ಜನಿಸುವವೈದವಸ್ಥೆಗಳಿಂತು ॥

'ತನುವಿದು ತಾನು' ಎಂಬ ಕಲ್ಪನೆಯಿಂದ ಜೀವಾತ್ಮನಿಗೆ ಐದು ಅವಸ್ಥೆಗಳು ಜನಿಸುವವು : (1) ಭೂತಾತ್ಮ(2) ಇಂದ್ರಿಯಾತ್ಮ(3) ಹಂಕರಣಾತ್ಮ(4) ವಿಜ್ಞಾನಾತ್ಮ ಮತ್ತು(5) ಅಂತರಾತ್ಮ ಇವುಗಳ ವಿವರಣೆ ಮುಂದೆ ನೋಡಿ.

ಜೀವನಿಗೈದವಸ್ಥಾನುರೂಪವೆ ತನ್ನ।
ಭಾವಭೇದದೊಳಿಂತು ತೋರ್ಪವು॥
ಭಾವಕಿ ನಾನವನರಿಯ ಲೊರೆವೆನು ಸ।
ದ್ಭಾವದಿಂದಾಲಿಸಿ ತಿಳಿ ನೀನು ॥ 1 ॥

ಜೀವಾತ್ಮನಿಗೆ ತನ್ನ ಕಲ್ಪನಾ ಭೇದದಿಂದ ತನ್ನೊಳಗೆ ಐದು ಅವಸ್ಥೆಗಳು ಜನಿಸಿ ತೋರುವವು. ಭಾಮಿನಿ ಮೈತ್ರೇಯಿ ಅವುಗಳನ್ನು ನೀನು ತಿಳಿಯುವಂತೆ ಹೇಳುವೆ. ಸದ್ಭಾವನೆಯಿಂದ ಆಲಿಸು.

ಭೂತ ವಿಕೃತಿಯಿಂದೆ ಮಾತಾಪಿತರ ರಕ್ತ।
ರೇತೋಯೋಗದ ಪರಿಣತೆಯಿಂದ।
ಜಾತಮಾದೀತನು ತಾನೆನೆ ಜೀವಂಗೆ।
ಭೂತಾತ್ಮನೆಂದೆಂಬ ಪೆಸರಕ್ಕು ॥ 2 ॥

ಪಂಚ ಮಹಾಭೂತಗಳ ಪಂಚೀಕರಣದಿಂದ, ಮಾತಾಪಿತರ ರಕ್ತ ರೇತಸ್ಸಿನ ಯೋಗದ ಪರಿಣಾಮದಿಂದ ಹುಟ್ಟಿದ ಈ ಸ್ಥೂಲ ಶರೀರವೆ ನಾನು, ನಾನು ಎಂದು ಅಭಿಮಾನಿಸಲು ಆ ಜೀವಾತ್ಮಗೆ ''ಭೂತಾತ್ಮ''ನೆಂಬ ಹೆಸರಿನಿಂದ ಕರೆವರು.

ನೆರೆ ಬುದ್ಧೀಂದ್ರಿಯ ಕರ್ಮೇಂದ್ರಿಯವೆಂಬೆರಡು ವರ್ಗ।
ವರಿವ ಮಾಡುವ ವೆಲ್ಲವನು ತಾನೆ॥
ಅರಿದೆನೆಸಗಿದೆನೆಂಬುದರಿಂದೆ ಜೀವಂಗೆ।
ಮೆರೆವುದು ಕೇಳಿಂದ್ರಿಯಾತ್ಮತೆ ॥ 3 ॥

ಐದು ಜ್ಞಾನೇಂದ್ರಿಯಗಳು ಅರಿಯುವ ಮತ್ತು ಐದು ಕರ್ಮೇಂದಿಯಗಳು ಮಾಡುವ ಈ ಎಲ್ಲ ವ್ಯಾಪಾರವನ್ನು 'ನಾನೆ ಅರಿವೆ', ನಾನೆ ಮಾಡುವೆ'' ಎಂಬ ಹಮ್ಮಿರಲು ಜೀವನು ''ಇಂದ್ರಿಯಾತ್ಮ'' ಎಂಬ ಹೆಸರಿನಿಂದ ಮೆರೆಯುವನು.

ಮಾನಸಾದಿಗಳೆಸಗಿದ ಕರ್ಮತತಿಯನು।
ತಾನೆಸಗಿದೆನೆಂಬ ಬಗೆಯಿಂದೆ॥
ಮಾನಿನಿ ಕೇಳಹಂಕರಣಾತ್ಮನೆಂಬಭಿ।
ಧಾನವಾಜೀವಂಗೆ ಸವನಿರ್ಕು ॥ 4 ॥

ಮನಬುದ್ಧಿ ಛಿತ್ತಾದಿ ಅಂತಕರಣಗಳು ಎಸಗುವ ಸಕಲ ಕರ್ಮಗಳನ್ನು, ಮಾನಿನಿ ಮೈತ್ರೇಯಿ ಕೇಳು, 'ನಾನೇ ಮಾಡುವೆ' ಎಂಬ ಭ್ರಮೆಯಿಂದ ಜೀವನಿಗೆ 'ಹಂಕರಣಾತ್ಮ ಎಂಬ ಹೆಸರು ಪ್ರಾಪ್ತವಾಗುವದು.

ಜ್ಞಾನ್ನಾತ್ಮನಾಗಿ ತಾನಿರ್ಪುದನಾ ಕರ।
ಣಾನೀಕದಿಂದ ಮರೆದು ತನ್ನ॥
ತಾನಜ್ಞನೆಂಬುದರಿಂದೆ ಜೀವಂಗೆ ವಿ।
ಜ್ಞಾನ್ನಾತ್ಮನೆಂದೆಂಬ ಪೆಸರಕ್ಕು ॥ 5 ॥

'ಪ್ರಜ್ಞಾನ ಘನಂ ಬ್ರಹ್ಮ' ತಾನಾಗಿದ್ದು(ಮೇಲೆ ಹೇಳಿದ ಹದಿನಾಲ್ಕು) ಕರಣಗಳ ಸಂಗದಿಂದ ತನ್ನೊಳಗೆ ತನ್ನ ಮರೆತ ಜೀವಾತ್ಮನು 'ನಾನು ಅಜ್ಞನು' (ಅರಿಯದವ) ಎಂದು ಭ್ರಮಿಸುವನು. ಇವನಿಗೆ ''ಜ್ಞಾನಾತ್ಮ'' ನೆಂಬ ಹೆಸರು ಇಡಲಾಯಿತು.

ವಿಜ್ಞಾನ್ನಾತ್ಮನು ಜೀವನಜ್ಞೋಹಮೆಂಬ ತಂ।
ನಜ್ಞಭಾವನೆಯನ್ನು ತಿಳಿದಂದು
ವಿಜ್ಞಾನ್ನಾತ್ಮಂ ತಾನೆ ಬಳಿಕಂತರಾತ್ಮಕ।
ಸಂಜ್ಞೆಯಂ ಪಡೆವನಂತದರಿಂದ ॥ 6 ॥

ವಿಜ್ಞಾನಾತ್ಮನು 'ನಾನು ಅಜ್ಞ ಜೀವನು' ಎಂಬ ತನ್ನ ಅಜ್ಞಭಾವನೆಯನ್ನು ತಾನೆ ತಿಳಿದಂದು, ಬಳಿಕ ವಿಜ್ಞಾನಾತ್ಮನೆ ಅಂತರಾತ್ಮಕ ಸಂಜ್ಞೆಯನ್ನು (ಹೆಸರು) ಪಡೆಯುವನು.

ಭಾವಿಸಲಿಂತಜ್ಞಭಾವನೆಯೊಳು ತೋರ್ಪ।
ಜೀವ ಪಂಚಕವಿದು ಪುಸಿಯೆಂದು॥
ಭಾವಿಸಿ ತನ್ನತಾನರಿಯಲವನು ತಾನೆ।
ಭಾವರಹಿತನಾದ ಪರಮಾತ್ಮ॥ 7 ॥

ಇಂತು ವಿಚಾರಿಸಲಾಗಿ ತನ್ನ ಅಜ್ಞಭಾವನೆಯಲ್ಲಿ ತೋರುವ ಈ ಜೀವ ಪಂಚಕವು ಪುಸಿದೋರಿಕೆ ಎಂದು ನಿಶ್ಚಯಿಸಿ 'ನಿಜವಾಗಿ ನಾನಾರು ?' ಎಂಬ ತನ್ನ ನಿಜವನ್ನು ತಾನೆ ಅರಿಯುವನು. ಆಗಳೆ ತಾನು ಭಾವಾತೀತ ಪರಮಾತ್ಮನೆ ಇರುವನು.

[ ಟಿಪ್ಪಣಿ :– ಅಹಂಕಾರ ವಿಮೂಢಾತ್ಮ ಕರ್ತಾಹಂ ಇತಿ ಮನ್ಯತೆ (ಗೀತೆ) ಹಮ್ಮಿನಿಂದ ಮಹಾಮೂರ್ಖನಾದ ಜೀವಾತ್ಮನು 'ಇವನೆಲ್ಲಾ ನಾನೇ ಮಾಡುವೆ' ನೆಂದು ಕನವರಿಸುವನು. ]

[ ಟಿಪ್ಪಣಿ :– ಜೀವ ಪಂಚಕವಿದು ಯುದ್ಧಭೂಮಿಯಾಗಿದೆ. ಇಲ್ಲಿ ಜೀವಾತ್ಮನು ಗುರು ಬೋಧೆಯಿಂದ (ಸತ್ಸಂಗದಿಂದ) ತನ್ನಲ್ಲಿ ಕಲ್ಪಿತವಾದ ಹಮ್ಮಿನೊಡನೆ ಯುದ್ಧಮಾಡಿ ಎಂದಿನಂತೆ ಮುಕ್ತನು ತಾನೆಂಬ ನಿಜವನ್ನು ಜಯಿಸಬೇಕು. ]

– ಇತಿ ಜೀವಪಂಚಕ ನಿರೂಪಣೆ –

## 15ನೇ ಸೂತ್ರ

ಸಕಲಹಂಕ್ರಿಯೆಯಿಂದ ಭವಬಂಧವದು ಪ್ರವ- ।
ರ್ತಕ ಕರ್ಮವೆನಿಪುದಂಗನೆ ಕೇಳು ॥

ಪ್ರಿಯ ಸತಿ ಕೇಳು, ಅಹಂಭಾವಪರ ಕಲ್ಪಿತ ಪುರುಷನಲ್ಲಿ ಅಸಂಖ್ಯ ಕ್ರಿಯೆಗಳು ತೋರುವವು. ಅವುಗಳಲ್ಲಿ ಎಂಟು ಪ್ರಕಾರದ ಕ್ರಿಯೆಗಳನಿಲ್ಲಿ ವಿವರಿಸುವೆ. ಅವಕ್ಕೆ ಪ್ರವರ್ತಕ ಕರ್ಮ ಎಂದು ಕರೆವರು. ಅವೆ ಭವಬಂಧಕ್ಕೆ ಕಾರಣವಾಗಿವೆ.

ಒಂದೆ ಪ್ರವರ್ತಕ ಮೊಂದೆ ನಿವರ್ತಕ ।
ಮೆಂದು ದ್ವಿಭೇದವಾ ಕರ್ಮವು ॥
ಮಂದಗಮನೆ ಯೆಂಟುತೆರನು ಪ್ರವರ್ತಕ ।
ಮೊಂದೆ ತೆರನು ನಿವರ್ತಕ ಕರ್ಮವದು ॥ 1 ॥

ಮಂದನಡಿಗೆಯುಳ್ಳ ಮೈತ್ರೇಯಿ, ಕರ್ಮವು ಪ್ರವರ್ತಕ ಹಾಗೂ ನಿವರ್ತಕವೆಂದು ಎರಡು ಪ್ರಕಾರವಿದೆ. ಪ್ರವರ್ತಕವು ಎಂಟು ತೆರನಾಗಿ ಮತ್ತು ನಿವರ್ತಕವು ಒಂದೆ ಬಗೆಯಾಗಿ ಸಂಭವಿಸುವದು.

ಅವು ತಾವನುಕ್ರಮದೊಳು ಬಂಧ ಮೋಕ್ಷ ಬೀ ।
ಜವೆನಿಪ್ಪವವು ಭಾವಭೇದದಿಂ ॥
ತವೆ ಕೇಳವಿದ್ಯಾ ವಿದ್ಯೆಗಳೆಂದೆನಿಸುಗೀಗ ।
ಳವರಂದವರುಪುವೆನರಿ ನೀರೆ ॥ 2 ॥

ಕರ್ಮದ್ವಯಮಿವು ಕ್ರಮವಾಗಿ ಬಂಧಮೋಕ್ಷಗಳಿಗೆ ಬೀಜವಾಗಿವೆ. ಚಲುವೆ, ಆಲಿಸು. ಪ್ರವರ್ತಕವು ಅವಿದ್ಯೆಯಿಂದ, ನಿವರ್ತಕವು ವಿದ್ಯೆಯಿಂದ ಜನಿಸುವವು. ಅವರ ಅಂದವನು (ರೀತಿ) ನಿನಗೀಗ ಅರುಪುವೆನು.

ಕರ್ಮಿಯೆ ತಾನೆಂದು ಕರ್ಮವಂ ಮಾಡಿಯಾ ।
ಕರ್ಮದ ಫಲವನುಂಬವನಾಗಿ ॥
ಮರ್ಮವರಿಯದ ಹಂಭಾವದಿಂ ಜೀವನಾ ।
ಕರ್ಮಾಷ್ಟಕದೊಳು ಚೇಷ್ಟಿಕನಕ್ಕು ॥ 3 ॥

ಕಲ್ಪಿತ ಪುರುಷನು (ಜೀವ) ತಾನು ಕರ್ಮಿಯೆಂದು ಬಗೆದು (ಅನಂತ) ಕರ್ಮಗಳನ್ನು ಮಾಡಿ, ಅವುಗಳ ಫಲ ಉಂಬು (ಉಣ್ಣು)ವನು. ನಿಜವಾಗಿ ತಾನು ನಿಷ್ಕ್ರಿಯನು ಎಂಬ ಗುಟ್ಟು (ರಹಸ್ಯ) ಅರಿಯದೆ, ಹಮ್ಮಿನಿಂದ ಚಿದಾಭಾಸನೆನಿಸಿ ಮುಂದೆ ಹೇಳುವ ಎಂಟು ಪ್ರಕಾರದ ಕರ್ಮಗಳಲ್ಲಿ ಚೇಷ್ಟಿಸುವನು.

ತನ್ನಿಂದ ಹಂಭ್ರಮೆ ತನ್ನಿಂದಜ್ಞಭ್ರಮೆ।
ತನ್ನಿಂದೆ ಕರಣೇಂದ್ರಿಯ ಭ್ರಮೆ॥
ತನ್ನಿಂದೆ ದೇಹಭ್ರಮೆ ಮೂರುವಸ್ಥೆಯ ಭ್ರಮೆ।
ತನ್ನಿಂದವೆಂಟು ತೋರುವಲ್ಲಿ॥ 4 ॥

ಅಹಂಭ್ರಮೆ, ಅಜ್ಞಭ್ರಮೆ, ಅಂತಃಕರಣ ಭ್ರಮೆ ಇಂದ್ರಿಯ ಭ್ರಮೆ ದೇಹಭ್ರಮೆ ಮತ್ತು ಮೂರು ಅವಸ್ಥೆಗಳ ಭ್ರಮೆ, ಈ ಎಂಟು ಪ್ರಕಾರಗಳು ತನ್ನಲ್ಲಿ ತನ್ನ ಅಹಂಭ್ರಮೆಯಿಂದ ತೋರುವವು. (ಇವುಗಳ ಕರ್ಮಾಚರಣೆಯನ್ನು ಮುಂದಿನ ಪದದಲ್ಲಿ ನೋಡಿರಿ)

ಅರಿವು ಮರವೆಯೊಳು ಸ್ಮರಣೇಕ್ಷಣಂಗಳೊಳ್।
ನೆರೆ ಕೃಶತ್ವಾದಿ ವಿಕೃತಿಯೊಳು।
ಮೆರೆವ ಜೀವತ್ರಯದೊಳಗಹಮೆಂಬುದ।
ನರಿ ಕರ್ಮಾಷ್ಟಕವಿವಾಕ್ರಮದಿಂದೆ ॥ 5 ॥

ಕ್ರಮವಾಗಿ ಅರಿವಿನಲ್ಲಿ ಅಹಂಭ್ರಮೆ, ಮರವೆಯೊಳು ಅಜ್ಞಭ್ರಮೆ, ಸ್ಮರಣೆ (ನೆನಹು)ವುಳ್ಳ ಅಂತಃಕರಣದಲ್ಲಿ ಕರಣಭ್ರಮೆ, ನೋಡುವದು (ಈಕ್ಷಣ) ಕೇಳುವದು ಮುಂತಾದ ಕಾರ್ಯದಲ್ಲಿ ಇಂದ್ರಿಯ ಭ್ರಮೆ, 'ನಾನು ಕ್ಷೀಣನಾಗಿರುವೆ, ಮುಪ್ಪಾದೆ, ಎಂಬ ವಿಕಾರಗಳಲ್ಲಿ ದೇಹಭ್ರಮೆ ಮತ್ತು ಮೆರೆವ ವಿಶ್ವ, ತೈಜಸ, ಪ್ರಾಜ್ಞರೆಂಬ ಮೂರು ಜೀವರಲ್ಲಿ ಜಾಗರಣಾದಿ ಮೂರುವಸ್ಥೆಯ ಭ್ರಮೆ ಇಂತು ಈ ಕರ್ಮಾಷ್ಟಕವನ್ನು ನೀನರಿವುದು. ಎಂಟು ಪ್ರಕಾರದ ಈ ಪ್ರವರ್ತಕ ಕರ್ಮದಲ್ಲಿ ಅಹಂಭಾವವು ಹಾಸು ಹೊಕ್ಕಾಗಿದೆ.

ನಿರ್ಮಳೆ ಕೇಳಿಂತು ಕರ್ಮವಂ ಮಾಡಲಾ।
ಕರ್ಮದ ಫಲವೆ ಮೂದೆರನಾಗಿ॥
ನಿರ್ಮಿಸಿ ಸುಖ ದುಃಖ ಮಿಶ್ರರೂಪಿಂದಲಾ।
ಕರ್ಮಿಗೆ ಭೋಗ್ಯವೆಂದೆನಿಪುದು ॥ 6 ॥

ನಿರ್ಮಳ ಮೈತ್ರೇಯಿ, ಮುಂದೆ ಕೇಳು, ಅಹಂಭಾವದಿಂದ ಜೀವನು ಕರ್ಮಮಾಡಲು, ಆ ಕರ್ಮಫಲ ಮೂರು ಪ್ರಕಾರವಾಗಿದೆ. ಸುಖ, ದುಃಖ, ಇವೆರಡರ ಮಿಶ್ರ ರೂಪವಾಗಿ ಆ ಕರ್ಮಿಗೆ (ಭೋಕ್ತೃವಿಗೆ) ಭೋಗ್ಯವೆನಿಸುವದು.

ತನಗಿಷ್ಟವದು ಸುಖವೆನಿಪುದು ದುಃಖವೆಂ।
ದೆನಿಪುದನಿಷ್ಟವೆ ಬಳಿಕಲ್ಲಿ॥
ವನಿತೆ ಕೇಳಿಷ್ಟಾನಿಷ್ಟದ ಕೂಟವದು ಮಿಶ್ರ।
ವೆನಿಪುದಿಂತಿವೆ ಫಲತ್ರಯವಕ್ಕು ॥ 7 ॥

ತನಗೆ ಇಷ್ಟವಾದ ಕರ್ಮಫಲ ಸುಖವೆನಿಸುವದು. ತನಗೆ ಅನಿಷ್ಟವಾದುದು ದುಃಖವೆನಿಸುವದು. ವನಿತೆ, ಕೇಳು ಇಷ್ಟಾನಿಷ್ಟರ ಕೂಟವೆ ಸುಖದುಃಖದ ಮಿಶ್ರವಾಗಿದೆ. ಇವು ಮೂರು ಕರ್ಮದ ಫಲಗಳು.

ಭವ ಬಂಧ ಬೀಜವೆನಿಸುವ ಕರ್ಮಾಷ್ಟ।
ಕವೆ ನಿವರ್ತಕದಿಂದ ನೆರೆ ಕೆಟ್ಟು॥
ಹವಣೆಸದಾನಂದಪದ ಮುಕ್ತಿ ಜೀವಂಗೆ।
ಸವನಿಪುದದನೆ ನೀನರಿ ಪೇಳ್ವೆ॥ 8 ॥

ಇದು ಭವಬಂಧನಕ್ಕೆ ಬೀಜವಾದ ಕರ್ಮಾಷ್ಟಕವು. (ಮುಂದೆ ಹೇಳುವ) ನಿವರ್ತಕ ಕರ್ಮದಿಂದ ಸಮಗ್ರವಾಗಿ ಅದು ನಾಶವಾಗಲು, ಮೈತ್ರೇಯಿ, ನೀನಾಲಿಸು, ಪ್ರಮಾಣಗಳಿಗೆ ನಿಲುಕದ ಪರಮಾನಂದ ಪದ ಮುಕ್ತಿಯು ಜೀವನಿಗೆ ಪ್ರಾಪ್ತವಾಗುವದು.

– ಇತಿ ಪ್ರವರ್ತಕ ಕರ್ಮ ನಿರೂಪಣೆ –

## 16ನೇ ಸೂತ್ರ

ಸಕಲಹಂಕ್ರಿಯೆಯಂ ನಿವಾರಿಸಿನಿಲೆ ನಿವ- ।
ರ್ತಕಕರ್ಮವದರಿಂದೆ ನಿಜಮುಕ್ತಿ ॥

ಕಲ್ಪಿತ ಪುರುಷ (ಜೀವ)ನ ಹಂಕಾರದ ಸಕಲ ಕರ್ಮಗಳನ್ನು ವಿಚಾರದಿಂದ ಬಾಧಪಡಿಸಿ ನಿಲ್ಲಲು, ಅಂದರೆ ಕರ್ಮಫಲಗಳು ಮಿಥ್ಯೆ ಎಂಬ ನಿಶ್ಚಯ ಮಾಡಿದ ಬಳಿಕ, ಅದೇ ಆತನ ನಿವರ್ತಕ ಕರ್ಮವೆನಿಸುವದು. ಅದರಿಂದ ತನಗೆ ಶಾಶ್ವತ ಪರಮಾನಂದವು.

ಅರಿವಿನಿಂದಹಮ ನೀನರಿದೆಯಾ ಹಮ್ಮಿನಿಂ- ।
ದರಿದೆಯಜ್ಞತೆಯನಂತದರಿಂದೆ ॥
ಅರಿದೆ ತತ್ಕರಣವೆಲ್ಲವನದರಿಂದೆ ನೀ ।
ನರಿದೆ ಬಾಹ್ಯೇಂದ್ರಿಯ ನಿಕರವ ॥ 1 ॥

ವನಿತೆ ಮೇಣಿಂದ್ರಿಯದಿಂದ್ಯೆದು ವಿಷಯ ರೂ- ।
ಪೆನಿಸುತೀ ಪರಿಯೊಳೆಸೆವುತಿರ್ಪ ॥
ತನುವನರಿದೆ ಬಳಿಕದು ತಾನೆ ನೀನೆಂದು ।
ಜನಿಸಿತು ದೃಢಮತಿ ನಿನಗಲ್ಲಿ ॥ 2 ॥

ನಿಜವಾದ ಅರಿವಿನಿಂದ ಅಹಂಕಾರವನ್ನರಿದೆ. ಅರುವಿನ ವಿಡಂಬನೆಯಿಂದ ನಟಿಸುವ ಈ ಅಹಂಕಾರದಿಂದ ಅಜ್ಞತೆಯನ್ನರಿದೆ. ಬಳಿಕ ಈ ಅಜ್ಞಾನದಿಂದ ಮನಬುದ್ಧಿ

ಚಿತ್ತಾದಿ ಅಂತಃಕರಣವನ್ನರಿದೆ. ಮತ್ತೆ ಈ ಕರಣಗಳಿಂದ ನೇತ್ರಾದಿ ಬಾಹ್ಯ ಐದು ಇಂದ್ರಿಯಗಳನ್ನರಿದೆ.

ವನಿತೆ, ಮತ್ತೆ ಕೇಳು. ಪಂಚ ಜ್ಞಾನೇಂದ್ರಿಯ ಮುಖಾಂತರ ರೂಪಾದಿ ಪಂಚವಿಷಯಗಳಿಂದ ಶೋಭಿಸುವ ತನು 'ನಾನು, ನನ್ನದು' ಎಂದರಿದೆ. ಇಂತು ಈ ದೇಹವೆ ನೀನು, ಎಂಬ ದೃಢ ಬುದ್ಧಿ ನಿನಗೆ ಹುಟ್ಟಿತು.

ತನುವಿದಾನೆಂದಲ್ಲಿ ವಿಶ್ವನೆನಿಸಿ ಸೂಕ್ಷ್ಮ।
ತನುವಿನೊಳೊಂದಿ ತೈಜಸನಾಗಿ ॥
ಘನಕಾರಣಾಖ್ಯ ತನುವಿನಲ್ಲಿ ಪ್ರಾಜ್ಞನೆಂ- ।
ದೆನಿಸಿ ನೀನಿಂತು ವರ್ತಿಸುವಲ್ಲಿ ॥ 3 ॥

25 ತತ್ತ್ವಗಳಿಂದ ಜನಿಸಿದ ಸ್ಥೂಲ ದೇಹದಲ್ಲಿ ನೀನು ವಿಶ್ವ ಜೀವನೆನಿಸಿದೆ. 17 ತತ್ತ್ವಗಳಿಂದಾದ ಸೂಕ್ಷ್ಮತನುವಿನಲ್ಲಿ ತೈಜಸ ಜೀವನೆನಿಸಿದೆ. ಬಳಿಕ ತಮೋಗುಣ ಪ್ರಕೃತಿ ಮೇಳನದಿಂದ ಕಾರಣ ಶರೀರದಲ್ಲಿ ಪ್ರಾಜ್ಞಜೀವನೆನಿಸಿದೆ. ನೀನು ಇಂತು ಮೂರು ಶರೀರ ಮತ್ತುಮೂರವಸ್ಥೆಗಳಲ್ಲಿ(ಅಥವಾ ಮೂರುಲೋಕಗಳ ಅಭಿಮಾನಿಯಾಗಿ) ಸಂಚರಿಸುವೆ.

ತನುವಿನಂತರ್ವರ್ತಿಯೆನಿಪಹಂಭಾವದೆ।
ನಿನಗೆ ತೋರಿದವೈದು ವಿಷಯವು ॥
ವನಿತೆ ಕೇಳಾ ತೋರ್ಕೆಗೊಂದು ಕಾರಣವಿಲ್ಲ।
ವೆನಿಸಿರ್ಪುದದು ನಿನ್ನ ಭ್ರಮೆಯಿಂದೆ ॥ 4 ॥

ಇಲ್ಲಿಯವರೆಗೆ ಹೇಳಿದ ಪ್ರವರ್ತಕ ಕರ್ಮದಲ್ಲಿ, ತನು ಮೊದಲಾದ ಕರಣಗಳು ಅಂತರ್ಮುಖ ವೃತ್ತಿಯಾಗಿ ವರ್ತಿಸುವ ಅಹಂಭಾವದಿಂದ ಟಿಪ್ಪಣಿ:– (1) ಅಹಂಭಾವಪರ ಕಲ್ಪಿತ ಪುರುಷನ ವಿಕಲ್ಪನೆಯಿಂದಲೆ ಜಗತ್ತು ಹಾಗೂ ದೇಹಾದಿ ತೋರ್ಕೆಗಳು ಉಂಟಾಗಿವೆ. (2) ಶ್ರೀ ಶಂಕರಾಚಾರ್ಯರು ಭ್ರಮೆಯೆಂದರೆ– "ಅನಾತ್ಮನಿ ಆತ್ಮಬುದ್ಧಿರೇವ ಅಧ್ಯಾಸಃ। ದೇಹ, ಜಗತ್ತು ಮುಂತಾದ ಅನ್ಯಾತ್ಮವಿಷಯಗಳೆಲ್ಲ 'ಅವೇ ನಾನು' ಎಂಬ ಆತ್ಮಬುದ್ಧಿಯೆ ಅಧ್ಯಾಸ (ಭ್ರಮೆ) ಎನಿಸುವದು. ಬಾಹ್ಯದಲ್ಲಿ ನಿನಗೆ ರೂಪ, ಶಬ್ದಾದಿ ಐದು ವಿಷಯಗಳು ತೋರಿದವು. ವನಿತೆ ಕೇಳು. ಈ ತೋರ್ಕೆಕೆ ಅಹಂಭಾವ ಬಿಟ್ಟರೆ ಬೇರೊಂದು ಕಾರಣ ಇಲ್ಲವೆಯಿಲ್ಲ.

ಶ್ರೀ ನಿಜಗುಣಾರ್ಯರು ಭ್ರಮೆ ಎಂದರೇನು ಎಂಬುದನ್ನು ಹೀಗೆ ವ್ಯಾಖ್ಯಾನಿಸುವರು. "ತನುವೆ ತಾನೆಂಬ ತನು ತನ್ನದೆಂಬ ತನು ಮುಖ್ಯಮಾದ ಜಗವಿದು ನಿಜವೆಂಬ.... ವಿವೇಕವನುಳಿದ ಚೇತನಭಾವವದು ತಾನೆ ಭ್ರಮೆಯಕ್ಕು॥ ಪರ, ಬೋಧೆ 3ನೇ ಸಂಧಿ. 1–5. ಟಿಪ್ಪಣಿ:– (2) (ಅನುಭವ ಸಾರ 5–3ನೇ ಸೂತ್ರ) ಕೋಳಿಯು ಸೂರ್ಯಾಸ್ತವಾಗಲು ಹೊರಗೆ ಮೇಯುತ್ತಿರುವ ತನ್ನ ಮರಿಗಳನ್ನು ಬರಮಾಡಿಕೊಂಡು ತನ್ನ ಪಕ್ಕದೊಳಗೆ ಸಂಚರಿಸದಂತೆ ಇರಿಸಿಕೊಂಡು, ಅವುಗಳೊಡನೆ ತಾನೂ ಗೂಡಿನಲ್ಲಿ

ನಿದ್ರೆ ಮಾಡುವಂತೆ, ಪ್ರಕೃತಿಯು, ವಿಕರಿಸದೆ ಉಪರತಿಯಿಂದ ಇರುವ ಮನ ಬುದ್ಧ್ಯಾದಿ ಸಕಲ ಕರಣಗಳೊಡಗೂಡಿ ಚಿದಾತ್ಮನಾಶ್ರಯದಲ್ಲಿ ಸುಖವಾಗಿರುವದು. (ಇದು ನಿದ್ರಾವಸ್ಥೆ) ಅಹಂಭಾವ ಮತ್ತು ದೇಹಾದಿ ಜಗದ್ಭಾವಗಳು ನಿನ್ನ ಭ್ರಮೆ (ಕಲ್ಪನೆ) ಯಿಂದ ತೋರುವವು.

ಶ್ರವಣಾದಿಯಿಂದ ಶಬ್ದಾದಿ ಗೋಚರಿಸಿದ।
ವವರೊಳೊಂದೊಂದು ವಿಷಯದಲ್ಲಿ॥
ವಿವರಿಸದುಳಿದಂಬರಾದಿ ತೋರ್ಕೆಗಳ ನೆ- ।
ಲ್ಲವನಾತ್ಮನೊಡನೆ ಭಾವಿಪೆ ನೀನು ॥ 5 ॥

ಶ್ರವಣ (ಕಿವಿ) ದಲ್ಲಿ ಆಕಾಶವಿದೆ. ಆದರಿಂದ ಶಬ್ದ ಗೋಚರಿಸುವದು ಚರ್ಮದಲ್ಲಿ ವಾಯುವಿದೆ. ಆದರಿಂದ ಸ್ಪರ್ಶ ಜ್ಞಾನವಾಗುವದು. ನೇತ್ರದಲ್ಲಿರುವ ಬೆಳಕಿನಿಂದ ರೂಪುಗಳು ಕಾಣುವವು. ಗಗನಾದಿ ಪಂಚಭೂತಗಳು ಮತ್ತು ಶಬ್ದಾದಿ ಐದು ವಿಷಯಗಳು ಜಡದೃಶ್ಯವಾಗಿ ಅರಿಸಿಕೊಳ್ಳುವವು. ಇವೆಲ್ಲವನ್ನು ಎದುರಿಟ್ಟು ಅರಿಯುವ ಆತ್ಮನು (ನೀನು) ಅಜಡನು (ಚೇತನ) ದೃಶ್ಯವಿಲಕ್ಷಣನು. ಜಡ– ಅಜಡ, ಅನಾತ್ಮ– ಆತ್ಮ ಅನೃತ– ಸತ್ಯ ಎಂಬೀವಿವರಣೆ (ವಿವೇಕ) ಮಾಡದೆ, ಎಲ್ಲ ಜಡದೃಶ್ಯಗಳನ್ನು, ಏನೊಂದು ತೋರದ ಚಿನ್ಮಯಾತ್ಮನೊಡನೆ ಸಮರಸ ಮಾಡಿ (ತಾದಾತ್ಮ ಭಾವದಿಂದ ನೋಡುವೆ. ಇದು ನಿನ್ನ ಭ್ರಮೆ.)

ಆದರಿಂದೆ ನೀನಿಂತು ಬಗೆದುದು ಪುಸಿ ನಿನ್ನೊ।
ಳಿದಮಹಮೆನಿಸುವೀ ವಿಶ್ವವು ॥
ಪುದಿದು ತೋರುತ್ತಿಹುದಾಗಿ ನಿನ್ನೊಳು ನಿನ್ನ।
ನೊದವಿ ನೀನಾರೈಯಬೇಹುದು ॥ 6 ॥

ಆದುದರಿಂದ ನೀನು (ಮೇಲೆ ಹೇಳಿದಂತೆ) ತಿಳಿದುದು ಪುಸಿಯಾಗಿದೆ (ಭ್ರಮೆಯಕ್ಕು) ನಿನ್ನೊಳಗೆ 'ಇದಂ, ಅಹಂ ಎನಿಸುವ ಈ ವಿಶ್ವ ಪ್ರಪಂಚವು ಪುದಿದು (ಜನಿಸಿ) ತೋರುತ್ತಿರುವದು. ಆದುದರಿಂದ ನಿನ್ನೊಳಗೆ ನಿಜವಾಗಿ ''ನೀನಾರು'' (ಯಾಕೆಂದರೆ ನೀನು ದೇಹವಲ್ಲ) ಎಂದು ವಿಚಾರಿಸಬೇಕು. (ಆತ್ಮ ಮತ್ತು ಅಹಂಕಾರ ಇವುಗಳ ವಿಶ್ಲೇಷನೆಯನ್ನು ಗುರು ಮುಖದಿಂದ ಮಾಡಬೇಕು.)

ಅರಿವಿಂದ್ರಿಯಂಗಳಿಂದರಿಯೆ ನಿನ್ನುವನಾವ ।
ತೆರದಿಂದೆ ಪೊರಗಿಲ್ಲದಾತ್ಮನ॥
ಮರವೆ ಕಾರಣ ಮಾಗಿ ಮೋಹಿಸಿ ನೀನಿಂತು।
ಬರಿದೆ ಕಲ್ಪಿಸಿದೆ ವಿಷಯದೊಳು ॥ 7 ॥

(ಅರಿವು ಮರೆವು ಕಲ್ಪಿತ ಜೀವನ ಭ್ರಮೆಯು. ಇದುವೆ ಪ್ರವರ್ತಕ ಕರ್ಮದ ಸಾರವು. ಸಚ್ಚಿದಾನಂದಾತ್ಮನು ಹೊರಗಿಲ್ಲ. ಬುದ್ಧಿ ಇಂದ್ರಿಯಗಳಿಂದ ಆತ್ಮನನ್ನು

ಅರಿಯುವದು ಅಥವಾ ಶೋಧಿಸುವದು ವ್ಯರ್ಥ ಶ್ರಮ. ಚಿದಾತ್ಮನನ್ನು ಮರೆಯುವದು ಸಾಧ್ಯವಿಲ್ಲ. ನಂದಾದೀಪದಂತೆ ಎಂದೆಂದೂ ಸ್ವಯಂ ಪ್ರಕಾಶದಿಂದ ಬೆಳಗುವ ಆತ್ಮರವಿಗೆ ಮರವೆಯೆಂಬ ಕತ್ತಲೆ ಮುಸುಗಿದೆ, ಎಂದು ಹೇಳುವದು ಕನಸಿನ ಮಾತು. ಆದರೆ ಅಜ್ಞತೆಯಿಂದ (ಭ್ರಮೆಯಿಂದ) ಚಿದಾನಂದಾತ್ಮನನ್ನು ಮರೆತಂತೆ ಆಗಿದೆ. (ಪೂರ್ಣವಾಗಿ ಮರೆತಿಲ್ಲ) ಆದುದರಿಂದ ಜೀವನು ಬಾಹ್ಯವಿಷಯಗಳಲ್ಲಿ ಸುಖವನ್ನು ಕಲ್ಪಿಸಿ, ಅದು ಇಂದಿಲ್ಲ ನಾಳೆ ಸಿಗುವದೆಂಬ 'ಬರಿದೆ' ಭ್ರಮೆಯಿಂದ ಹೊರಟಿದ್ದಾನೆ. (ಶ್ರೀ ರಮಣ ತತ್ತ್ವರಹಸ್ಯಲಾವಣಿ)

ಅರಿವು ನಿನ್ನೊಡಲಾಗಿ ಮರೆದೆನೆಂಬುದು ಮಿಥ್ಯೆ।
ಮರವೆಯಿಲ್ಲಾಗಿ ತೋರ್ಪಖಿಳವು॥
ನೆರೆಪುಸಿಯಪ್ಪುದಿದನು ನಿನ್ನೊಳರಿ ಬಚ್ಚ।
ಬರಿಯರಿವೆಂದೆ ಸಾರಸಗಂಧಿ ॥ 8 ॥

ಸಾರಸಗಂಧಿ ಮೈತ್ರೇಯಿ, ಅರಿವು ನಿನ್ನ ಒಡಲು, ಆದ್ದರಿಂದ ಮರವೆ ನಿನ್ನೊಳು ಪುಸಿದೋರಿಕೆ. ಮರವೆ ಇಲ್ಲದಾಗ ನಿನ್ನಲ್ಲಿ ತೋರಿ ಹಾರುವ ಯಾವತ್ತು ಪ್ರಪಂಚವು ಮಿಥ್ಯೆಯಾಗಿದೆ. ಬಚ್ಚ ಬರೆ ಅರಿವು ನೀನಿರುವೆ.

ಉಳ್ಳ ಮೃತ್ತಿಕೆಯೊಳಗಿಲ್ಲದ ಕುಂಭಾದಿ।
ಯುಳ್ಳಂತೆ ಕಾಣಿಸಿ ಬಗೆಯಿಂದೆ॥
ನಲ್ಲಳೆ ಪರಿತೋರ್ಪುವಂತೆ ಭಾವಿಸಲು ತಂ।
ನಲ್ಲಿ ಮೂಜಗವಿದು ಪುಸಿದೋರ್ಕೆ ॥ 9 ॥

ಇರುವ ಮಣ್ಣಲ್ಲಿ ಇಲ್ಲದ ಮಡಿಕೆ ತೋರುವದು. ನಲ್ಲಳೆ, ಇದು ಭ್ರಾಂತಿಯೆಂದೇ ತಿಳಿ. ವಿಚಾರಿಸಲಾಗಿ ಮೂರು ಲೋಕಗಳು (ಜಾಗ್ರಾದಿ ಮೂರು ಅವಸ್ಥೆ) ತನ್ನಲ್ಲಿ ಇಲ್ಲದೆ ಪುಸಿಯಾಗಿ ಕಾಣಿಸುವವು.

ಇದು ನಿವರ್ತಕ ಕರ್ಮ ವಿವರಿಂದೆ ಭವಬಂಧ।
ದುದಯಮೊಂದಿನಿಸಿಲ್ಲವೆನೆ ಕೆಟ್ಟು॥
ಸುದತಿ ಕೇಳಾತ್ಮನದ್ವಯ ನಿತ್ಯ ಸದಮಳ।
ಚಿದಖಂಡಾನಂದ ಸಂಪದನಕ್ಕು ॥ 10 ॥

[ ಟಿಪ್ಪಣಿ— : "ಸುಮ ಸುಮನ ಸುಖವನ್ನು ಜಗದಾಗ ಹುಡಕತೀವಿ... ಸುಖವೊಂದೇ ಬರಲೆಂದು ಮಿಡಕತೀವಿ, ಮಿಡಕತೀವಿ ಸುಖ ಜಗದಾಗ ಸಿಗುದಿಲ್ಲ, ಸಿಗುದಿಲ್ಲ ಹುಡುಕೂದು ಎಂದೆಂದೂ ಮುಗೂದಿಲ್ಲ॥
— *ಶ್ರೀ ರಮಣರ ಲಾವಣಿ.* ]

ಸುದತಿ (ಚಲುವೆ), ಈವರೆಗೆ ಹೇಳಿದುದು ನಿವರ್ತಕ ಕರ್ಮವು. ಇದರ ಸ್ವರೂಪ ತಿಳಿದರೆ ಭವಬಂಧದ ಮೂಲ ಬೀಜ ಎಳ್ಳಷ್ಟು ಇರದೆ ಕೆಟ್ಟು ಹೋಗುವದು. ಅದ್ವಯ, ನಿತ್ಯ, ಸದಮಳ, ಚಿದಖಂಡ ಆನಂದಾತ್ಮನ ಸಂಪದವು ನಿನಗೆ ದೊರೆಯುವುದು.

ಅಕುಟಿಲೆ ಕೇಳ್ಪ್ರವರ್ತಕ ನಿಷೇಧಂ ನಿವ।
ರ್ತಕವೆ ವಿಹಿತ ಮಿಂತುಭಯಮಾಗಿ॥
ಮಕರಿಸುವೀ ಕರ್ಮವಳಿದು ನಿಂದಾಕ್ಷಣ।
ವಕಲಂಕ ಪರಮಾತ್ಮಕನು ತಾನೆ॥ 11 ॥

ಸರಳ ಸ್ವಭಾವದ ಮೈತ್ರೇಯಿ, ಕೇಳು, ಪ್ರವರ್ತಕವು ನಿಷೇಧಿಸಿದ ಕರ್ಮ, ನಿವರ್ತಕವು ವಿಹಿತ ಕರ್ಮ. ಇಂತು ಈ ಉಭಯ ಕರ್ಮಾವಳಿ ಒಮ್ಮೆ ಬತ್ತುವದು, ಮತ್ತೊಮ್ಮೆ ಬೆಳೆಯುವದು. ಆದುದರಿಂದ ಇವನ್ನು ಮೀರಿ ನಿಲ್ಲು. ನಿಂದಾಗಳೆ ಅಕಲಂಕ ಪರಮಾತ್ಮನು, ನಿಷ್ಕ್ರಿಯನಾಗಿ ನಿನ್ನೊಳು ಮೆರೆವನು.

– ಇತಿ ನಿವರ್ತಕ ಕರ್ಮ ನಿರೂಪಣೆ –

## 17ನೇ ಸೂತ್ರ

ಸತ್ವಾದಿಗುಣಬುದ್ಧಿಯಿಂದವಸ್ಥಾತ್ರಿತ ।
ಯತ್ವವಾಜೀವಂಗೆ ದೊರಕೊಳ್ಗುಂ ॥

ಸತ್ವ ರಜ ತಮೋಗುಣಗಳ ಪ್ರಭಾವದಿಂದ ಜೀವನಿಗೆ ಅವಸ್ಥೆಗಳು ಮೂರು ಪ್ರಾಪ್ತವಾಗುವವು.

ಬಳಿಕಾ ಪ್ರವರ್ತಕವೆನಿಪ ಕರ್ಮಾಷ್ಟಕ।
ದೊಳಗಣ ಮೂರವಸ್ಥೆಗಳನು॥
ತಿಳಿಪುವೆನದರಿಂದೆ ಭವಬಾಧೆ ಜೀವಾತ್ಮ।
ನೊಳು ತೋರ್ಪ ಬಗೆಯ ನೀನರಿಯಲ್ಕೆ॥ 1 ॥

ಪ್ರವರ್ತಕವೆನಿಸುವ 'ಕರ್ಮಾಷ್ಟಕದಲ್ಲಿ (ಸೂತ್ರ–15–3) ಹೇಳಿದ ಮೂರವಸ್ಥೆಗಳನ್ನೀಗ ವಿವರಿಸುವೆನು. ನೀನಿದನು ಅರಿತರೆ ಜೀವಾತ್ಮನಲ್ಲಿ ತೋರುವ ಭವಬಾಧೆಯು ಭ್ರಮೆ (ಬಗೆ, ಕಲ್ಪನೆ, ಪುಸಿದೋರಿಕೆ) ಯೆಂದೆ ಸಿದ್ಧವಾಗುವುದು.

ಮೈತ್ರೇಯಿ ಲೋಕತ್ರಯಾತ್ಮಕ ಜೀವಂಗೆ।
ಪಾತ್ರವೆನಿಸಿ ವಿಚಿತ್ರತೆಯಾಗಿ॥
ಸೂತ್ರಿಸಿ ಸತ್ವಾದಿ ಗುಣರೂಪಿನಿಂದವ।
ಸ್ಥಾತ್ರಯಮಿವು ನಿಯಮದೆ ತೋರ್ಕು॥ 2 ॥

ಮೈತ್ರೇಯಿ, ಮೂರುಲೋಕ, ಮೂರು ಪುರಗಳು ಅಥವಾ ಮೂರು ಅವಸ್ಥೆಗಳು ನಿಯಮಿತವಾಗಿ (ದಿನ ದಿನವೂ) ಜೀವನು ನಟಿಸುವ ವಿಚಿತ್ರವಾದ ರಂಗಭೂಮಿ ಗಳಾಗಿವೆ. ಜಾಗ್ರಾದಿ ಮೂರವಸ್ಥೆಗಳು ಸತ್ವಾದಿ ಮೂರುಗುಣಗಳಿಂದ ಒಳಗೊಂಡು (ಸೂತ್ರಿಸಿ, ಸೂತ್ರದ ಗೊಂಬೆಯಂತೆ ಕಲ್ಪಿತಾತ್ಮ ಜೀವನು 'ಇದಂ ಭಾವತ್ರಯ ದರ್ಶಿಯಾಗಿ (ಸೂತ್ರ 6–4) ತೋರುವನು.

ಜಾಗರಣಾದಿಗಳಾಗು ಪೋಗಿನೊಳು ತಾ।
ನಾಗುವ ಪೋಗುವ ತೆರದಿಂದೆ ॥
ಆಗಳಿಂತುರೆ ಕಾಣ್ಬನವಿವೇಕದಿಂದೆ ತಾ।
ನಾಗದ ಪೋಗದಚಲಿತಾತ್ಮ ॥3 ॥

ಏನೊಂದಾಗದ, ಏನೊಂದು ತೋರದ, ಎಲ್ಲಿಯೂ ಪೋಗದ ಅಚಲಿತಾತ್ಮ ಅನುಪಮನಾಗಿ ತಾನಿದ್ದರೂ ಜೀವನು ಅವಿವೇಕದಿಂದ (ತನ್ನ ಅಜ್ಞತೆಯಿಂದ) ಜಾಗ್ರ ಸ್ವಪ್ನ, ಸುಪ್ತಿಯೆಂಬ ಮೂರವಸ್ಥೆಗಳ ಆಗುಹೋಗಿನೊಳು ಬದ್ಧನಾದಂತೆ ತೋರುವನು.

ಜಾಗರಣಾದಿಗಳಾ (ಸತ್ವ) ಮುಖ್ಯಮಾ।
ದಾ ಗುಣಮಯ ಬುದ್ಧಿ ಭ್ರಮೆಯಿಂದೆ ॥
ನೀಗಿರಲರಿದೆಂದೆನಿಸಿ ತೋರ್ಪವವನನು।
ರಾಗದಿಂದರಿಯೆ ಪೇಳ್ವೆನು ಕೇಳು ॥ 4 ॥

ಜಾಗರಣಾದಿ ಮುರವಸ್ಥೆಗಳಲ್ಲಿ ಸತ್ವಾದಿ ಮೂರು ಗುಣಮಯ ಬುದ್ಧಿ ಬ್ರಮೆಯಿಂದ ಕಲ್ಪಿತ ಜೀವನು (ವಿಶ್ವಾದಿಮೂರು ಹೆಸರಿನಿಂದ) ತೋರಿ ಬಳಲುವನು. ಈ ಮೂರರ ಬಂಧವನ್ನು ನೀಗಲು ಅರಿಯಲಾರನು. ಈ ಮೂರವಸ್ಥೆಗಳನು ನೀನು ತಿಳಿಯುವಂತೆ ಅನುರಾಗದಿಂದ ಹೇಳುವೆ, ಕೇಳು.

ಜ್ಞಾನದಿಂ ಜಾಗ್ರವಜ್ಞಾನದಿಂದವೆ ಸುಪ್ತಿ।
ಜ್ಞಾನಾಜ್ಞಾನಂಗಳೆರಡು ಮಿಶ್ರ ॥
ತಾನಾಗಲದರಿಂದೆ ಕನಸಪ್ಪುದೆಲೆ ವನ।
ಜಾನನೆ ತಿಳಿವುದೀ ಕ್ರಮದಿಂದ ॥ 5 ॥

ಬುದ್ಧಿಯ ಜಾಣ್ಮೆಯಿಂದ ಜಾಗರಣ ತೋರುವದು. ಅಜ್ಞಾನ ವಶದಿಂದ ಸುಪ್ತಿ ಸಂಭವಿಸುವದು (ತಮೋಗುಣ ಸುಪ್ತಿಯಲ್ಲಿ) ಜ್ಞಾನಾಜ್ಞಾನಗಳ ಮಿಶ್ರಣದಿಂದ, ಅಂದರೆ ರಜೋಗುಣದಿಂದ ಸ್ವಪ್ನಾವಸ್ಥೆ ತೋರುವದು. ಕಮಲ ಮುಖಿ, ಎಲೆ ಮೈತ್ರೇಯಿ, ಮುಂದೆ ಹೇಳುವ ಕ್ರಮದಿಂದ ಈ ಮೂರವಸ್ಥೆಗಳನ್ನು ತಿಳಿಯುವವಳಾಗು.

ಕರಣ ಬಾಹ್ಯೇಂದ್ರಿಯಾದಿಗಳುರೆ ಜೀವನೊಳ್ ।
ಬೆರೆದೆಚ್ಚರದೊಡಗೂಡಿ ರವ ಮುಖ್ಯ ॥
ಪರಿಕರವೆನಿಪ ವಿಷಯದೊಳು ವರ್ತಿಸು ।
ತಿರೆ ಜಾಗರಣ ವಪ್ಪುದದು ನೋಡು ॥ 6 ॥

ಅಂತಃಕರಣ ನಾಲ್ಕು, ಬಾಹೇಂದ್ರಿಯ ಹತ್ತು ಇವುಗಳೊಡಗೂಡಿ ಜೀವನು ಶಬ್ದ ಸ್ಪರ್ಶ ರೂಪ ರಸ ಗಂಧವೆಂಬ ವಿಷಯಗಳಲ್ಲಿ ಸುಖದಾಭಾಸ ಭೋಗಿಸುವನು. ಇದೆ ಜಾಗರಣ, ಎಂಬುವ ಅವಸ್ಥೆ. (ಈ ಮೂರವಸ್ಥೆಗಳವಿವರಣೆಯನ್ನು ಸಾಧಕರು ಜ್ಞಾಪ್ರ. ಸ್ಥಳ 19ನೇಪದ್ಯದಲ್ಲಿ ನೋಡಬಹುದು.)

ಕರಣಾದಿಗಳು ಮನವೆರೆದುಪರತಿಯೊಳೊಂ ।
ದಿರಲಾ ಮಾನಸಮೊಂದೆ ಭ್ರಮೆಯಿಂದೆ ॥
ಅರಿವಿನವಾಸನಾ ವಿಷಯಮಂ ಕಾಣ್ಬಜಾ ।
ಗರಣದಭಾವವೆ ಕನಸಕ್ಕು ॥ 7 ॥

ಬಳಿಕ ಮೇಲೆ ಹೇಳಿದ ಕರಣಗಳಿಗೆ ಉಪರತಿ ಬರುವದು. ಮನಮೊಂದೆ ಉಳಿಯುವದು. ಅದು ತನ್ನ ಭ್ರಮೆಯಿಂದ, ಜಾಗ್ರದಲ್ಲಿ ತಾನರಿದ ವಿಷಯಗಳ ವಾಸನೆಯಿಂದ ತಾನೊಂದೆ ಮೂಲೋಕದಲ್ಲಿ ಸುಳಿವುದು. ಇದು ಸ್ವಪ್ನಾವಸ್ಥೆ. ಇಲ್ಲಿ ನೆನಸು (ಜಾಗರಣ) ಅಭಾವವಾಗಿದೆ. (ಆದರೆ ನೆನಸಿನಲ್ಲಿ ಇರುವ ಜೀವಾತ್ಮನೇ ಕನಸಿನಲ್ಲಿದ್ದಾನೆ.)

ಕರಣಾದಿ ತತ್ತ್ವನಿಕರವೆಲ್ಲವಾ ಮನ ।
ವೆರಸಿ ಮೂಲ ಪ್ರಕೃತಿಯೊಳೊಂದಿ ॥
ಪಿರಿದಡಗಿರೆ ಸುಪ್ತಿಯದರೊಳಾತ್ಮನು ತಮ ।
ದಿರವನರಿವ ನೇತ್ರದೋಲಿರ್ಕು ॥ 8 ॥

ಮೇಲೆ ಬರೆದ ಎರಡವಸ್ಥೆಗಳಲ್ಲಿರುವ ಅಖಿಳ ತತ್ತ್ವ ಸಂಪದವಡಗಿ (ಅವುಗಳ) ಸಂಸ್ಕಾರದ ಉಳುಮೆಯಾದ ಮೂಲ ಪ್ರಕೃತಿ ಮತ್ತು ಅದರ ತಮೋಗುಣದಲ್ಲಿ ಬೆರೆದು, ಅವನು ಏನೊಂದರಿಯದೆ ಸುಖವಾಗಿ ನಿದ್ರಿಸುವನು. ಇದೇ ಪ್ರಾಜ್ಞಜೀವನ ಸುಪ್ತಾವಸ್ಥೆ. ನಮ್ಮ ಕಣ್ಣು ಮುಚ್ಚಿದಾಗಲೂ ಕತ್ತಲೆಯನ್ನು ಕಣ್ಣು ಕಾಣುವಂತೆ (ಕತ್ತಲೆಯಲ್ಲಿ ಮುಸುಗಿದ ಪದಾರ್ಥಗಳು ಕಾಣದಿರಬಹುದು) ಚಿದಾತ್ಮನು (ಅರಿವು) ನಿದ್ರೆಯಲ್ಲಿರುವನು.

ತನಿನಿದ್ರೆಯೊಳಗರಿವವನು ಮಿಲ್ಲೆನಲೇನು ।
ವನನಾನರಿಯದತಿ ಸುಖದೊಳು ।
ಇನಿತು ವೇಳೆಯು ಮೊರಗಿರ್ದೆನೆಂದೆಚ್ಚತ್ತು ।
ನೆನಹದೆಂತಹುದನುಭವಿಸದೆ ॥ 9 ॥

ಗಾಢನಿದ್ರೆಯಲ್ಲಿ ಅರಿವು ಇರುವದು. ಇರುವ ಅರಿವುನಿಂದಲೇ ಸುಪ್ತಾವಸ್ಥೆಯ ನಿದ್ರಾನಂದವನ್ನು ತಾನೆ ಅನುಭವಿಸುವನು. ಇನಿತು ವೇಳೆ ನಾನು ಮಲಗಿದ್ದೆನು. ಏನೊಂದು ವಿಷಯ ಮತ್ತು ಮನಬುದ್ಧಿಗಳು ನಿದ್ರೆಯಲ್ಲಿ ಇಲ್ಲದಿದ್ದರೂ ನಾನಲ್ಲಿ ದ್ದು ಅನುಭವಿಸಿದಾನಂದವನ್ನು ಎಚ್ಚೆತ್ತಬಳಿಕ ನೆನಪು ಮಾಡಿ ಹೇಳುವೆನು. ಅನುಭವಿಸದೆ ಇದ್ದ ಸಂಗತಿಯ ನೆನಹು ಆಗಲಾರದು.

– ಇತಿ ಜೀವಂಗೆ ಅವಸ್ಥಾತ್ರಯ ನಿರೂಪಣೆ –

## 18ನೇ ಸೂತ್ರ

ಮೈತ್ರೇಯಿ ಕೇಳವಸ್ಥಾತ್ರಯುವಾತ್ಮಂಗೆ ।
ಗಾತ್ರ ಮೂರರೊಳೊಂದಿ ತೋರ್ಪವು ॥

ಮೈತ್ರೇಯಿ ಕೇಳು. (ದಿನ ದಿನದೊಳು ನೇಮವಾಗಿ) ತೋರುವ ಮೂರವಸ್ಥೆಗಳು ಕಲ್ಪಿತಾತ್ಮಂಗೆ (ಜೀವನಿಗೆ) ಮೂರು ದೇಹಗಳೊಡಗೂಡಿ ತೋರುವವು.

ನಿಯಮದವಸ್ಥಾತ್ರಯವನು ಬಿಡದೆ ತನು ।
ತ್ರಯದಿಂದೆ ಕಾಣ್ಬನಾ ಜೀವನು ।
ಪ್ರಿಯತಮೆ ನಿನಗೆ ನಾನೊಲವಿಂದಲಾತನು ।
ತ್ರಯದಂದವರುಪುವೆನಾಲಿಸು ॥ 1 ॥

ಪ್ರಿಯತಮೆ, ನಿಯಮದ ಮೂರವಸ್ಥೆಗಳನು ಬಿಡದೆ ಆ ಜೀವನು ಮೂರು ತನುಗಳನೊಡಗೂಡಿ ಅನುತಾಪಗೊಳುತ್ತಿರುವನು. ಆ ತನುತ್ರಯದ ಅಂದವನು ನಿನಗೆ ಅರುಪುವೆನು, ಆಲಿಸು.

ಐದು ಭೂತಂಗಳೀರೈದಿಂದ್ರಿಯ ಪ್ರಾಣ ।
ವೈದು ಕರಣವೈದೆನಿಸುತಿರ್ಪ ॥
ಭೇದವಡೆದ ಪಂಚವಿಂಶತಿ ತತ್ತ್ವದಿಂ ।
ದಾದುದಬಲೆ ತೋರತನುವಿದು ॥ 2 ॥

ಅಬಲೆ(ಮೈತ್ರೇಯಿ), ತೋರತನುವಿನ(ಸ್ಥೂಲದೇಹದ) ಉತ್ಪತ್ತಿಹೇಳುವೆ. ಆಕಾಶಾದಿ ಐದು ಭೂತಗಳು, ಹತ್ತುಬಾಹ್ಯ ಇಂದ್ರಿಯಗಳು, ಪ್ರಾಣಗಳು ಐದು, ಮನಾದಿ ಐದು ಅಂತಃಕರಣ ಇಂತು ಇಪ್ಪತ್ತೈದು (25) ತತ್ತ್ವಗಳ ಒಬ್ಬುಳಿಯಾಗಿ ಜನಿಸಿತು, ಈ ತೋರತನು.

ತನುವಿದು ತಾನಾರು ವಿಕೃತಿಯನುಳ್ಳುದು ।
ವನಜಾಸ್ಯೆ ಕೇಳಾ ವಿಕೃತಿಗಳು ॥
ಜನಿಯಸ್ತಿ ಪರಿಣತೆ ವರ್ಧನ ಕ್ಷಯ ಮೃತಿ ।
ಯೆನಿಸುತಖಿಳ ವಿಷಯದೊಳಿರ್ಕು ॥ 3 ॥

ದೇಹವು ಅಸ್ತಿ(ಗರ್ಭದಲ್ಲಿರುವದು), ಹುಟ್ಟುವದು, ಪರಿಣಾಮಗೊಳ್ಳುವದು, ಬೆಳೆಯುವದು, ಕ್ಷೀಣವಾಗುವದು (ಕೊನೆಗೆ) ನಾಶವಾಗುವದು. ಈ ಆರುವಿಕಾರಗಳು,ಕಮಲ ಮುಖಿ ಮೈತ್ರೇಯಿ ಕೇಳು, ತನು ಮೊದಲು ಮಾಡಿ ಎಲ್ಲ ವಿಷಯಗಳಲ್ಲಿ ಇರುವವು.

ಜನಿಸಿದಂತುಂಟೆನಿಪಂತುರೆ ಬೆಳೆದುದೆಂ।
ದೆನಿಪ್ಪಂತೆ ಯೌವನಮಾದಂತೆ॥
ಪುನರಪಿ ವೃದ್ಧತೆಯಾದಂತೆ ಕೆಟ್ಟುದೆಂ।
ದೆನಿಪಂತೆ ವಿಕೃತಿಗಳಿವು ತೋರ್ಕು ॥ 4 ॥

(ಆರು ವಿಕಾರಗಳು ದೇಹಕ್ಕೆ ಇದ್ದರೂ ಅಧ್ಯಾಸಬಲದಿಂದ) ತಾನೆ ತಾಯಿಗರ್ಭದಲ್ಲಿ ಇದ್ದಂತೆ, ಜನಿಸಿದಂತೆ, ಬೆಳೆದಂತೆ, ಯೌವನಕ್ಕೆ ಬಂದಂತೆ, ಪುನಃ ವೃದ್ಧನಾದಂತೆ, ಕೆಟ್ಟಂತೆ ಈ ವಿಕೃತಿಗಳು ತೋರುವವು.

ಇನಿತು ವಿಕೃತಿಯುಳ್ಳದೀ ತನುವಿದು ತನ್ನ।
ದೆನಿಪ ತಾನೆಂಬಹಂಭ್ರಮೆಯಿಂದೆ॥
ಜನಿಪುಗುಮಾತನುಧರ್ಮವಾ ಜೀವನಿ।
ಗನುದಿನವೆಡೆವರಿಯದೆ ನೋಡು ॥ 5 ॥

ಈ ಆರು ವಿಕಾರಗಳು ಶರೀರಕ್ಕೆ ಇರುವದು ಸಹಜ. ಆದರೆ 'ತನುವಿದು ತಾನು, ಮತ್ತುತನ್ನದು' ಎಂಬ ಅಹಂಭ್ರಮೆಯಿಂದ ತನುಧರ್ಮಗಳು ಜೀವನಿಗೆ ಬಿಟ್ಟೂಬಿಡದೆ ದಿನದಿನವೂ ಜನಿಸುವವು.

ನಿಯತದಿಂದರಿಯನ್ನಮಯ ಕೋಶಮಾ ಪ್ರಾಣ।
ಮಯ ಮನೋಮಯ ವಿಜ್ಞಾನಾನಂದ॥
ಮಯವೆಂಬ ಕೋಶವೈದೀ ದೇಹದೊಳ್ಭ್ರಾಂತಿ।
ಮಯನಾದ ಜೀವಂಗೆ ತೋರ್ಪವು॥ 6 ॥

ಭ್ರಾಂತನಾದ ಜೀವನಿಗೆ ಇರುವ ಪಂಚಕೋಶಗಳು :– ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ. ಇವು ನಿಯಮಿತವಾಗಿ ತೋರುವವು.

ಸ್ಥಿತಿ ಚೇಷ್ಟೆಸಂಶಯಗತಿ ವಿಚಿತ್ರಜ್ಞಾನ।
ತತಿ ವಿಷಯಾನಂದದಭಿರತಿ॥
ಪ್ರತಿದಿನಮಿಂತು ಜೀವನಿಗಕ್ಕುಮಾ ಕ್ರಮ।
ದತಿಶಯದಿಂದೆಡೆವರೆಯದೆ॥ 7 ॥

ಈ ಐದು ಕೋಶಗಳ ಧರ್ಮಗಳನ್ನು ಕ್ರಮವಾಗಿ ಹೇಳುವೆ. ಒಂದು ಸ್ಥಿತಿಯಿಂದಿರುವದು, ಚೇಷ್ಟಿಸುವದು, ಸಂಶಯದಿಂದ ಅತ್ತ ಇತ್ತ ಓಡುವದು, ವಿಚಿತ್ರವಾದ (ಲೌಕಿಕ) ಜ್ಞಾನದಿಂದ ಮೆರೆವುದು ಮತ್ತು ವಿಷಯಾನಂದದ ಅಭಿರತಿಯಿಂದ ಮೋಹಕವಾಗಿರುವದು. ಇಂತಿವು ಪ್ರತಿದಿನವೂ ಜೀವನಿಗೆ ಎಡಬಿಡದೆ ಮುಸುಗಿರುವವು.

ಇಂತು ಜೀವಭ್ರಾಂತಿಯಿಂದವೆ ತೋರದೇ।
ಹಂತೋರ್ಪುದಿಂದ್ರಿಯವಶಮಾಗಿ॥
ಮುಂತೊದಗುವ ಸೂಕ್ಷ್ಮತನುಭಾವವಾಗಳಾ।
ಭ್ರಾಂತಿಯಿಂದವೆ ಕಾಣಪುದು ನೋಡು॥8॥

ಇಂತು ಜೀವಭ್ರಾಂತಿಯಿಂದಲೆ ಸ್ಥೂಲ ದೇಹವಿದು (ಜಾಗ್ರದಲ್ಲಿ) ಇಂದ್ರಿಯಗಳ ವಶವಾಗಿ (ವಿಶ್ವನಾಮಕ) ಜೀವನಿಗೆ ತೋರುವದು. ಬಳಿಕ ಸೂಕ್ಷ್ಮ ದೇಹವು ಪ್ರಾಪ್ತವಾಗಲು, ಆ ತನುವೆ ತಾನೆಂಬ ಭ್ರಾಂತಿ ತೈಜಸ ಜೀವನಿಗೆ (ಸ್ವಪ್ನದಲ್ಲಿ) ತೋರುವದು.

ಇನಿಯಳೆ ತೋರತನುವಿನ ಶಕ್ತಿಗಳೆ।
ತನಿತರಿಂದವೆ ಸೂಕ್ಷ್ಮ ತನುವದು॥
ಜನಿಪುದು ಮನಮೊಂದರಿಂದವಾ ಜೀವಂಗೆ।
ಘನವಿಚತ್ರಾನುರೂಪಿತಮಾಗಿ॥9॥

ವಲ್ಲಭೆ (ಸತಿ) ಕೇಳು. ಸ್ಥೂಲದೇಹದಲ್ಲಿ ಎಷ್ಟು ಮಾಯಾಶಕ್ತಿಗಳು ಇರುವವೋ ಅವೆಲ್ಲಸೂಕ್ಷ್ಮರೂಪದಿಂದ ಲಿಂಗ ತನುವಿನಲ್ಲಿರುವವು. ಆದರೆ ಸ್ವಪ್ನದಲ್ಲಿ ಮನಮೊಂದೆ ಕರಣವು, ತಾನೆ ಹೆಣ್ಣು ತಾನೆ ಗಂಡು, ತಾನೆ ಗಾಡಿ ತಾನೆ ಚಾಲಕ, ತಾನೆ ದಾರಿ–ಗುರಿಯಾಗಿ ಬಹು ವಿಚಿತ್ರತೆಯಿಂದ ಸೂಕ್ಷ್ಮತನುವಾಗಿ (ತೈಜಸ) ಜೀವನಿಗೆ ಭೋಗ ಸಾಮಗ್ರಿಯಾಗುವದು.

ಬೀಜದೊಳಗೆ ವೃಕ್ಷವಡಗಿ ಮೈದೋರದಿ।
ಪೂರ್ಜಿಯಿಂದಖಿಳ ಕರಣವೆಲ್ಲ॥
ರಾಜಿಪವಿದ್ಯೆ ಯೊಳಡಗಿರಲದು ತಾನೆ।
ರಾಜೀವನೇತ್ರೆ ಕಾರಣದೇಹ॥10॥

ಚಂದ್ರನಂತೆ ನೇತ್ರವುಳ್ಳ ಮೈತ್ರೇಯಿ, ಬೀಜದಲ್ಲಿ ವೃಕ್ಷ ಇದೆ. ಆದರೆ ಮೈದೋರದು, ಕಣ್ಣಿಗೆ ಕಾಣದು. ಇದೇ ರೀತಿ ಸ್ಥೂಲ ಸೂಕ್ಷ್ಮ ದೇಹಗಳಲ್ಲಿರುವ ಅಖಿಳಕರಣಗಳು ತಮ್ಮ ಸಾರ ಸಹಿತವಾಗಿ ರಂಜಿಸುವ ಅವಿದ್ಯೆಯಲ್ಲಿ (ಕಾಣದಂತೆ ತಮೋಗುಣದಲ್ಲಿ) ಅಡಗಿರಲು ಆ ನಿಳಯಕ್ಕೆ ಕಾರಣ ದೇಹವೆನ್ನುವರು.

ಭಾರೂಪ ಜೀವಾತ್ಮನಾರಬ್ಧ ಭೋಗಕ್ಕೆ।
ಕಾರಣಮೀ ತನುತ್ರಯಮಿವು ॥
ಆರಯ್ಯೆ ಸತ್ವತಮೋಗುಣ ಮಿಶ್ರದಿಂ।
ದೋರಂತೆ ತೋರಿ ಮೋಹಿಸುತಿರ್ಕು ॥ 11 ॥

ಚಿದಾಭಾಸ ಜೀವನ ಪ್ರಾರಬ್ಧ ಭೋಗಕ್ಕೆ ಈ ಮೂರು ದೇಹಗಳು ಕಾರಣವಾಗಿವೆ. ಸತ್ವಗುಣದಿಂದ ಸ್ಥೂಲ ದೇಹದಲ್ಲಿ, ರಜೋಗುಣದಿಂದ ಸೂಕ್ಷ್ಮ ದೇಹದಲ್ಲಿ ಮತ್ತು ಕಾರಣ ಶರೀರದಲ್ಲಿ ತಮಸ್ಸಿನಿಂದ ತೋರಿ ಮಾಯಾತ್ಮ ಜೀವಂಗೆ ಮೋಹಿಸುತ್ತ ಮೂರು ದೇಹಗಳಿರುವವು.

– ಇತಿ ಜೀವಂಗೆ ತನು ತ್ರಯ ನಿರೂಪಣೆ –

## 19ನೇ ಸೂತ್ರ

ಜೀವನೋರ್ವನೆ ತನುತ್ರಯದೊಳಾ ಭ್ರಮೆಯಿಂದೆ ।
ಭಾವಿಸೆ ಮೂದೆರನೆನಿಪನು ॥

(ಹಿಂದೆ ಹೇಳಿದ ಮೂರು ದೇಹಗಳಲ್ಲಿ) ಜೀವನು ಒಬ್ಬನೇ ಇದ್ದರೂ ಜಾಗರಣಾದಿ ಮೂರವಸ್ಥೆಗಳಲ್ಲಿ ''ದೇಹ ನಾನು, ನನ್ನದು'' ಎಂಬ ಭ್ರಮೆಯಿಂದ ಮೂರುತೆರನಾದ ಹೆಸರಿನಿಂದ ಜೀವಿಸುವನು.

ಜೀವನೋರ್ವನೆ ವಿಶ್ವತೈಜಸ ಪ್ರಾಜ್ಞನೆಂ।
ದಾವಗಮೀ ಪೆಸರ್ವಡೆವನು ॥
ಭಾವೆ ಕೇಳಾ ಮೂರು ತನು ಜಾಗ್ರದಾದ್ಯವ।
ಸ್ಥಾ ವಿಷಯತ್ರಯದೊಡಗೂಡಿ ॥ 1 ॥

ಭಾವೆ ಮೈತ್ರೇಯಿ ಕೇಳು. ಒಬ್ಬ ಜೀವನು ವಿಶ್ವ ತೈಜಸ ಪ್ರಾಜ್ಞರೆಂಬ ಮೂರು ಹೆಸರನ್ನು ದಿನನಿತ್ಯ ಪಡೆಯುವನು. ಇವನು ವಿಷಯ ರಹಿತನಾಗಿ ಒಬ್ಬನೇ ಇರಲರಿಯದೆ, ಮೂರು ತನುಗಳು, ಮೂರು ಅವಸ್ಥೆಗಳಲ್ಲಿ ಸ್ಥೂಲ ಸೂಕ್ಷ್ಮ ಹಾಗೂ ಕಾರಣದಮಳಾನಂದ ವೆಂಬ ಮೂರು ಪ್ರಕಾರದ ವಿಷಯಗಳನ್ನು ಭೋಗಿಸುತ್ತ ಇರುವನು.

ತೋರಶರೀರಿ ವಿಕಾರಿ ಮೂಲೋಕ ಸಂ।
ಚಾರಿ ವೈಕಾರಿಕಾಹಂಕಾರಿ ॥
ಚಾರು ಸಂಸಾರಿ ಮಾಯಾಧಾರಿ ವಿಷಯಾನು।
ಕಾರಿ ವ್ಯಾಪಾರಿ ಯಾವಿಶ್ವನು ॥ 2 ॥

ವಿಶ್ವಜೀವನ ಪರ್ಯಾಯ ನಾಮಗಳು :– ತೋರಶರೀರಿ, ವಿಕಾರಿ, ಮೂಲೋಕ (ಅಥವಾ ಮೂರವಸ್ಥೆಗಳ) ಸಂಚಾರಿ, ವೈಕಾರಿಕ ಅಹಂಕಾರಿ, ಸತ್ವಗುಣ ಸಮೇತ ಸಂಚಾರಿ, ಮಾಯಾಧಾರಿ, ವಿಷಯಾನುಕಾರಿ ವ್ಯಾಪಾರಿಯಾಗಿ ವಿಶ್ವ ಜೀವನಿರುವನು. (ಇವನ ನಾಮ ಭೇದವನ್ನು ಮುಂದರಿಸುವರು.)

ಅಖಿಳೇಂದ್ರಿಯೇಶ್ವರನಖಿಳಗ ನಖಿಳಾತ್ಮ।
ನಖಿಳ ಕಾರ್ಯಕ್ಷಮ ನಖಿಳಜ್ಞ॥
ಅಖಿಳ ತತ್ವಾವೃತ ನಖಿಳ ಶಕ್ತಿಯನುಳ್ಳ।
ನಖಿಳೇಶನೆನಿಪನಾವಿಶ್ವನು ॥ 3 ॥

ಹದಿನಾಲ್ಕು ಇಂದ್ರಿಯಗಳಿಗೆ ಈಶ್ವರನು, ಅಖಿಳದೇಶ ಕಾಲಗಳಲ್ಲಿ ಗಮನಾಗಮನ ಶೀಲನು, ಅಖಿಳಾತ್ಮನು, ಸಕಲ ಕರ್ಮಗಳಿಗೆ ಅಧ್ಯಕ್ಷನು, ಜಾಗರಣ ವಿಷಯಗಳ ಅರಿವುಳ್ಳವನು, ಇಪ್ಪತ್ತೈದು ತತ್ತ್ವಗಳಿಂದ ಆವೃತನು, ಅಖಿಳ ಶಕ್ತಿಯುಳ್ಳವನು, ಅಖಿಳೇಶನು ಎಂಬ ನಾಮಗಳಿಂದ ವಿಶ್ವ ಜೀವನು ಮೆರೆಯುವನು.

ಮನಮೊಂದರಿಂದೆ ಮುನ್ನಿನ ಜಾಗರಣದ ವಾ।
ಸನೆಯ ವಿಷಯವೆಲ್ಲವನು ಸೂಕ್ಷ್ಮ॥
ತನುವಿಡಿದರಿವ ವಿಶ್ವನ ಪಡಿಬಿಂಬವೆಂ।
ದೆನಿಪಂಗೆ ತೈಜಸ ಪೆಸರಕ್ಕು ॥ 4 ॥

ಮನಸ್ಸೆಂಬ ಒಂದೆ ಕರಣದಿಂದ ಮುನ್ನಿನ ಜಾಗ್ರದವಸ್ಥೆಯ ವಾಸನೆಯ ವಿಷಯವೆಲ್ಲವನು (ಕನಸಿನಲ್ಲಿ) ಸೂಕ್ಷ್ಮದೇಹವಿಡಿದು ಅರಿಯುವ ತೈಜಸ ಜೀವನು ವಿಶ್ವನ ಪಡಿಬಿಂಬವಾಗಿರುವನು. (ಇವನ ಪರ್ಯಾಯ ನಾಮಗಳು :– ಸೂಕ್ಷ್ಮಶರೀರಿ, ವ್ಯಷ್ಟಿ ಅಭಿಮಾನಿ, ಪ್ರಾತಿಭಾಸಿಕ ಜೀವನು, ಸ್ವಪ್ನಕಲ್ಪಿತ (ಪುರುಷ)ನು, ಇತ್ಯಾದಿ).

ಜಾಗರಣ ಸ್ವಪ್ನ ಭೋಗದಿಂದಲಸಿ ತಾ।
ನಾಗಳಾ ತೋರ್ಕೆಗಳೆಲ್ಲವ॥
ನೀಗಿ ಕಾರಣದೇಹದೊಡನೊಂದಿ ಸುಖರೂಪ।
ನಾಗಿರ್ಪವನು ತಾನೆ ಪ್ರಾಜ್ಞನು ॥ 5 ॥

ಜಾಗರಣ ವಿಷಯ ಹಾಗೂ ಸ್ವಪ್ನ ವಿಷಯಗಳ ಭೋಗದಿಂದ ಬೇಸತ್ತು ತಾನು ವ್ಯವಹಾರಿಕ ಮತ್ತು ಪ್ರಾತಿಭಾಸಿಕ ತೋರಿಕೆಗಳನ್ನೆಲ್ಲ ನೀಗಿ, ಕಾರಣ ದೇಹನೊಡನೆ ವಿಶಾಲವಾದ ಶಿವಸುಖರೂಪನಾಗಿ ಇರುವ ಜೀವನಿಗೆ ಪ್ರಾಜ್ಞನೆಂಬ ಹೆಸರು ಸಲ್ಲುವದು.

[ ಟಿಪ್ಪಣಿ :– ವ್ಯವಹಾರಿಕ ಜೀವನು, ಸ್ಥೂಲ ಶರೀರವ್ಯಷ್ಟಿ ಅಭಿಮಾನಿ, ಬುದ್ಧಿಯಲ್ಲಿ ಪ್ರತಿಬಿಂಬನಾದ ಚೇತನನು, ಚಿದಾಭಾಸನು, ವಿಕ್ಷೇಪ ರೂಪನು, ತೋರಶರೀರಿ, ಪ್ರಮಾತೃ, ಕರ್ತೃಭೋಕ್ತೃ, ಸಂಸಾರಿ, ವಿಷಯಿ, ವಿಜ್ಞಾನಮಯನು, ತ್ವಂ ಪದ ವಾಚ್ಯಾರ್ಥನು. (ವಿವೇಕ ಚಿಂತಾಮಣಿ (77). ]

ತನು ಭೇದದಿಂದ ಹಂಕರಣ ಭೇದದೆ ಗುಣ।
ದನುಭೇದದಿಂದವಸ್ಥಾಭೇದ॥
ಜನಿಪುದರಿಂದೋರ್ವ ಜೀವಂಗೆ ಮೂವಿಧಿ।
ಯೆನಿಪುದಿಂತರಿ ಜೀವತ್ರಯವನು ॥ 6 ॥

ಒಬ್ಬ ಜೀವನಿಗೆ (ಮೂರು ಪ್ರಕಾರದ) ತನು ಭೇದದಿಂದ, ಹಮ್ಮಿನಿಂದೆಸವ ಹದಿನಾಲ್ಕು ಕರಣಗಳ ಭೇದದಿಂದ, ಸತ್ವರಜ ತಮ ಎಂಬ ಮೂರುಗುಣಗಳ ಭೇದದಿಂದ, ಜಾಗ್ರ ಸ್ವಪ್ನ, ಸುಪ್ತಿ ಎಂಬ ಮೂರವಸ್ಥೆಗಳ ಭೇದದಿಂದ (ಓರ್ವ ಕಲ್ಪಿತ ಪುರುಷಗೆ) ಮೂರು ಬಗೆಯಾದ ನಾಮಗಳು ಜನಿಸಿ ತೋರುವವು.

– ಇತಿ ಜೀವತ್ರಯ ನಿರೂಪಣೆ –

## 20ನೇ ಸೂತ್ರ

ಜೀವಂಗೆ ಪಂಚಪಾಶಂಗಳಾಕ್ಲೇಶಂಗ ।
ಳಾವಗಮಿರ್ಪವಾಬಗೆಯಿಂದೆ ॥

ಜೀವನಿಗೆ ಭವ ಬಂಧಕಾರಕಪಾಶ (ಹಗ್ಗ) ದಂತಿರುವ ಪಂಚಕ್ಲೇಶಗಳು ಆತನ ಜೀವನುದ್ದಕ್ಕೂ ಅಹಂ ಬಗೆ (ಭ್ರಾಂತಿ) ಯಿಂದ ಇರುವವು.

ಜೀವಂಗೆ ಬರ್ಪನಾನಾ ವಿಧ ದುಃಖಕ್ಕೆ।
ತಾವಾದಿಯಾದವೈದು ಕ್ಲೇಶವು॥
ಭಾವದ ಬಗೆಯಿಂದೆ ತೋರ್ಪವು ಮೈತ್ರೇಯಿ।
ದೇವಿ ಕೇಳವನಿನಗೊರೆವೆನು ॥ 1 ॥

ಮೈತ್ರೇಯಿ ದೇವಿ ಕೇಳು. ಜೀವನಿಗೆ (ತನ್ನ ಅಹಂಭ್ರಮೆ ಮತ್ತು ಅಜ್ಞ ಭ್ರಮೆಯಿಂದ) ಒದಗುವ ನಾನಾಪ್ರಕಾರದ ದುಃಖ ದುಮ್ಮಾನಗಳಿಗೆ ಮೂಲ ಕಾರಣವಾದ ಐದು ಕ್ಲೇಶಗಳು ಆತನ ಅಹಂಭಾವದ ಕಲ್ಪನೆಯಿಂದಲೆ ತೋರುವವು. ಅವುಗಳನ್ನು ನಿನಗೆ ಹೇಳುವೆನು.

ಒಂದವಿದ್ಯಾ ಕ್ಲೇಶವೊಂದಸ್ಮಿತ ಕ್ಲೇಶ।
ವೊಂದೊಂದು ರಾಗವಾ ದ್ವೇಷವು॥
ಒಂದು ಕೇಳಭಿನಿವೇಶ ಕ್ಲೇಶವೈದಿವ।
ರಂದವನರುಪುವೆನೆಲೆ ನೀರೆ ॥ 2 ॥

ಐದು ಕ್ಲೇಶಗಳು ಯಾವವೆಂದರೆ :– (1) ಅವಿದ್ಯೆ (2) ಅಸ್ಮಿತೆ (3) ರಾಗ (4) ದ್ವೇಷ ಮತ್ತು(5) ಅಭಿನಿವೇಶ. ಎಲೆಚಲುವೆ, ಈ ಐದು ಕ್ಲೇಶಗಳ ಸ್ವಭಾವನ್ನು ನಿನಗೆ ತಿಳಿಸುವೆನು.

ವನಿತೆಯನಾತ್ಮವನಿತ್ಯವಶುಚಿ ದುಃಖ।
ವೆನಿಸುವೀ ದೇಹಾದಿಯೊಳು ಮತ್ತೆ॥
ಜನಿಸಲಾತ್ಮತೆ ನಿತ್ಯ ಶುಚಿ ಸುಖವೆಂಬ ಭಾ।
ವನೆ ತಾನವಿದ್ಯೆಯೆಂದೆನಿಪುದು ॥ 3 ॥

ವನಿತೆ, ಅನಾತ್ಮ ಅನಿತ್ಯ ಅಶುಚಿ ಮತ್ತು ದುಃಖ ರೂಪೆನಿಸುವ ದೇಹ, ಇಂದ್ರಿಯ, ಮನಾದಿ ವಿಷಯಗಳಲ್ಲಿ ಕ್ರಮವಾಗಿ ಆತ್ಮತೆ ನಿತ್ಯ ಶುಚಿ ಮತ್ತು ಸುಖರೂಪ ಎಂಬ (ವಿಪರೀತ) ಭಾವನೆ ಹುಟ್ಟಲು ಇದಕ್ಕೆ ಅವಿದ್ಯೆ (ಕ್ಲೇಶ) ಎಂದು ಕರೆವರು.

ತನುವಿನೊಳಗೆ ದರುಶನಶಕ್ತಿಯೇಕತ್ವ।
ವೆನಿಸಿ ತಾನಖಿಳಹಂಭಾವದ॥
ಜನನಕ್ಕೆ ಬೀಜವಾಗಿರಲಂತದಸ್ಮಿತೆ।
ಯೆನಿಪುದೆಂದರಿವುದಂಬುಜವಕ್ತ್ರೆ॥ 4 ॥

ದೇಹದಲ್ಲಿ ದೃಗ್‌ರೂಪ ಚಿನ್ಮಯವಾದ ಆತ್ಮತತ್ತ್ವವಿದೆ. ಇದು ಒಂದು ದರ್ಶನ, ಇನ್ನೊಂದು ಶಕ್ತಿ ಎಂಬ ಜಡವಾದ ಅನಾತ್ಮತತ್ತ್ವವಿದೆ. ಇವೆರಡು ಬೆಳಕು ಕತ್ತಲೆಗಳಂತೆ ಪರಸ್ಪರ ವಿಲಕ್ಷಣವಾಗಿದ್ದರೂ ಇವುಗಳು ಒಂದೆಂಬ (ಏಕರಸ) ಅಜ್ಞಾನವೆ ಅಸ್ಮಿತೆ ಎನಿಸುವದು. ಕಮಲದಂತೆ ಕಣ್ಣುಳ್ಳ ಮೈತ್ರೇಯಿ, ಇದುವೆ ಅಖಿಳ ಅಹಂಭಾವದ ಉತ್ಪತ್ತಿಗೆ ಬೀಜವಾಗಿದೆ, ಎಂದು ತಿಳಿ.

ಸುಖದ ಬೆಂಬಳಿಗೊಂಡು ಸುಖವಲ್ಲದಿರ್ದೊಡಾ।
ಸುಖವ ನಿಶ್ಚಯಿಸಿ ವಿಷಯದೊಳು ॥
ಸುಖಮಯವೆಂದು ತೊಡರಿಬಿಡದಿರ್ಪ ತ।
ತ್ಸುಖಬುದ್ಧಿ ರಾಗವೆಂದೆನಿಪುದು ॥ 5 ॥

ಜೀವನ ಪ್ರಥಮಾನುಭೂತಿ ಸುಖವೇ ಇದೆ. ಆದರೆ ಅದನ್ನು ಅರೆ ಮರೆತು. ಹೊರಗೆ ಸುಖವನ್ನು ಹಿಂಬಾಲಿಸುತ್ತ ವಿಷಯಗಳಲ್ಲಿ ನಿಜಸುಖವಿಲ್ಲದಿದ್ದರೂ ಅವು ಸುಖಮಯವೆಂದು (ಅಜ್ಞತೆಯಿಂದ) ತಾನೆ ನಿಶ್ಚಯಿಸಿ, ಜೀವನು ಅವುಗಳ ಸಂಗ ಬಿಡದೆ ವಿಷಯಾಸಕ್ತನಾಗಿರುವನು. ವಿಷಯಗಳಲ್ಲಿ ಸುಖವಿದೆ, ಎಂಬ ಬುದ್ಧಿಯೆ ರಾಗವೆನಿಸುವದು. ''ಸುಖಾನುಶಯೀರಾಗಃ'' (ಮೇಲಿನ ಸೂತ್ರ).

[ ಟಿಪ್ಪಣಿ:– ''ಅನಿತ್ಯಾಶುಚಿ ದುಃಖಾನಾತ್ಮ ನಿತ್ಯ ಶುಚಿ ಸುಖಾತ್ಮ ಖ್ಯಾತಿರವಿದ್ಯಾ । ಪತಂಜಲಿಯೋಗ ಸೂತ್ರ, ಸಾಧನಪಾದ. ]

[ ಟಿಪ್ಪಣಿ :– ಮೇಲಿನಂತೆ ಪತಂಜಲಿ ಯೋಗ ಸೂತ್ರ ದೃಗ್. ದರ್ಶನ ಶಕ್ತ್ಯೋರೇಕಾತ್ಮತೇವಾಸ್ಮಿತಾ ।]

ರಾಗವಿಂತಿದು ಸರ್ವಭೋಗಕ್ಕೆ ಬೀಜವಾ।
ಭೋಗವೆ ಕಾಮಾದಿ ರಿಪುಗಳ॥
ಆಗಿಂಗೆ ಮೂಲವಾ ರಿಪುಗಳಿಂದವೆ ದುಃಖ।
ವಾಗಿ ಸಂಸೃತಿಗೆ ರಾಗವೆ ಮುಖ್ಯ ॥ 6 ॥

ಇಂತು ರಾಗವೆ ಸರ್ವ ಭೋಗಗಳಿಗೆ ಬೀಜವಾಗಿದೆ. ಆ ಭೋಗಾಸಕ್ತಿಯೆ ಕಾಮ, ಕ್ರೋಧ ಮೋಹಗಳೆಂಬ ವೈರಿಗಳ ಆಗಮನಕ್ಕೆ (ದೇಹದೊಳಗೆ) ಮೂಲವಾಗಿದೆ. ಈ ಆರು ವೈರಿಗಳಿಂದಲೆ ತನಗೆ ದುಃಖ. ಇಂತು ಸಂಸಾರದ ಭ್ರಮೆಗೆ ರಾಗವೆ ಮುಖ್ಯ ಕಾರಣವು.

ದುಃಖಕ್ಕೆ ಬೇಸತ್ತು ದುಃಖಮಂ ಕಳೆಯಲಾ।
ದುಃಖದಿಂದಾದ ವಿಷಯ ಸುಖ॥
ದುಃಖವೆಂದಿರದದು ಕೆಡಲೊಂದು ನೆವದಿಂದೆ।
ದುಃಖಿಸಲಾ ದ್ವೇಷವೆನಿಪುದು ॥ 7 ॥

ಇಂದ್ರಿಯ ವಿಷಯ ಸಂಸ್ಪರ್ಶಜ ಭೋಗವು ಅತಿಯಾದರೆ ಅದು ದುಃಖಕರವೆನಿಸಿ ತನಗೆ ಭೋಗದಲ್ಲಿ ದ್ವೇಷ ಬುದ್ಧಿ ಜನಿಸುವದು. (ವಿರಾಗ ಹುಟ್ಟುವದಿಲ್ಲ.) ತನಗಾದದುಃಖ ಕಳೆಯಲಿಕ್ಕೆ 'ದುಃಖದಿಂದಾದ ವಿಷಯ ಸುಖವನ್ನೆ ಬಯಸಿ ಬೇರೊಂದು ವಿಷಯ ಹುಡುಕುವನು. ಅದು ತನಗೆ ಸಿಗದೆ ಬೇರೊಬ್ಬರಿಗೆ ದೊರೆತರೆ, ಇವನಲ್ಲಿ ಕೋಪ ದ್ವೇಷ ಹುಟ್ಟುವದು. ಅಥವಾ ತನ್ನ ವಿಷಯಸುಖವು ಯಾವದೊಂದು ನೆವದಿಂದ ಕೆಡಲು, ಆಗಲೂ ಕರ್ಮಾನುಸಾರ ಪ್ರಾಪ್ತವಾದ ವಿಷಯಗಳನ್ನು ದ್ವೇಷಿಸುವನು.

''ದುಃಖಾನುಶಯೀ ದ್ವೇಷಃ। (ಅದೇ ಪತಂಜಲಿ ಸೂತ್ರ) ಮನಸ್ಸು ದುಃಖದಲ್ಲಿ ಮುಳುಗಲು ದ್ವೇಷ ಬುದ್ಧಿ ಜನಿಸುವದು.

ಎನಿತರಿವಿರಲೇನು ತನಗೆ ದುರಾಗ್ರಹ।
ವನುದಿನಮೊಂದರೊಳ್ಬಿಡದಿರ್ಪ॥
ತನವದು ತಾನೆ ನೋಡಭಿನಿವೇಶ ಕ್ಲೇಶ।
ವೆನಿಪುದೆಂದಕಲಂಕ ಶಶಿಮುಖಿ ॥ 8 ॥

ಎಷ್ಟು ಓದಿದರೇನು, ಬರೆದರೇನು ? ಎಷ್ಟು ಅರಿವು ಇದ್ದರೇನು ? ತನಗೆ ಒಂದು ವಿಷಯ ಅಥವಾ ಒಬ್ಬ ವ್ಯಕ್ತಿಯಲ್ಲಿ ಅನುದಿನವು ಮೋಹವಿರಲು, ಅದು ತಾನೆ ಅಭಿನಿವೇಶ ಕ್ಲೇಶವೆನಿಸುವದು. ಅಕಲಂಕ ಚಂದ್ರನಂತೆ ಮುಖವುಳ್ಳ ಮೈತ್ರೇಯಿ, ಮಣ್ಣಿನ ಕಾಯ ಮಣ್ಣಿಗೆ ಹೋಗುವ ಸಮಯ ಸನ್ನಿಹಿತವಾದರೂ ತನ್ನ ದೇಹದ ಮೋಹ ಮತ್ತು ತಾನು ಗಳಿಸಿದ ಜಡವಾದ ಅಲ್ಪವಾದ ಪದಾರ್ಥಗಳ ಮೇಲಿನ ರಾಗರಸವು ಬತ್ತದು. ಇದೇ ಅಭಿನಿವೇಶ.

"ಸ್ವರಸವಾಹಿ ವಿದುಷೋऽಪಿ ತಥಾ ತನ್ವನುಬಂಧೋ ರೂಢೋऽಭಿನಿವೇಶಃ (ಅದೇ ಪತಂಜಲಿ ಸೂತ್ರ)

ಇವು ಪಂಚಕ್ಲೇಶವೆಂದೆನಿಪವಾ ಜೀವಂಗೆ।
ಭವದುಃಖ ಬಂಧನಮಿವರಿಂದ ॥
ತವೆ ತೋರ್ಪುದವನುಳಿದಾಕ್ಷಣದೊಳು ಮುಕ್ತಿ।
ಸಮನಿಪುದೆಂದು ನಂಬೆಲೆ ನೀರೆ ॥ 9 ॥

ಅಹಂಭಾವಪರನಾದ ಜೀವನಿಗೆ ಇವೇ ಪಂಚಕ್ಲೇಶಗಳು ತೋರಿ ಭವದುಃಖ ಮತ್ತು ಬಂಧನಕ್ಕೆ ಕಾರಣವಾಗಿವೆ. ಇವುಗಳನ್ನು (ಗುರುಬೋಧೆಯಿಂದ) ತ್ಯಜಿಸಲು ಲಾವಣ್ಯವತಿ (ನೀರೆ), ಮುಕ್ತಿಸಮನಿಪುದು, ಎಂದು ಚೆನ್ನಾಗಿ ನಂಬು.

– ಇತಿ ಜೀವಂಗೆ ಕ್ಲೇಶ ಪಂಚಕ ನಿರೂಪಣೆ –

## 21ನೇ ಸೂತ್ರ

ತನುವಿದಾನೆಂಬ ಬಗೆಯಿಂದೆ ಜೀವಂಗೆ ।
ಜನಿಪವಾ ತಾಪತ್ರಯಂಗಳು ॥

ದೇಹವಿದು ನಾನೆಂಬ ಭ್ರಮೆಯಿಂದ (ಇದೇ ಅಸ್ಮಿತೆ) ಜೀವನಿಗೆ ಮೂರು ತಾಪಗಳು ಉದಯಿಸುವವು.

ಆಧ್ಯಾತ್ಮಿಕವು ಮತ್ತಮಾಧಿಭೌತಿಕ ಬಳಿ।
ಕಾಧಿದಿದೈವಿಕವೆಂಬ ಪೆಸರಿನ ॥
ಬಾಧೆ ತಾಪತ್ರಯವಹುದೆಂದು ತಿಳಿ ಪಲ್ಲ।
ವಾಧರೆ ಮೈತ್ರೇಯಿ ಮುದದಿಂದ ॥ 1 ॥

ಚಿಗುರೆಲೆಯಂತೆ ತುಟಿಗಳುಳ್ಳ ಮೈತ್ರೇಯಿ (ದೇಹಿಗಳಿಗೆ) ಆಧ್ಯಾತ್ಮಿಕ ಆಧಿಭೌತಿಕ ಮತ್ತು ಆಧಿದೈವಿಕ ಎಂಬ ಹೆಸರಿನ ಬಾಧೆಗೊಡುವ ಮೂರು ತಾಪಗಳಿವೆ, ಎಂದು ಪ್ರೀತಿಯಿಂದ ತಿಳಿ.

ತನುವಿನ ರುಜೆ ಮನಸಿನ ವೇದನೆಗಳಾಗೆ।
ತನಗಿದಾಧ್ಯಾತ್ಮಿಕವೆನಿಸುವ ॥
ಘನತಾಪವದು ತನು ತಾನೆಂಬ ಭ್ರಮೆಯಿಂದೆ।
ಜನಿಸುತಿರ್ಪುದು ಜೀವನೊಳು ನೋಡು ॥ 2 ॥

ತನುವಿನ ರೋಗಗಳು, ಮನಸ್ಸಿನ ವೇದನೆಗಳು ಜೀವನಿಗಾಗಲು ಅದು ಆಧ್ಯಾತ್ಮಿಕ ತಾಪವೆನಿಸುವದು. ತನು ತಾನೆಂಬ ಭ್ರಮೆಯು (ಕಲ್ಪಿತಾತ್ಮ) ಜೀವನಲ್ಲಿ ಹೆಚ್ಚಿನ ತಾಪವನ್ನು ಉಂಟುಮಾಡುವದು.

ಸಕಲ ಭೂತಂಗಳಿಂದುದಿಸಿ। ತೋರುವ ದುಃಖ।
ನಿಕರಮಾಧಿ ಭೌತಿಕವಕ್ಕು ॥
ಅಕಲಂಕ ಮತಿ ಕೇಳು ಸೀತವಾತಾತಪ।
ಪ್ರಕರದಿಂದಾದ ನೋವದು ತಾನು ॥ 3 ॥

ಸಕಲ ಭೂತಗಳಿಂದ ಜನಿಸಿ ತೊರುವ ದುಃಖಗಳ ರಾಸಿಗೆ ಆಧಿ ಭೌತಿಕವೆನ್ನುವರು. ಶುದ್ಧ ಮತಿವಂತೆ ಮೈತ್ರೇಯಿ, ಕೇಳು, ಶೀತ, ವಾತ, (ಉರಿ) ಬಿಸಿಲು ಈ ಸಮೂಹದಿಂದಾದ ನೋವು ಭೌತಿಕವಾಗಿದೆ.

ನರಕ ನಾಕಾದಿಗಳಿಂದಮರರುತ್ಪಾತದಿಂ।
ದೊರಕೊಳ್ವ ದುಃಖವಂತದು ತಾನು ॥
ಉರುತರವೆನಿಪಾಧಿದೈವಿಕ ತಾಪವೆಂ।
ದರುಣಾಬ್ಜಗಂಧಿ ನೀನರಿವುದು ॥ 4 ॥

ಸ್ವರ್ಗ ನರಕಗಳಿಂದ, ದೇವತೆಗಳ ಪ್ರಕೋಪದಿಂದ ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ, ಸಿಡಿಲು ಮೊದಲಾದ ಅದ್ಭುತ, ಅಪಾಯಕರ ಘಟನೆಗಳಿಂದ ಸಂಭವಿಸುವ ದುಃಖಗಳು ಮಿಗಿಲಾದ ಆಧಿದೈವಿಕ ತಾಪವೆಂದು ಕೆಂಪು ಕಮಲದಂತೆ ಸುವಾಸನೆ ಬೀರುವ ಮೈತ್ರೇಯಿ, ನೀನು ತಿಳಿಯುವದು.

ತನುರಜೆಯಾಗರವತಿ ದುಃಖಸಾಗರ।
ವನುತಾಪ ಕ್ಲೇಶಾದಿಗಳ ಗೊತ್ತು ॥
ತನು ಮೂಲವದರಿಂದಖಿಳದುಃಖವೆಲ್ಲಕ್ಕೆ।
ತನುಭಾವವಳಿಯೆ ದುಃಖದ ಕೇಡು ॥ 5 ॥

'ತನುವಿದು ರುಜೆಯ ಆಗರ. ಬೇನೆಗಳ ತೋಟವಿದ್ದಂತೆ. (ತೋಟದಲ್ಲಿ ಒಂದಿಲ್ಲೊಂದು ಹಸಿರು ಗಿಡ ಬಳ್ಳಿಗಳಿರುವಂತೆ, ದೇಹವು ರೋಗಗ್ರಸ್ತವಾಗಿದೆ.) ಶರೀರವು ಅತಿಯಾದ ದುಃಖದ ಸಾಗರವಾಗಿದೆ. ಮೇಲಿಂದ ಮೇಲೆ ಒದಗುವ ತಾಪ ಮತ್ತು ಕ್ಲೇಶಗಳ (ಹಿಂದಿನ ಸೂತ್ರ–ಕ್ಲೇಶ ಪಂಚಕ ನೋಡಿರಿ) ಬೀಜವೆ ಈ ಭೌತಿಕ ದೇಹವಿದೆ, ಅಖಿಳ ದುಃಖಕ್ಕೆ ಇದೇ ಗುರಿಯಾಗಿದೆ. ಆದ್ದರಿಂದ ''ತನು ತಾನೆಂಬ ಭಾವ (ಭ್ರಾಂತಿ) ಅಳಿಯಲು (ನಾಶವಾದರೆ), ದುಃಖದ ಕೇಡು'' ಆಗುವದು.

ತನುವಿದುಳ್ಳನ್ನವರನಿಮಿಷರ್ಗಾದೊಡ।
ಮನಿಮಿತ್ತವಾ ಕ್ಲೇಶ ಭಯ ತಾಪಂ ॥
ಜನಿಪುದಾಗಿಯೆ ತನುವತಿ ಕಷ್ಟವರಿದಂಗೆ।
ತನುಭಾವವಳಿದು ನಿಂದೊಡೆ ಸುಖ ॥ 6 ॥

ದೇಹವಿರುವವರೆಗೆ ದೇವತೆಗಳಿಗೂ ಸಹ ಅನಿಮಿತ್ತವಾಗಿ, ಕ್ಲೇಶ ಭಯ ತಾಪಗಳು ಸಂಭವಿಸುವವು. ಅರಿತವರಿಗೆ ತನುವಿದು ಅತಿ ಕಷ್ಟಕರವಾಗಿದೆ. (ಆದ್ದರಿಂದ) ತನು ತಾನೆಂಬ ಭಾವ (ಭ್ರಾಂತಿ) ನಾಶವಾಗಿ ನಿಂದೊಡೆ ಸುಖವೇ ಇರುವದು.

ಭ್ರಮಿಸಿ ದೇಹದೊಳಹಂ ಮಮತೆ ಜನಿಸಲದು।
ಸುಮನಸರ್ಗೆಯು ದುಃಖಕರಮಾಗಿ।
ಸುಮತಿ ಕೇಳೀ ತನು ತಾನವಿಚಾರಿತ।
ರಮಣೀಯವಹುದನುಭವಸಿದ್ಧ ॥ 7 ॥

ದೇಹದೊಳು ಅಸ್ಮಿತೆ ಕ್ಲೇಶದಿಂದ ದೇಹಿಗೆ ಅಹಂಕಾರ ಮತ್ತು ಮಮಕಾರಗಳು ಜನಿಸುವವು. ದೇವತೆಗಳಿಗೂ ಸಹ ಈ ಕ್ಲೇಶವು ಪಾಶವಾಗಿದೆ, ದುಃಖಕರವಾಗಿದೆ. (ಆದುದರಿಂದ) ಸುಮತಿ ಮೈತ್ರೇಯಿ, ಕೇಳು. ಅವಿಚಾರಿಗಳಿಗೆ ಮಾತ್ರ ದೇಹವಿದು ರಮಣೀಯವಾಗಿದೆ. ಇದು ಲೋಕಾನುಭವ.

ತನುಧರ್ಮವನು ಮೂಢಜನರ್ಮೈದೆ ತನ್ನದೆಂ।
ದೆನು ತಿರ್ಪುದೈಸೆ ತಾನಲ್ಲದ॥
ಇನಿತು ಕೀಟಾದಿ ವಿಷಯಧರ್ಮವೆಂದೆಂದು।
ತನಗಾದುದುಂಟೆ ಭಾವಿಸಿ ನೋಡು ॥ 8 ॥

ಮೂಢ ಜನರು ತನು ಧರ್ಮವು ಪರಧರ್ಮವಾಗಿದ್ದರೂ ಸ್ವಧರ್ಮವೆಂದೇ ಮೋಹಿಸುವರು. ಇದು ಅಹುದಾದರೆ, ವಿಚಾರಿಸಿ ನೋಡು; ತಾನಲ್ಲದ ಎಷ್ಟೋ ಕೀಟಗಳು, ಕಾಗೆ, ಹಂದಿ, ನಾಯಿಗಳು ಅನುಭವಿಸುವ ಹೀನ ವಿಷಯಗಳ ಧರ್ಮಗಳು (ಪರಧರ್ಮ) ತನಗೆ ಎಂದಾದರೂ ಸಂಭವಿಸುವದು ಸಾಧ್ಯವೇ ? ಪರಧರ್ಮವೆಂದೂ ಸ್ವಧರ್ಮ ವಾಗದು, ಆದ್ದರಿಂದ ಪರಧರ್ಮ (ಅಂದರೆ ತನುಧರ್ಮ) ಭಯಾನಕವೆಂದೇ ಪರಿಭಾವಿಸು.

ಅದರಿಂದೆ ಪ್ರಕೃತಿ ಧರ್ಮದೊಳೊಂದು ತನಗಿಲ್ಲ।
ವಿದು ಸಿದ್ಧವಪ್ಪುದೇಕೆಂದೊಡೆ॥
ಪುದಿದು ತೋರುವ ದೇಹವಿದು ತಾನು ತನ್ನದ।
ಲ್ಲದ ಕತದಿಂದೆ ನೋಡಿನಿಯಳೆ ॥ 9 ॥

(ಇದೇ ತತ್ತ್ವ ಮುಂದುವರಿಸುವರು) ಲಾವಣ್ಯವತಿ ಮೈತ್ರೇಯಿ, ಪುನಃ ವಿಚಾರಿಸು. ಪ್ರಕೃತಿ ಧರ್ಮಗಳು ವಿಕಾರವುಳ್ಳವು. ಇವುಗಳಲ್ಲಿ (ಈ ಪರಧರ್ಮಗಳಲ್ಲಿ) ಒಂದು ವಿಕಾರವೂ ತನಗಿಲ್ಲ, (ಇವು ಸ್ವಧರ್ಮವಲ್ಲ ಎಂಬ ಭಾವ). ಇದು ಅನುಭವಸಿದ್ಧವು. ಏಕೆಂದರೆ ದೇಹವಿದು ಜನಿಸಿ ತೋರುವದು (ಮತ್ತು ಹುಟ್ಟಿದ ದೇಹ ಸಾಯುವದು.) ಆದ್ದರಿಂದ ದೇಹವಿದು ತಾನು ಅಲ್ಲ ಮತ್ತು ತನ್ನದು ಅಲ್ಲ (ತಾನು ಅಲ್ಲದುದನ್ನು ತಾನೆಂದು ಭಾವಿಸುವದು ಕಪಟವಲ್ಲವೇ ?) ವಿವೇಕಿಸಿ ನೋಡು.

ಎನೆ ಕೇಳ್ದು ವನಿತೆ ತನ್ನಿನಯಂಗೆ ಪೊಡಮಟ್ಟು।
ತನುಧರ್ಮಾದಿಗಳಿಲ್ಲದಂದವ॥
ತನಗರಿವಂತಲಸದೆ ಪೇಳು ಮುನಿಲಲಾ।
ಮನೆಯೆಂದು ಬೆಸಗೊಂಡಳೊಲವಿಂದ ॥ 10 ॥

ಈ ಪ್ರಕಾರ ಕೇಳಿದ ಬಳಿಕ ವನಿತೆ ಮೈತ್ರೇಯಿ ತನ್ನ ವಲ್ಲಭಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ, ''ಮುನಿ ಕುಲಕ್ಕೆ ಭಾನುವಿನಂತೆ ಬೆಳಗುವ ಪತಿದೇವಾ, ಶರೀರದ ಯಾವ ಧರ್ಮಗಳು ಯಾರಿಗೂ ಇರಲರಿಯವು, ಎಂಬ ಸಿದ್ಧಾಂತವನ್ನು ನನಗೆ ತಿಳಿಯುವಂತೆ, ತಾವು ಬೇಸರ ಪಡದೆ ಪೇಳಿರಿ'' ಎಂದು (ಮೈತ್ರೇಯಿ) ಪ್ರೀತಿಯಿಂದ ಬಿನ್ನವಿಸಿಕೊಂಡಳು.

ಜಾಗರಣಾದಿ ತ್ರಿವಿಧದೊಡವೆರೆದೆಂಟು।
ಭಾಗೆಯನುಳ್ಳ ಪ್ರವರ್ತಕ ॥
ಯೋಗದಿಂದಿಂತು ವರ್ತಿಪ ಜೀವನಿಗೆ ಪೇಳ್ದೆ।
ನೀಗಳಂಗನೆ ನಿವರ್ತಕವನು ॥ 11 ॥

(ಕರ್ಮಾಷ್ಟಕದಲ್ಲಿ) ತನ್ನಿಂದ ಮೂರವಸ್ಥೆಗಳ ಭ್ರಮೆ, ತನುತ್ರಯ ಭ್ರಮೆ (ಕಲ್ಪಿತ) ಜೀವನಿಗೆ ಇರುವದನ್ನು ಅಂದರೆ ಪ್ರವರ್ತಕ ಯೋಗದಿಂದ ವರ್ತಿಸುವ ಜೀವನ ಕಥಾಸಾರವನ್ನು, ಅಂಗನೆ– ಪ್ರಿಯಳೆ, ಈವರೆಗೆ ನಿನಗೆ ಹೇಳಿದೆ. ಇನ್ನು ಮುಂದೆ ಜೀವನಿಗೆ ನಿವರ್ತಕ ಕರ್ಮ ಹೇಳುವೆನು'', ಎಂದು ಉರುಪುಣ್ಯಧಾಮನು, ಉನ್ನತ ಸುಖನಿಧಿಯಾದ ಶ್ರೀಯಾಜ್ಞವಲ್ಕ್ಯ ಮುನಿಗಳು ಕರುಣಿಸಿದರು.

ಇದು ನಿಜಗುಣಯೋಗಿ ಮುದದಿಂದೆ ತಿಳಿಯಪೇ।
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ।
ಒದವಿದ ಸಂವಾದದೊಳಗೊಂದನೆಯ ಸಂಧಿ।
ಸದಮಳ ಪರಮಾನುಭವ ಬಂಧಿ ॥ 12 ॥

ಇದು ನಿಜಗುಣಯೋಗಿಗಳು ಸಂತೋಷದಿಂದ ತಿಳಿಸಿ ಹೇಳಿದ ಯಾಜ್ಞವಲ್ಕ್ಯ–ಮೈತ್ರೇಯಿಯರಲ್ಲಿ ಜನಿತವಾದ ಸಂವಾದವಾಗಿದೆ. ಇದರಲ್ಲೀಗ (ಪ್ರವರ್ತಕವೆಂಬ) ಒಂದನೆಯ ಸಂಧಿ ಸಮಾಪ್ತವು. ಸದಮಳವಾದ ಪರಮಾನುಭವವು ಮುಮುಕ್ಷುಗಳ ಶುದ್ಧ ಅಂತಃಕರಣದಲ್ಲಿ ಕರಿಗೊಳ್ಳುವಂತೆ ಈ ಸಂಧಿಯು ಬಂಧಿಸುವದು.

– ಇತಿ ತಾಪತ್ರಯಾದಿ ಪ್ರವರ್ತಕ ಕರ್ಮ ನಿರೂಪಣೆ –

ಸಂಧಿ ಒಂದು ಸೂತ್ರ 21 ಕ್ಕೆ ಸಂಪೂರ್ಣ.

ಮಂಗಳಮಸ್ತು

****

ಶ್ರೀಗುರು ಶಂಭುಲಿಂಗಾಯ ನಮಃ

ಪರಮಾನುಭವ ಬೋಧೆ

## 2ನೇ ಸಂಧಿ

# ನಿವರ್ತಕ ಕರ್ಮ

### 1ನೇ ಸೂತ್ರ

ಜಡಪಂಚಭೂತಧರ್ಮಗಳಿಲ್ಲವಾತ್ಮಂಗೆ ।
ಮಡದಿ ನೋಡಜಡನಪ್ಪುದರಿಂದ ॥

ಮಡದಿ ಮೈತ್ರೇಯಿ, ಆತ್ಮನು ಅಜಡನಾಗಿರುವದರಿಂದ ಅವನಿಗೆ ಜಡವಾದ ಆಕಾಶಾದಿ ಪಂಚಮಹಾಭೂತಗಳ ಗುಣ ಧರ್ಮಗಳು ಇರುವದಿಲ್ಲವೆಂದು ನೀನು ತಿಳಿದುಕೊ.

ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ ।
ಧಾಮಂಗೆ ಸತ್ಯಚಿದ್ರೂಪಂಗೆ ॥
ಕಾಮಿತಜನಕಲ್ಪಭೂಜಂಗೆ ಶಂಭುವಿಂ ।
ಗಾಮೋದದಿಂದೆ ವಂದಿಸುವೆನು ॥ 1 ॥

ಶ್ರೀ ಮಹಾದೇವನಿಗೆ, ಚಂದ್ರನನ್ನು ಧರಿಸಿದವನಿಗೆ, ಸಂಪೂರ್ಣ ಸುಖಮಯನಿಗೆ, ಸತ್‌ಚಿತ್ ರೂಪನಿಗೆ, ಬೇಡಿದವರಿಗೆ ಬೇಡಿದುದನ್ನು ಕೊಡುವ ಕಲ್ಪವೃಕ್ಷನಾದವನಿಗೆ, ಸುಖರೂಪನಾದ ಶಂಭುವಿಗೆ ನಾನು ಪ್ರೀತ್ಯಾದರದಿಂದ ವಂದಿಸುವೆನು.

ಶ್ರೀ ಯಾಜ್ಞವಲ್ಕ್ಯ ಮಹಾಯೋಗೀಶನು ತನ್ನ ।
ಜಾಯೆ ಮೈತ್ರೇಯಿಗೆ ಮುದದಿಂದ ॥
ಕಾಯಾದಿ ಧರ್ಮವಾತ್ಮನಿಗಿಲ್ಲವೆಂಬುದ ।
ನೊಯ್ಯಾರದಿಂದರುಪಿದನಿಂತು ॥ 2 ॥

ದೇಹ ಮೊದಲ್ಗೊಂಡು ಯಾವ ಇಂದ್ರಿಯಗಳ ಧರ್ಮಗಳೂ ಆತ್ಮನಿಗೆ ಇರುವದಿಲ್ಲವೆಂದು, ಈ ಮುಂದೆ ಹೇಳಿದಂತೆ ಅತಿ ಸುಂದರವಾಗಿ ಶ್ರೀ ಯಾಜ್ಞವಲ್ಕ್ಯ ಮಹಾಯೋಗೀಶನು ತನ್ನ ಧರ್ಮಪತ್ನಿ ಮೈತ್ರೇಯಿಗೆ ತಿಳುಹಿಸಿದನು.

ನರ ವೆಲು ಮಾಂಸ ತೊವಲು ರೋಮವೆನಿಸುವ ।
ಧರೆಯ ಕಠಿಣಧರ್ಮವೈದಿವು ॥
ನಿರುತವಾತ್ಮನಿಗಿಲ್ಲವೆಂದಬಲೆ ಸು ।
ಸ್ಥಿರಮತಿಯೊಳು ವಿಚಾರಿಸು ನೀನು ॥ 3 ॥

ಅಬಲೆಯಾದ ಮೈತ್ರೇಯಿ, ನರ, ಎಲುವು, ಮಾಂಸ, ತೊಗಲು ಮತ್ತು ಕೂದಲು ಇವು ಐದು ಕಠಿಣ ಧರ್ಮ ಹೊಂದಿದವುಗಳಾಗಿ ಭೂಮಿಯ ಅಂಶಗಳಾಗಿರುತ್ತವೆ. ಆದರೆ ಇವು ಆತ್ಮನಿಗೆ ಎಂದೂ ಇರುವದಿಲ್ಲವೆಂದು, ಒಳ್ಳೆಯ ಸ್ಥಿರ ಬುದ್ಧಿಯಿಂದ ವಿಚಾರಿಸಿ ನೀನು ತಿಳಿದುಕೊಂಡಿರಬೇಕು.

ಸಲೆ ಮೂತ್ರ ರೇತೋರಕ್ತ ಕಫವೆಂಬ।
ಜಲದ ದ್ರವಾಂಶದ ಗುಣವೈದು ॥
ಲಲಿತಾಂಗಿ ನಿರ್ಮಲಾತ್ಮನಿಗಿಲ್ಲವೆಂದು ನೀ।
ನಲಘುಮತಿಯೊಳವಧರಿಪುದು ॥ 4 ॥

ಮೂತ್ರ, ಪಿತ್ತ, ಬೆವರು, ರಕ್ತ ಮತ್ತು ಕಫ ಈ ಐದು ದ್ರವಿಸುವ ಗುಣವುಳ್ಳ ನೀರಿನ ಅಂಶಗಳು ಆತ್ಮನಿಗೆ ಇರುವದಿಲ್ಲವೆಂದು, ಕೋಮಲವಾದ ಅಂಗಾಂಗಗಳುಳ್ಳ ಮೈತ್ರೆಯೀ ನಿನ್ನ ವಿಶಾಲ ಬುದ್ಧಿಯಿಂದ ನಿಶ್ಚಯಿಸಬೇಕು.

ವನಿತಾಸಂಗತಿ ಕ್ಷುಧೆ ತೃಷ್ಣೆ ನಿದ್ರಾಲಸ್ಯ।
ವೆನಿಸುವವೈದುಷ್ಣದಂಶದ ॥
ಅನಲನ ಗುಣುಮಿವಾತ್ಮನಿಗಿಲ್ಲವೆಂದು ಮಾ।
ನಿನಿರನ್ನೆ ತಿಳಿ ಮನದೊಲವಿಂದೆ ॥ 5 ॥

ಗೌರವಸ್ಥ ಹೆಣ್ಣುಮಕ್ಕಳಲ್ಲಿ ರತ್ನದಂತಿರುವ ಮೈತ್ರಾ ದೇವಿಯೇ, ಸ್ತ್ರೀಸಂಗ, ಹಸಿವೆ, ನೀರಡಿಕೆ, ನಿದ್ರೆ ಮತ್ತು ಆಲಸ್ಯ ಈ ಐದು ಅಂಶಗಳು ಉಷ್ಣ ಗುಣಧರ್ಮವುಳ್ಳ ಅಗ್ನಿಗೆ ಸಂಬಂಧಪಟ್ಟವುಗಳು, ಈ ಐದೂ ಗುಣಗಳು ಆತ್ಮನಿಗಿರುವದಿಲ್ಲವೆಂದು ನೀನು ಮನಸಾ ತಿಳಿದುಕೊ.

ಪರಿವ ಪಾರುವ ನಿರೋಧಿಸುವ ಸುಳಿವ ನಿಲ್ವ।
ಪರಿವಿಡಿದೈದಿಂತು ಚಲನಾಂಶ ॥
ಮರುತನ ಗುಣಮಿವಾತ್ಮನಿಗಿಲ್ಲೆಂದು ನಿ।
ರ್ಧರಿಸು ನೀನಿಂದುಸನ್ನಿಭವಕ್ತ್ರೆ ॥ 6 ॥

ಚಂದ್ರಮುಖಿಯೇ, ಹರಿಯುವ, ಹಾರುವ, ಅಡೆತಡೆ ಮಾಡುವ ಸುಳಿಯುವ ಮತ್ತು ನಿಲ್ಲುವ ಈ ಐದು ಚಲಿಸುವ ಗುಣಗಳು ವಾಯುವಿನ ಗುಣಧರ್ಮಗಳು. ಇವು ಆತ್ಮನಿಗೆ ಇಲ್ಲವೆಂದು ನೀನು ಈಗಲೇ ನಿರ್ಧರಿಸು.

ಕಾಮ ಕೋಪ ಲೋಭ ವ್ಯಾಮೋಹ ಭಯವೆಂಬ।
ನಾಮದಿ ಪರಿವಿಡಿದೊಪ್ಪುವ ॥
ವ್ಯೋಮದಮೂರ್ತದಂಶಿಕವೈದು ಗುಣಮಿವು।
ಕಾಮಿನಿ ತಿಳಿ ಚಿತ್ತಿಗಿಲ್ಲೆಂದು ॥ 7 ॥

ಕಾಮ, ಸಿಟ್ಟು, ದುರಾಸೆ, ಮೋಹ ಮತ್ತು ಹೆದರುವಿಕೆ ಈ ಹೆಸರಿನಿಂದ ಒಪ್ಪುವ ಐದು ಭಾವನಾತ್ಮಕ ಅಂಶಗಳು ಆಕಾಶದ ಗುಣಗಳು ಇವು ಅರಿವಿಗೆ ಇಲ್ಲವೆಂದು ಪ್ರಿಯೆ ಮೈತ್ರೇಯಿ ನೀನು ತಿಳಿ.

ಈ ಸೂತ್ರದಲ್ಲಿ ಆತ್ಮನಿಗೆ ಪಂಚಮಹಾಭೂತಗಳ ಗುಣಧರ್ಮಗಳನ್ನು ನಿರಾಕರಣೆ ಮಾಡಿದರು.

– ಇತಿ ನಿರೂಪಣೆ –

## 2ನೇ ಸೂತ್ರ

ವಾಯುಗುಣಂಗಳಾತ್ಮನಿಗಿಲ್ಲವೆಂದು ಮೈ ।
ತ್ರೇಯಿ ನಿರ್ಧರಿಸುನಿಶ್ಚಲವಾಗಿ ॥

ಮೈತ್ರೇಯಿ, ಆತ್ಮನು ಅಚಲನಾಗಿರುವದರಿಂದ ವಾಯುವಿನ ಗುಣಧರ್ಮಗಳು ಆತ್ಮನಿಗೆ ಇರುವದಿಲ್ಲವೆಂದು ನಿರ್ಣಯಿಸು.

ಅನಲಯೋಗದೊಳನ್ನವನು ಜೀರ್ಣಿಸುವ ದೇಹ।
ವನು ಚೇಷ್ಟಿಸುವ ಧರಿಸುವ ಧರ್ಮ ॥
ವನಿತೆ ಕೇಳ್ಪ್ರಾಣವಾಯುವಿನದಾತ್ಮನಿಗಿಲ್ಲ।
ವನುದಿನವಚಲನಪ್ಪುದರಿಂದ ॥ 1 ॥

ವನಿತೆ ಕೇಳು, ಅಗ್ನಿಯ ಸಹಾಯದಿಂದ ಉಂಡ ಅನ್ನವನ್ನು ಜೀರ್ಣಿಸುವದು, ದೇಹವನ್ನು ಚೇಷ್ಟಿಸುವದು ಮತ್ತು ಅದನ್ನು ಎತ್ತಿ ಹಿಡಿಯುವದು. ಪ್ರಾಣವಾಯುವಿನ ಧರ್ಮಗಳು. ಆತ್ಮನು ಯಾವಾಗಲೂ ಅಚಲನಾಗಿರುವದರಿಂದ ಈ ಧರ್ಮಗಳು ಆತ್ಮನಿಗಿಲ್ಲ.

ಕುಡಿವುಂಬ ಕೆಳಯಿಂಕೆ ನಡೆವ ವಿಣ್ಮೂತ್ರವ।
ಬಿಡುವ ನೋಯಿಸುವ ಧರ್ಮಂಗಳು ॥
ಮಡದಿಯಪಾನವಾಯುವಿನವಲ್ಲದೆ ಭಾವಿ।
ಪೊಡೆಯಾತ್ಮನೊಳಗಿಲ್ಲವಣು ಮಾತ್ರ ॥ 2 ॥

ಮಡದಿ ಮೈತ್ರೇಯಿ, ಕುಡಿವ, ಉಂಬುವ, ನೀರು ಅನ್ನಗಳನ್ನು ಕೆಳಗಡೆ ಸಾಗಿಸುವ, ಮಲ ಮೂತ್ರಗಳನ್ನು ಬಿಡುವ (ಮತ್ತು ಮಲಬದ್ಧತೆಯಿಂದ) ನೋಯಿಸುವ ಧರ್ಮಗಳು ಅಪಾನವಾಯುವಿನವು. ವಿಚಾರ ಮಾಡಲು ಆತ್ಮನಲ್ಲಿ ಈ ಧರ್ಮಗಳು ಅತ್ಯಲ್ಪವೂ ಕೂಡಾ ಇರುವದಿಲ್ಲ.

ಅಂಗದೊಳನ್ನ ಪಾನಂಗಳ ರಸವೆಲ್ಲ।
ವಂ ಗತಿಯಿಂದೆ ಪಸರಿಸುವ ॥
ಹಿಂಗದೀ ಧರ್ಮ ವ್ಯಾನಾನಿಲನಿಗೆ ತಿಳಿ।
ಯಂಗನೆಯಾತ್ಮನಿಗಿಲ್ಲೆಂದು ॥ 3 ॥

ದೇಹದಲ್ಲಿ ಅನ್ನ ರಸವನ್ನು ಬಿಡದೆ ಎಲ್ಲ ಅವಯವಗಳಿಗೆ ಪಸರಿಸುವ (ಒಯ್ಯುವ) ಧರ್ಮವು ವ್ಯಾನವಾಯುವಿನದು ಆದರೆ ಆತ್ಮನಿಗೆ ಇಲ್ಲವೆಂದು ಅಂಗನೆ ತಿಳಿ.

ಸೀನು ಬಿಕ್ಕಳು ಬೇನೆ ತಾನುದ್ಗಾರಂಗಳು- ।
ದಾನವಾಯುವಿನ ಗುಣಂಗಳು ॥
ಮಾನಿನಿ ನಿರ್ವಿಕಾರಾತ್ಮನಿಗಿಲ್ಲೆಂದು।
ನೀನೊಲವಿಂದವೆ ನಿಶ್ಚೈಯಿಸು ॥ 4 ॥

ಮಾನಿನಿ ಮೈತ್ರೇಯಿ ಸೀನು, ಬಿಕ್ಕಳಿಕೆ, ಕೆಮ್ಮು ದಮ್ಮು ಮತ್ತು ಡೇಕರಿಕೆಗಳು ಉದ್ಧಾನ ವಾಯುವಿನ ಗುಣಗಳು. ನಿರ್ವಿಕಾರ ಆತ್ಮನಿಗೆ ಇವು ಇಲ್ಲೆಂದು ನೀನು ಪ್ರೀತಿಯಿಂದ ನಿಶ್ಚೈಸು.

ಎಲ್ಲೆಲ್ಲಿ ನಾಡಿಗಳುಂಟಲ್ಲಲ್ಲಿ ಸಮವೆನ।
ಲುಳ್ಳನ್ನರಸ ಭಾಗೆಯನು ಮಾಡಿ ॥
ನಿಲ್ಲದೈದಿಪ ಗುಣವದು ಸಮಾನಕ್ಕಲ್ಲ।
ದಿಲ್ಲವಾತ್ಮಂಗೆ ನೋಡಸಿಯಳೆ ॥ 5 ॥

(ದೇಹದಲ್ಲಿ) ಎಲ್ಲೆಲ್ಲಿ ನಾಡಿಗಳುಂಟೋ ಅಲ್ಲಲ್ಲಿ ಅನ್ನ ರಸವನ್ನು ಸಮನಾಗಿ ಒಯ್ದು ಮುಟ್ಟಿಸುವ ಗುಣವು ಸಮಾನ ವಾಯುವಿಗೆ ಇರುವದು. ಆದರೆ ಆತ್ಮನಿಗಿಲ್ಲವೆಂದು ಪ್ರಿಯಳೆ ನೋಡಿ ತಿಳಿದುಕೊ ॥

ಆತ್ಮನಿಗೆ ಪ್ರಾಣಾದಿ ಪಂಚವಾಯುಗಳ ಗುಣಧರ್ಮಗಳನ್ನು ನಿರಾಕರಿಸಿದರು.

– ಇತಿ ನಿರೂಪಣೆ –

## 3ನೇ ಸೂತ್ರ

**ಕರ್ಮೇಂದ್ರಿಯಗಳ ಧರ್ಮವಾತ್ಮನಿಗುಂಟೆ ।**
**ಕರ್ಮವಿದೂರನಪ್ಪುದರಿಂದ ॥**

ಆತ್ಮನು ಕರ್ಮರಹಿತನು (ನಿಷ್ಕ್ರಿಯನು) ಇರುವದರಿಂದ ಕರ್ಮೇಂದ್ರಿಯಗಳ ಧರ್ಮಗಳು ಆತ್ಮನಿಗೆ ಇರುವದಿಲ್ಲ.

**ಜಡ ಶಬ್ದೋದಯಮಾಗೆ ನುಡಿವುದಖಿಳವನು ।**
**ತಡೆಯದಂತದು ವಾಗಿಂದ್ರಿಯ ಧರ್ಮ ॥**
**ನುಡಿಯಾತ್ಮನೊಳಗಿಲ್ಲವೆಂದು ನೀನರಿಯಂಚೆ ।**
**ನಡೆಯಳೆ ವೇದಸಮ್ಮತದಿಂದ ॥ 1 ॥**

ಹಂಸದಂತೆ ನಡಿಗೆಯುಳ್ಳವಳೆ, ಜಡ ಶಬ್ದಗಳು (ಕಂಠದಲ್ಲಿ) ಹುಟ್ಟಲು ಅನೇಕ ಮಾತುಗಳನ್ನು ಬಿಡದೆ ಆಡುವದು ನಾಲಿಗೆಯ ಗುಣಧರ್ಮವು. ಈ ನುಡಿಗಳು ಆತ್ಮನಲ್ಲಿ ಇಲ್ಲವೆಂದು ವೇದ ಸಮ್ಮತದಿಂದ ನೀನು ತಿಳಿ. (ಆತ್ಮನು ನಿಶ್ಶಬ್ದ, ಮೌನಿ, ಎಂಬ ಭಾವ)

**ಜಡ ವಸ್ತುಗಳನಿಂತು ಪಿಡಿವುದು ಬಿಡುವುದು ।**
**ಮಡದಿ ಕೇಳ್ಪಾಣೇಂದ್ರಿಯದ ಧರ್ಮ ॥**
**ಬಿಡದೆ ವಿಚಾರಿಸಿ ನೋಡಲಾ ಜಡಧರ್ಮ ।**
**ದೊಡಗೂಟವಿಲ್ಲವಾತ್ಮನೊಳೊಮ್ಮೆ ॥ 2 ॥**

ಮಡದಿ ಕೇಳು, ಜಡ ವಸ್ತುಗಳನ್ನು ಹಿಡಿಯುವದು, ಬಿಡುವದು ಕೈ (ಇಂದ್ರಿಯ) ಧರ್ಮವು. ವಿಚಾರಿಸಿ ನೋಡಲು ಆ ಜಡಧರ್ಮದ ಸಂಬಂಧವು ಒಮ್ಮೆಯಾದರೂ ಆತ್ಮನಲ್ಲಿರುವದಿಲ್ಲ.

**ಜಳಧಿ ಮುಂತಾದ ನಿಖಿಳ ಭೂತದೆಡೆಯೊಳು ।**
**ಸುಳಿದು ನಿಲ್ವುದು ಪಾದೇಂದ್ರಿಯ ಧರ್ಮ ॥**
**ತಳಿರಡಿಯಳೆ ನೋಡಲದರ ಸೋಂಕಿಲ್ಲಾತ್ಮ ।**
**ನೊಳು ಪೂರ್ಣನಚಲನಪ್ಪುದರಿಂದ ॥ 3 ॥**

ಚಿಗುರೆಲೆಯಂತೆ ಪಾದವುಳ್ಳ ಮೈತ್ರೇಯಿ, ನೋಡು, ನೀರು, ನೆಲ ಮುಂತಾದ ಅನೇಕ ಭೂತಗಳಲ್ಲಿ ಅಲೆದಾಡುವದು ನಿಲ್ಲುವದು ಪಾದೇಂದ್ರಿಯ ಧರ್ಮವು. ಆತ್ಮನು ಪೂರ್ಣನು, ಅಚಲನು (ನಿಷ್ಕ್ರಿಯನು) ಇರುವದರಿಂದ ಆ ಇಂದ್ರಿಯದ ಸ್ಪರ್ಶವು ಆತ್ಮನಲ್ಲಿಲ್ಲ.

**ಒಡಲಮಲವನೊಮ್ಮೆ ಪಿಡಿವುದು ಬಿಡುವುದು ।**
**ಜಡಪಾಯು ಧರ್ಮವಲ್ಲದೆ ಮತ್ತೆ ।**
**ಒಡಲಲ್ಲಿ ಮಲವಿಲ್ಲದಾತ್ಮನೊಳದನೆಂತು ॥**
**ನುಡಿಯಲಪ್ಪುದು ತೋರಮುಡಿಯಳೆ ॥ 4 ॥**

ದೇಹದಲ್ಲಿ ಮಲವನ್ನೊಮ್ಮೆ ಹಿಡಿಯುವದು ಮತ್ತೊಮ್ಮೆ ಬಿಡುವದು ಗುದೇಂದ್ರಿಯದ ಧರ್ಮವು. ದೊಡ್ಡತುರುಬುಳ್ಳವಳೇ, ದೇಹವಿಲ್ಲದ ಮತ್ತುಮಲವಿಲ್ಲದ ಆತ್ಮನಲ್ಲಿ ಆ ಜಡಧರ್ಮವಿದೆಯೆಂದು ಹೇಗೆ ಹೇಳಬೇಕು ?

ಅಂಗನಾ ಪುಲ್ಲಿಂಗ ಸಂಗತಿಯೊಳು ಕರ।
ಣಂಗಳಿಗಾನಂದ ವೆಸಗುವ ॥
ಹಿಂಗದೀಗುಣವೆ ಗುಹ್ಯೇಂದ್ರಿಯ ಧರ್ಮವಾ।
ತ್ಮಂಗಿಲ್ಲವೆಂದು ಭಾವಿಸು ಭಾವೆ ॥ 5 ॥

ಭಾಮಿನಿಯೆ, ಸ್ತ್ರೀ ಪುರುಷರ ಕೂಟದಲ್ಲಿ ಕರಣಗಳಿಗೆ ಸಾಕೆನಿಸದ ಆನಂದವುಂಟಾಗುವ ಗುಣವು ಗುಹ್ಯೇಂದ್ರಿಯ ಧರ್ಮವು. ಆತ್ಮನಿಗೆ ಇದು ಎಂದೂ ಇರುವದಿಲ್ಲವೆಂದು ನಂಬು.

ಇಲ್ಲಿ ಆತ್ಮನಿಗೆ ಐದೂ ಕರ್ಮೇಂದ್ರಿಯಗಳ ಗುಣಧರ್ಮಗಳನ್ನು ನಿರಾಕರಿಸಿದರು.

– ಇತಿ ನಿರೂಪಣೆ –

## 4ನೇ ಸೂತ್ರ

**ಬುದ್ಧೀಂದ್ರಿಯಂಗಳಗುಣವಿಲ್ಲವಾತ್ಮಂಗೆ ।**
**ಶುದ್ಧಚಿನ್ಮಾತ್ರನಪ್ಪುದರಿಂದ ॥**

(ಪಂಚ) ಜ್ಞಾನೇಂದ್ರಿಯಗಳ ಗುಣವು ಆತ್ಮನಿಗಿಲ್ಲ, ಯಾಕೆಂದರೆ ಅವನು ಕೇವಲ ಚಿನ್ಮಾತ್ರನು (ಕೇವಲ ಅರಿವು) ಇರುವನು.

ವೇದ ಪುರಾಣಾಗಮಾವಳಿಯನು ಗೀತ।
ವಾದ ನಾದಗಳನಾಕರ್ಣಿಪ ॥
ಚೋದನೆ ಕರ್ಣೇಂದ್ರಿಯ ಧರ್ಮವಾತ್ಮಂಗೆ।
ಭೇದಿಸಲಣುವಿಲ್ಲವದುತಾನು ॥ 1 ॥

ವೇದ, ಪುರಾಣ, ಆಗಮ, ನಿಗಮ, ಗೀತ, ವಾದ್ಯನಾದಗಳು ಇವನ್ನೆಲ್ಲ ಕೇಳುವ ಕುಶಲತೆಯು ಕರ್ಣೇಂದ್ರಿಯ (ಕಿವಿ) ಗುಣಧರ್ಮವು. ಈ ಗುಣವು ಅಣುಮಾತ್ರವೂ ಆತ್ಮನಿಗೆ ಇರುವದಿಲ್ಲ.

ಮೃದು ಶೀತ ಕಠಿಣಾದಿಕದ ಸೋಂಕುಗಳನರಿ।
ವುದು ತಾನೆ ಚರ್ಮೇಂದ್ರಿಯದ ಧರ್ಮ ॥
ಇದು ದೇಹರಹಿತನಾದಾತ್ಮನಿಗಿಲ್ಲವೆಂ।
ಬುದು ವೇದಸಿದ್ಧವಪ್ಪುದು ನಂಬು ॥ 2 ॥

ಮೃದು, ಶೀತ, ಕಠಿಣ ಮೊದಲಾದ ಸ್ಪರ್ಶ ಜ್ಞಾನವನ್ನು ತಿಳಿದುಕೊಳ್ಳುವದು ಚರ್ಮೇಂದ್ರಿಯದ ಗುಣಧರ್ಮ. ಈ ಗುಣಧರ್ಮವು ದೇಹರಹಿತನಾದ ಆತ್ಮನಿಗೆ ಇರುವದಿಲ್ಲವೆಂಬುದು ವೇದ ಸಿದ್ಧ, ಇದನ್ನು ನೀನು ನಂಬು.

**ಪ್ರಿಯವಾದ ನೃತ್ಯ ವಿಚಿತ್ರ ವಿಕೃತ ವೇಷ।**
**ಚಯದರುಶನವೆಂಬುದೆಲ್ಲವು ॥**
**ನಯನೇಂದ್ರಿಯದ ಧರ್ಮವಾತ್ಮನಿಗಿಲ್ಲೆಂದು।**
**ಪ್ರಿಯತಮೆ ಮತಿಮುಟ್ಟತಿಳಿ ನೀನು ॥ 3 ॥**

ಪ್ರಿಯತಮೆ, ಮೋಹಕವಾದ ನೃತ್ಯ, ವಿಚಿತ್ರ ವಿಕೃತ ವೇಷಭೂಷಣಗಳು ಮತ್ತು ರೂಪ ಈ ನೋಟಗಳನ್ನು ನೋಡುವದು ನೇತ್ರೇಂದ್ರಿಯದ ಗುಣಧರ್ಮವು. ಇದು ಆತ್ಮನಿಗಿಲ್ಲವೆಂದು ನೀನು ಬುದ್ಧಿಪೂರ್ವಕವಾಗಿ ತಿಳಿ.

**ನಲವಿಂದೆ ಮಧುರಾದಿ ಪಲವು ರಸಂಗಳ।**
**ನಲಸದಾಸ್ವಾದಿಪತನವಿದು ॥**
**ಲಲನೆ ಜಿಹ್ವೇಂದ್ರಿಯ ಧರ್ಮವದಾತ್ಮಂಗೆ।**
**ಸಲೆ ದೊರೆಕೊಳಲರಿಯದು ಸತ್ಯ ॥ 4 ॥**

ಸಿಹಿ ಮೊದಲ್ಗೊಂಡು ಅನೇಕ ರಸಗಳ ರುಚಿಯನ್ನು ಆನಂದದಿಂದ ಸದಾ ಆಸ್ವಾದಿಸುವ ಗುಣಧರ್ಮವು ನಾಲಿಗೆಯದ್ದಾಗಿರುತ್ತದೆ. ಈ ಧರ್ಮವು ಆತ್ಮನಲ್ಲಿ ಇರುವದಿಲ್ಲವೆಂಬುದು ಸತ್ಯ. ಇದನ್ನು ನೀನು ಚನ್ನಾಗಿ ತಿಳಿದಿರಬೇಕು.

**ಪಲವು ಸುಗಂಧದ ಪಲವು ದುರ್ಗಂಧದ।**
**ಪಲವು ಭೇದಂಗಳನರಿವುದು ॥**
**ಸಲೆ ನಾಶಿಕೇಂದ್ರಿಯಧರ್ಮವಾತ್ಮನಿಗಿಲ್ಲ।**
**ವೆಲೆ ಕೋಮಲಾಂಗಿ ಭಾವಿಪುದಿಂತು ॥ 5 ॥**

ಕೋಮಲವಾದ ಅವಯವಗಳುಳ್ಳವಳೆ ಹಲವು ಸುಗಂಧದ, ಹಲವು ದುರ್ಗಂಧದ, ಹಲವು ಪ್ರಕಾರದ ವಾಸನೆಗಳ ಭೇದಗಳನ್ನು ತಿಳಿದುಕೊಳ್ಳುವದು (ಮೂಗು) ನಾಶಿಕದ ಗುಣಧರ್ಮ. ಇದು ಆತ್ಮನಿಗೆ ಇಲ್ಲವೆಂದು ನೀನು ಭಾವಿಸು.

ಇಲ್ಲಿ ಆತ್ಮನಿಗೆ ಜ್ಞಾನೇಂದ್ರಿಯಗಳ ಗುಣಧರ್ಮಗಳನ್ನು ನಿರಾಕರಿಸಿದರು.

— ಇತಿ ನಿರೂಪಣೆ —

## 5ನೇ ಸೂತ್ರ

**ಕರಣಧರ್ಮಂಗಳ ಬೆರಿಕೆಯಾತ್ಮಂಗಿಲ್ಲ ।**
**ಕರಣರಹಿತನಾಗಿ ಹರಿಣಾಕ್ಷಿ ॥**

ಚಿಗರೆಯ ಕಣ್ಣಿನಂಥ ಕಣ್ಣುಗಳುಳ್ಳ ಮೈತ್ರೇಯಿ, ಆತ್ಮನು (ಮನಸ್ಸು ಮೊದಲಾದ) ಕರಣರಹಿತನಾಗಿರುವದರಿಂದ ಆ ಕರಣಧರ್ಮಗಳ ಸೋಂಕು ಆತ್ಮನಿಗಿರುವದಿಲ್ಲ.

ನೆನಹು ಸಂಕಲ್ಪ ವಿಕಲ್ಪ ವಿಮತಿ ಮುಖ್ಯ ।
ವೆನಿಪೆಲ್ಲವಾ ಮನೋಗುಣವೈಸೆ ॥
ವನಿತೆ ಕೇಳಿಲಾತ್ಮನಿಗೆ ಮನೋದೂರನೆಂ।
ದೆನುತಾಗಮದ ವಾಕ್ಯವಿಹದಾಗಿ ॥ 1 ॥

ವನಿತೆ ಕೇಳು, ನೆನಹು, ಸಂಕಲ್ಪ, ವಿಕಲ್ಪ, ವಿಪರೀತ ಬುದ್ಧಿ, ಸಂಶಯ ಮೊದಲಾದವುಗಳೆಲ್ಲ ಮನಸ್ಸಿನ ಗುಣಧರ್ಮ. ಈ ಗುಣಧರ್ಮಗಳು ಮನೋದೂರನಾದ ಆತ್ಮನಿಗೆ ಇರುವದಿಲ್ಲ. ಈ ಮಾತು ಆಗಮದಲ್ಲಿರುತ್ತದೆ.

ಎನಿತು ಸಂಶಯಮಾಗಲನಿತನು ನಿಶ್ಚಯಿಸು ।
ವನುವಿದು ಬುದ್ಧಿಯ ಗುಣವೈಸೆ ॥
ಘನಸಂವಿದಾತ್ಮನದಲ್ಲವೆಂಬುದು ಸತ್ಯ ।
ವನಘಮೈತ್ರೇಯಿ ನಂಬಿದ ನಿಂತು ॥ 2 ॥

ಮನಸ್ಸಿನಲ್ಲಿ ಬರುವ ಅನೇಕ ಸಂಶಯಗಳಲ್ಲಿ ಎಲ್ಲವನ್ನು ನಿಶ್ಚೈಸುವದು ಬುದ್ಧಿಯ ಗುಣಧರ್ಮವು. ಈ ಗುಣವು ಕೇವಲ ಅರಿವೇ ತಾನಾದ ಆತ್ಮನದಲ್ಲವೆಂಬುದನ್ನು ಘನ ಮಹಿಮಳಾದ ಮೈತ್ರೇಯಿ ನೀನು ನಂಬು.

ತನು ಮುಖ್ಯದೊಳು ಘಟಾದಿಕದೊಳಗಾನೆನ್ನ -।
ದೆನುತಿರ್ಪುದಹಮಿನ ಗುಣವಕ್ಕು ॥
ಜನನ ವಿದೂರನಾದಾತ್ಮನಿಗಿಲ್ಲೆಂದು।
ವಿನಯವಾರಿಧಿ ತಿಳಿವುದು ನೀನು ॥ 3 ॥

ಅಮಿತವಿನಯವುಳ್ಳ ಮೈತ್ರೇಯಿಯೇ, ತನು ಮುಖ್ಯವಾಗಿ ಘಟಪಟಾದಿ ವಿಷಯಗಳಲ್ಲಿ ನಾನು, ನನ್ನದು ಎನ್ನುವದು ಅಹಂಕಾರದ ಗುಣವು. ಈ ಗುಣವು ಹುಟ್ಟಿಲ್ಲದ ಆತ್ಮನಿಗೆ ಇಲ್ಲವೆಂಬುದನ್ನು ನೀನು ತಿಳಿ.

ಕರಣನಿಕರವರಿದನಿತವೆಲ್ಲವನವ।
ಧರಿಪುದು ಚಿತ್ತವೊಂದರ ಗುಣ॥
ಪರಮಾತ್ಮನೊಡನದು ಬೆರಸದೆಂದೆಲೆ ಹೆಂಗ।
ಳರಸಿ ಮೈತ್ರೇಯಿ ನಿರ್ಧರಿಪುದು ॥ 4 ॥

ಹೆಣ್ಣುಮಕ್ಕಳಲ್ಲಿ ರಾಣಿಯಂತಿರುವ ಮೈತ್ರೇಯಿ, ನೇತ್ರಾದಿ ಬಾಹ್ಯ ಜ್ಞಾನೇಂದ್ರಿಯಗಳು ಮನಾದಿ ಅಂತಃ ಕರಣಗಳು ತಿಳಿದ ವಿಷಯವೆಲ್ಲವನ್ನು ತನ್ನಲ್ಲಿ ಅವಧಾರಣ ಮಾಡುವದು ಚಿತ್ತಿನ ಗುಣವು. ಈ ಗುಣವು ಪರಮಾತ್ಮನೊಡನೆ ಸಮರಸ ಆಗಲಾರದೆಂದು ನಿರ್ಣಯಿಸು.

ಜೀವ ನಾನಜ್ಞನಾನಾದೇವ ನಾನೆಂಬ।
ಭಾವನೆ ಜ್ಞಾತೃವಿನ ಗುಣವದು॥
ಕೋವಿದೆ ಕೇಳು ನಿಜಾತ್ಮನಿಗಿಲ್ಲೆಂಬು।
ದಾ ವೇದ ವಿಹಿತವೆನಿಸುವರ್ಥ ॥ 5 ॥

"ನಾನು ಜೀವನು, ನಾನು ಅಜ್ಞನು, ನಾನಾ ದೇವನು ಎಂಬ ಭಾವನೆ ಜ್ಞಾತೃವಿನ ಗುಣವು. ಜ್ಞಾನ ಸಂಪನ್ನಳೇ ಕೇಳು, ಈ ಗುಣವು ನಿಜಾತ್ಮನಿಗೆ ಇಲ್ಲವೆಂಬುದು ವೇದವಾಕ್ಯವು.

ಈ ಸೂತ್ರದಲ್ಲಿ ಆತ್ಮನಿಗೆ ಈ ಐದೂ ಅಂತಃಕರಣಗಳ ಗುಣಧರ್ಮಗಳನ್ನು ನಿರಾಕರಿಸಿದರು.

## 6ನೇ ಸೂತ್ರ

**ತನು ವಿಷಯಾದಿಗಳನು ಚೇಷ್ಟಿಸುವ ಗುಣ ।**
**ವನಿಲನದಲ್ಲದಾತ್ಮನೊಳಿಲ್ಲ ॥**

ತನು, ಇಂದ್ರಿಯ ಮನಾದಿ ಕರಣಗಳನ್ನು ಚೇಷ್ಟಿಸುವ ಗುಣವು ವಾಯುವಿನದು. ಈ ಗುಣವು ಆತ್ಮನಲ್ಲಿಲ್ಲ.

ತನುವಿನ ರುಜೆ ಚಲನಾದಿಗಳಿವು ನೋಡ।
ಲನಿಲನ ವಿಕೃತಿಗಳಲ್ಲದೆ॥
ಘನ ಚಿತ್ಪರಮಾತ್ಮನಿಂದಾದ ಕರ್ಮಾಕರ್ಮ।
ಜನಿತವಲ್ಲೆಂದು ಕಾಣಲುಬೇಕು ॥ 1 ॥

ಶರೀರದ ರೋಗ, ಅತ್ತಿಂದಿತ್ತ ಇತ್ತಿಂದತ್ತ ಸುಳಿದಾಡುವುದು ವಾಯುವಿನ ವಿಕಾರಗಳೇ ಹೊರತು ಪೂರ್ಣಜ್ಞಾನ ಸ್ವರೂಪನಾದ ಆತ್ಮನಿಂದ ಆದುದಲ್ಲ. ಮಾಡುವ ಬಿಡುವ ಕರ್ಮಗಳು ಅಕರ್ಮಗಳು ಅರ್ಥಾತ್ ಪುಣ್ಯ ಪಾಪ ಕರ್ಮಗಳು ದೇಹದಲ್ಲಿ ವಾಯು ಸಂಚಾರದಿಂದ ಹುಟ್ಟುವವಲ್ಲದೆ ಪರಮಾತ್ಮನಿಂದ ಜನಿತವಲ್ಲೆಂದು ತಿಳಿಯಬೇಕು.

ನಾಗ ಕೂರ್ಮನು ಕೃಕರನು ದೇವದತ್ತನಂ।
ತಾಗಳುಮಾ ಧನಂಜಯನೆಂಬ ॥
ಭಾಗೆ ವಡೆದು ವಾಯು ವಾಗಿಂದ್ರಿಯಾದಿ ಚೇ।
ಷ್ಟಾಗುಣಂಗಳ ವಾತ್ಮನಿಗಿಲ್ಲಾಗ್ಗಿ ॥ 2 ॥

ನಾಗ, ಕೂರ್ಮ, ಕೃಕರ, ದೇವದತ್ತ ಮತ್ತು ಧನಂಜಯ ಈ ಐದು ಉಪವಾಯುಗಳು ಕ್ರಮವಾಗಿ ವಾಕ್, ಪಾಣಿ, ಪಾದ, ಪಾಯು ಮತ್ತು ಉಪಸ್ಥ ಈ ಪಂಚ ಕರ್ಮೇಂದ್ರಿಯಗಳನ್ನು ಚೇಷ್ಟಿಸುವವು. ಈ ಗುಣಗಳು ಆತ್ಮನಿಗಿರುವದಿಲ್ಲ.

ಜಾಣೆ ಕೇಳ್ಪ್ರಾಣಾದಿ ವಾಯು ಶಬ್ದಾದಿಗ।
ಳಾಣತಿವಿಡಿದು ಕರಣಾದಿಯ ॥
ಮಾಣದೆ ಚೇಷ್ಟಿಸುತಿರ್ಪವಾ ವಿಕೃತಿಯಂ।
ಬೂಣೆಯವಣುವಿಲ್ಲವರಿವಿಂಗೆ ॥ 3 ॥

ಜಾಣಳಾದ ಮೈತ್ರೇಯಿ ಕೇಳು, ಪ್ರಾಣಾದಿ ಪಂಚ ವಾಯುಗಳು, ಕರ್ಣಾದಿ ಪಂಚ ಜ್ಞಾನೇಂದ್ರಿಯಗಳನ್ನು ಕ್ರಮವಾಗಿ ಶಬ್ದಾದಿ ಪಂಚ ವಿಷಯಗಳಲ್ಲಿ ಆಜ್ಞಾಪಿಸಿ ಚೇಷ್ಟಿಸುತ್ತಿರುವವು ಆದರೆ ವಾಯುಗಳ ವಿಕಾರವೆಂಬ ಈ ಕೊರತೆಯು (ವಿಷಯ ಬೇಡಿಕೆ) ಅರುವಿಗೆ ಎಳ್ಳಷ್ಟಾದರೂ ಇರುವದಿಲ್ಲ.

ವೈರಂಭ ಮುಖ್ಯ ಪ್ರಭಂಜನಂತರ್ಯಾಮಿ।
ಯಾರೈ ಮಹಾಪ್ರಾಣವೆನಿಪ್ಪೈದು ॥
ಮಾರುತಂಗಳೆ ಮನಸಾದಿ ವಿಕಾ।
ರಾನುಕಾರಿಗಳಾತ್ಮನಲ್ಲಂಗನೆ ॥ 4 ॥

ಅಂಗನೆ, ವೈರಂಭ, ಮುಖ್ಯ ಪ್ರಭಂಜನ, ಅಂತರ್ಯಾಮಿ ಮತ್ತು ಮಹಾಪ್ರಾಣವೆಂಬ ಐದು ಉಪವಾಯುಗಳು ಕ್ರಮವಾಗಿ ಮನಸ್ಸು ಮೊದಲ್ಗೊಂಡು ಐದು ಅಂತಃಕರಣಗಳ ವಿಕಾರಗಳಿಗೆ ಕಾರಣವಾಗಿವೆ. ಇವು ಆತ್ಮನಲ್ಲಿ ಇರುವದಿಲ್ಲ ಎಂಬುದನ್ನು ತಿಳಿ.

ಈ ಆರನೆಯ ಸೂತ್ರದಲ್ಲಿ ಆತ್ಮನಿಗೆ ಬಾಹ್ಯಕರಣಗಳ ಗುಣಧರ್ಮಗಳನ್ನು ನಿರಾಕರಿಸಿದರು.

— ಇತಿ ನಿರೂಪಣೆ —

## 7ನೇ ಸೂತ್ರ

ಕರಣಂಗಳಲ್ಲಿ ತೋರಿದ ದುಃಖನಿಕರವಾ ।
ಕರಣರಹಿತ ಸುಖಾತ್ಮನೊಳುಂಟೆ ॥

ಅಂತರ ಬಾಹ್ಯ ಕರಣಗಳಲ್ಲಿ ತೋರಿದ ಸುಖ ದುಃಖ ವಿಕಾರಗಳು, ಯಾವ ಕರಣಗಳಿಲ್ಲದ ಸುಖಾತ್ಮನಲ್ಲಿರಬಲ್ಲವೆ ? ಇರಲಾರವು.

ಮನದೊಳುಬುದ್ಧಿಯೊಳು ಸಂಶಯ ನಿಶ್ಚಯದೆ ಮಿಗೆ।
ಜನಿಸುಗಾ ದುಃಖ ವಹಮಿನೊಳು ॥
ಘನಗರ್ವದಿಂದುದಿಪುದು ಸಂವಿದಾತ್ಮನೊ।
ಳಿನಿತಿಲ್ಲವದು ಮತ್ತಗಜಯಾನೆ ॥ 1 ॥

ಮದ್ದಾನೆಯ ನಡಿಗೆಯುಳ್ಳ ಮೈತ್ರೇಯಿ, ಮನದಲ್ಲಿ ಸಂಶಯದಿಂದ ಮತ್ತು ಬುದ್ಧಿಯಲ್ಲಿ ನಿಶ್ಚಯದಿಂದ ದುಃಖಗಳು ಹುಟ್ಟುವವು ಬಳಿಕ ''ನಾನು ನನ್ನದೆಂಬ'' ಘನ ಗರ್ವದಿಂದ ಅಹಂಕಾರದಲ್ಲಿ ಆ ದುಃಖಗಳು ತೋರುವವು ಆದರೆ ಚಿನ್ಮಾತ್ರವಾದ ಅರಿವಿನಲ್ಲಿ ಇವು ಇರಲಾರವು.

ಚಿತ್ತದೊಳ್ಭ್ರಾಂತಿಯಿಂದಜ್ಞತೆಯಿಂದೆ ಜ್ಞಾ।
ತೃತ್ವದೊಳುದಿಸುಗಾ ದುಃಖವು ॥
ಮತ್ತೆ ತದ್ಭ್ರಮೆಯಿಂದೆ ವಿಷಯಗಂಗಳೊಳು ಜನಿ।
ಸುತ್ತಿರ್ಪುದದು ಸುಖಾತ್ಮನೊಳುಂಟೆ ॥ 2 ॥

ಅಹಂ ಭ್ರಾಂತಿಯಿಂದ ಚಿತ್ತದಲ್ಲಿ ಅಜ್ಞನು ನಾನೆಂಬ ಭಾವನೆಯಿಂದ ಜ್ಞಾತೃವಿನಲ್ಲಿ ಆ ದುಃಖ ಸಮೂಹ ಹುಟ್ಟುವದು. ಮತ್ತೆ ಬಾಹ್ಯ ವಿಷಯಗಳಲ್ಲಿ ಅಹಂ–ಮಮಕಾರ ಭ್ರಮೆಯಿಂದ ದುಃಖಗಳು ತೋರುವವು. ಅವು ಸುಖಮಯನೆ ಆಗಿರುವ ಆತ್ಮನಲ್ಲಿರಲು ಸಾಧ್ಯವಿಲ್ಲ.

ನೆನೆ ಮನೋಬುದ್ಧ್ಯಾದಿ ಜನಿತ ದುಃಖಂಗಳಾ।
ತ್ಮನವಲ್ತು ಕರಣರಹಿತನಾಗಿ ॥
ವನಿತೆ ಬಳಿಕ ವೈರಂಭಾದಿ ವಾಯುವಿನ ವ।
ರ್ತನದಿಂದಲಹವಿದು ನಿಜವಕ್ಕು ॥ 3 ॥

ವನಿತೆ ಮೈತ್ರೇಯಿಯೆ, ವಿಚಾರಿಸಿ ನೋಡಲಾಗಿ ಮನಬುದ್ಧಿ ಮೊದಲ್ಗೊಂಡು ಕರಣಗಳಲ್ಲಿ ವೈರಂಭಾದಿ ವಾಯುವಿನ ವರ್ತನದಿಂದ ಬರುವ ದುಃಖಗಳು ಆಯಾ ಕರಣಗಳಿಗೆ ಸಂಬಂಧವಾಗುವವು. ಆತ್ಮನು ಕರಣರಹಿತನಾಗಿರುವದರಿಂದ ಆ ದುಃಖಗಳು ಆತ್ಮನವು ಅಲ್ಲ, ಇದು ನಿಜವೆಂದು ತಿಳಿ.

ಎಲ್ಲ ತೋರ್ಕೆಗಳೊಳಗಲ್ಲಲ್ಲಿ ಸುಖ ದುಃಖ।
ವೆಲ್ಲವನುಂಬುದು ಮನವೈಸೆ ॥
ನಲ್ಲಳೆ ತನ್ನನುಭವವಲ್ತು ತನಿನಿದ್ರೆ।
ಯಲ್ಲಿ ತಾನಿರ್ದುಮದಿಲ್ಲಾಗಿ ॥ 4 ॥

ಪ್ರಿಯಳೆ ಎಲ್ಲ ತೋರಿಕೆಗಳಲ್ಲಿ ಸುಖ ದುಃಖವೆಲ್ಲವನ್ನೂ ಉಣ್ಣುವದು ಮನಸ್ಸು ಮಾತ್ರ. ಅದು ತನ್ನ (ಆತ್ಮನ) ಅನುಭವವಲ್ಲ, ಯಾಕೆಂದರೆ ತನಿನಿದ್ರೆಯಲ್ಲಿ ತಾನಿರುವನು. ಅಲ್ಲಿ ಮನಸ್ಸು ಇರುವದಿಲ್ಲ.

ಅನುಭೂತ ವಿಷಯವನುರೆ ಮರೆವುದು ಮತ್ತೆ।
ನೆನೆವುದು ಮನವು ಸಂಭಾವಿಸೆ ॥
ಅನುಭವಿಪುದು ನೆನೆಸುವದಿಲ್ಲವಾತ್ಮಂಗೆ।
ತನುರಹಿತನು ನಿರ್ವಿಷಯಿಯಾಗಿ ॥ 5 ॥

ವಿಚಾರ ಮಾಡಲಾಗಿ, ಅನುಭವಿಸಿದ ವಿಷಯಗಳನ್ನು ಮರೆಯುವದು ಮತ್ತೆ ನೆನಪಿಸುವದು ಮನಸ್ಸಿನ ಕಾರ್ಯವಾಗಿದೆ. (ಆದರೆ) ಆತ್ಮನಿಗೆ (ವಿಷಯಗಳನ್ನು) ಅನುಭವಿಸುವ ಮತ್ತು ನೆನೆಯುವ ಕಾರ್ಯಗಳಿಲ್ಲ, ಯಾಕೆಂದರೆ ಆತ್ಮನು ತನುರಹಿತನು. ನಿರ್ವಿಷಯಿಯಾಗಿರುವನು.

ಸಕಲ ಕರ್ಮಂಗಳ ನಖಿಳ ಕರ್ಮೇಂದ್ರಿಯ।
ನಿಕರಂಗಳೆಸಗುವವಲ್ಲದೆ ॥
ಅಕಲಂಕನೆನಿಸುವಚಲಿತಾತ್ಮನಾ ಕರ್ಮ।
ಪ್ರಕರಂಗಳೊಡವೆರಸುವನಲ್ಲ ॥ 6 ॥

ಸಕಲ ಕರ್ಮಗಳನ್ನು ಯಾವತ್ತೂ ಕರ್ಮೇಂದ್ರಿಯಗಳು ಮಾಡುವವು ಅಲ್ಲದೆ ಅಕಲಂಕನು ಅಚಲನೆನಿಸುವ ಆತ್ಮನು ಆ ಕರ್ಮ ಸಮೂಹದೊಡನೆ ಬೆರೆತುಕೊಳ್ಳುವವನಲ್ಲ.

ಸಕಲ ಭೇದಾನುಭಾವನೆಯೆ ಬುದ್ಧೀಂದ್ರಿಯ।
ನಿಕರದವೀ ದೃಶ್ಯಚಯದೊಳು ॥
ವಿಕರಿಸದರಿವಿನೊಳಿಲ್ಲ ವದ್ವಯವಾಗಿ।
ಮಕರಧ್ವಜಾಸ್ತ್ರಾನುಗುಣ ನೇತ್ರೆ ॥ 7 ॥

ಮನ್ಮಥನ ಬಿಲ್ಲಿನಂತೆ ಕಣ್ಣುಗಳುಳ್ಳ ಮೈತ್ರೇಯಿ (ಎದಿರಿಟ್ಟು ಕಾಣುವ) ಈ ದೃಶ್ಯ ಸಮೂಹದಲ್ಲಿ ಅನುಭವವಾಗುವ ಯಾವತ್ತೂ ಭೇದದ (ಸುಖ ದುಃಖಗಳ) ಸಂವೇದನೆಗಳು (ಭೇದ ರೂಪಿನ) ಜ್ಞಾನೇಂದ್ರಿಯ ಕರ್ಮೇಂದ್ರಿಯ ಸಮೂಹಕ್ಕೆ ಸಂಬಂಧವಾಗುವವು. ಈ ಧರ್ಮವು ನಿರ್ವಿಕಾರನು, ಅದ್ವಯನು ಅರಿವು ತಾನಾದ ಆತ್ಮನಲ್ಲಿರುವದಿಲ್ಲ.

ಯುವತಿ ಕೇಳಖಿಳಕರಣ ವೃತ್ತಿಯಾತ್ಮಸಂ।
ಭವಯತ್ನವಲ್ತು ಸನ್ನಿಧಿಯಿಂದ ॥
ತವೆ ತನ್ನತಾನಹುದೆಂದು ನೀನರಿ ಕಣ್ಗ।
ಳೆವೆಯಾಟದಸುಗತಿಗಳ ಪಾಂಗು ॥ 8 ॥

ಯುವತಿ ಕೇಳು ಯಾವತ್ತು ಬಾಹ್ಯೇಂದ್ರಿಯ ಅಂತಃಕರಣಗಳ ವ್ಯವಹಾರವು ಆತ್ಮನಿಂದ ಹುಟ್ಟಿದುದಲ್ಲ ಮತ್ತು ಆತ್ಮನ ಯತ್ನದಿಂದಾದುದಲ್ಲ, ಆದರೆ ಆತ್ಮನ ಸನ್ನಿಧಿಯಲ್ಲಿ ಮಾತ್ರ ಅವುಗಳ ವ್ಯವಹಾರ ತೋರುವದು. ಹೇಗೆಂದರೆ ಕಣ್ಣುಗಳ ಎವೆಗಳು ತಮ್ಮಷ್ಟಕ್ಕೆ ತಾವೇ ಮುಚ್ಚುವವು ಮತ್ತು ತೆರೆಯುವವು. ಇದೇ ರೀತಿ ಮೂರು ಅವಸ್ಥೆಗಳಲ್ಲಿ ಪ್ರಾಣ ವಾಯುವಿನ ಶ್ವಾಶೋಚ್ಛ್ವಾಸಕ್ರಿಯೆ (ಇಚ್ಛಾಪ್ರಯತ್ನವಿಲ್ಲದೆ) ನಡೆದಿರುವದು.

ಈ ಏಳನೆಯ ಸೂತ್ರದಲ್ಲಿಯ ಎಂಟು ಪದ್ಯಗಳಲ್ಲಿ ಆತ್ಮನಿಗೆ ಸಕಲ ದುಃಖಾನುಭವವನ್ನು ನಿರಾಕರಿಸಿದರು.

## 8ನೇ ಸೂತ್ರ

ಸೋವರ್ಮುಡಿಯಬಲೆ ಷಡೂರ್ಮಿಗುಣಾದಿಗ ।
ಳೋವರ್ಮಯುಮಿಲ್ಲವಚ್ಚರಿವಿಂಗೆ ॥

ಬಿಚ್ಚಿ ಬಾಚಿದ ನೀಳಾದ ಮುಡಿಯುಳ್ಳ ರಮಣಿಯೆ ಬಚ್ಚ ಬರಿ ಅರಿವಿಗೆ (ಆತ್ಮನಿಗೆ) ಷಡೂರ್ಮಿ ಮತ್ತು ಸತ್ತ್ವಾದಿ ಮೂರು ಗುಣಗಳು ಎಂದೂ ಇರಲಾರವು.

ಜರೆ ಮೃತಿಯೊಡಲಿಂಗೆ ಹರಣಕ್ಕೆ ಕ್ಷುಧೆ ತೃಷ್ಣೆ।
ಪರಿಶೋಕ ಮೋಹವಾ ಬುದ್ಧಿಗೆ ॥
ಅರಿವರ್ಗವಾ ಮನಸಿಗೆ ನಿಸ್ತರಂಗ ಚ।
ಚ್ಛರಿಧಿಯೊಳವು ತೋರಲರಿವವೆ ॥ 1 ॥

ದೇಹಕ್ಕೆ ಮುಪ್ಪು ಸಾವು, ಪ್ರಾಣಕ್ಕೆ ಹಸಿವು ನೀರಡಿಕೆ ಮತ್ತು ಬುದ್ಧಿಗೆ ಶೋಕ ಮೋಹ ಇವೇ ಷಟ್ ಊರ್ಮಿಗಳು (ಬಾಧೆಗಳು) ಹಾಗೂ ಮನಸ್ಸಿಗೆ ಕಾಮ ಕ್ರೋಧಾದಿ ಯರಿಷಡ್ವರ್ಗಗಳು (ವೈರಿಗಳು) ಈ ಷಡೂರ್ಮಿಗಳೆಂಬ ತೆರೆಗಳಿಲ್ಲದ ಅರಿವೆಂಬ ಶರಧಿಯಲ್ಲಿ ಆ ಕರಣ ಬಾಧೆಗಳು ತೋರಲಾರವು.

ಜ್ಞಾನ ಸಮಾಧಿ ತದ್ಧ್ಯಾನ ಜಪಾದಿ ಏ।
ಧಾನ ಪೂಜಾದಿ ಸತ್ಕ್ರಿಯೆ ನೀತಿ ॥
ಮೌನ ದಯಾದಿಗಳಾ ಸತ್ವಗುಣ ಧರ್ಮ।
ವಾ ನಿಜ ಜ್ಞಪ್ತಿಯೊಳಿನಿತಿಲ್ಲ ॥ 2 ॥

ದಯೆ, ಜ್ಞಾನ, ಸಮಾಧಿ, ಪರಮನ ಧ್ಯಾನ, ಜಪ, ತಪ, ಪೂಜಾದಿ ಸತ್ಕ್ರಿಯೆಗಳು ಸತ್ವಗುಣ ಧರ್ಮಗಳು. ಶುದ್ಧ ಅರಿವಿನ ಸ್ವರೂಪನಾದ ಆತ್ಮನಲ್ಲಿ ಇವು ಅಣುಮಾತ್ರವೂ ಇರುವದಿಲ್ಲ.

ರಾಗ ತದ್ವಿಷಯೋಪಭೋಗ ಶೃಂಗಾರ ಕಾ।
ಮ್ಯಾಗಮ ಕರ್ಮಾದಿ ಕುಳವೆಲ್ಲ॥
ಆಗಳುಮಾ ರಜೋಗುಣಧರ್ಮವಾತ್ಮನೊ।
ಳೇಗೈದುದಿಲ್ಲವೆಂದರಿವುದು ॥ 3 ॥

ರಾಗ (ಸುಖಬುದ್ಧಿ) ದಿಂದ ಉಪಭೋಗ, ಶೃಂಗಾರ ಮತ್ತು ಆಗಮದಲ್ಲಿ ಹೇಳಿದ ಕಾಮ್ಯ ಕರ್ಮ ಸಮೂಹವೆಲ್ಲ ರಜೋಗುಣಧರ್ಮ. ಇವು ಆತ್ಮನಲ್ಲಿ ಏನೇ ಮಾಡಿದರೂ ಯಾವ ಕಾಲಕ್ಕೂ ಇಲ್ಲವೆಂದು ತಿಳಿಯಬೇಕು.

ವಾದ ದುರ್ವಿಷಯ ಪ್ರಮಾದ ಕಲುಷ ವಿಮೋ।
ಹೋದಯಾವಿದ್ಯಾದಿಕಂಗಳು॥
ಭೇದಿಸಾತ್ಮನೊಳಿಲ್ಲವಾ ತಮೋ ಗುಣಧರ್ಮ।
ವಾದುದೆ ನೈಜವಿದೆಲೆ ಸಾಧ್ವಿ॥ 4 ॥

ಎಲೆ ಸಾಧ್ವಿ, ವಾದ, ದುರ್ವಿಷಯ, ಅಪರಾಧ, ಪಾಪ, ಅತಿಮೋಹ ಹುಟ್ಟುವಿಕೆ, ಅವಿದ್ಯೆ (ತನ್ನ ತಾನರಿಯದಿರುವದು) ಮುಂತಾದವುಗಳು ತಮೋಗುಣ ಧರ್ಮಗಳು. ವಿಚಾರ ಮಾಡಲಾಗಿ ಇವು ಆತ್ಮನಲ್ಲಿಲ್ಲವೆಂಬುದೇ ಸತ್ಯ .

ಮನದನ್ನೆ ಕೇಳ್ಮೂರುತನು ಗುಣ ತನುವಿನೊ।
ಳೆನಿತು ಧರ್ಮಂಗಳುಂಟನಿತೆಲ್ಲ॥
ಘನ ಚಿತ್‌ಪರಮಾತ್ಮನೊಳಿಲ್ಲವೆಂತೆಂದೊಡೆ।
ತನುವಿಲಕ್ಷಣನಾದ ಕತದಿಂದೆ ॥ 5 ॥

ಮನಮೋಹಿನಿ ಕೇಳು, ತನುವಿನ ಮೂರುಗುಣಗಳು ಮತ್ತು ಆ ದೇಹದಲ್ಲಿ ಎಷ್ಟು ಧರ್ಮಗಳಿವೆಯೋ ಅವೆಲ್ಲವೂ ಪೂರ್ಣ ಚಿನ್ಮಯ ಪರಮಾತ್ಮನಲ್ಲಿಲ್ಲ ಏಕೆಂದರೆ ತನು ವಿಲಕ್ಷಣನಾಗಿ ಆತ್ಮನಿದ್ದಾನೆ.

ಪರಿವ ಮುಗಿಲ್ಗಳ ಪರಿಯನಿಂದುವಿಗೆಂಬ।
ಮರುಳಂತೆ ಸುಖ ದುಃಖಾದಿಗಳನು ॥
ಪರಿಕಿಸದವಿಕಾರದರಿವಿಗೆಂಬವರರೆ।
ಮರುಳರಲ್ಲವೆ ನೋಡು ಮೈತ್ರೇಯಿ ॥ 6 ॥

ಮೈತ್ರೇಯಿ, ಮುಗಿಲೋಡಿದರೆ ಚಂದ್ರನು ಓಡುವನು ಎಂದು ಹುಚ್ಚರು ಅನ್ನುವಂತೆ ಕರಣ ಧರ್ಮಗಳಾದ ಸುಖ ದುಃಖಾದಿಗಳನು ನಿರ್ವಿಕಾರವಾದ ಅರುವಿಗೆ ಆರೋಪಿಸುವವರು ಅರೆಹುಚ್ಚರೆಂದು ತಿಳಿ.

ಈ ಎಂಟನೆಯ ಸೂತ್ರದ ಆರು ಪದ್ಯಗಳಲ್ಲಿ ಆತ್ಮನಿಗೆ ಷಡೂರ್ಮಿ ಗುಣಧರ್ಮಗಳ ನಿರಾಕರಣೆ ಮಾಡಿದರು.

— ಇತಿ ನಿರೂಪಣೆ —

## 9ನೇ ಸೂತ್ರ

ಜಗವಿದೆಲ್ಲವು ಪುಸಿಯಾಗಿ ಕನಸಿನಂತೆ ।
ಮಗುಳೆ ತೋರ್ಪುದು ಬಾಧಿಸದು ನೋಡು ॥

ಆತ್ಮಜ್ಞಾನಿಗಳಿಗೆ ಈ ಜಗತ್ರಯವೆಲ್ಲವೂ ಕನಸಿನಂತೆ ಸುಳ್ಳಾಗಿರುವದು. ವಾಸನಾಬಲದಿಂದ ಮೊದಲಿನ ಹಾಗೆ ಜಗತ್ತುಮತ್ತೆತೋರಿದರೂ, ಪುನಃ ಅದು ಅವರಿಗೆ ಬಾಧಿಸದೆಂದು ತಿಳಿದುಕೊ.

ಮೈತ್ರೇಯಿ ಕೇಳವಸ್ಥಾತ್ರಯವಸೆವ ತ ।
ನುತ್ರಯವಾ ಜೀವತ್ರಯವೆಂಬ ॥
ಈ ತ್ರಿವಿಧಾತ್ಮಕವಪ್ಪುದು ತಾನೆ ಜ ।
ಗತ್ರಯವಿದು ಕಲ್ಪಿತವೆಯಕ್ಕು ॥ 1 ॥

ಮೈತ್ರೇಯಿ ಕೇಳು, ಮೂರುವಸ್ಥೆಗಳು, ಬಿಡದೆ ತೋರುವ ಮೂರು ಶರೀರಗಳು, ವಿಶ್ವಾದಿ ಮೂವರು ಜೀವರು ಇವೇ ಜಗತ್ರಯವು. ಅವು ಕಲ್ಪಿತವಾಗಿವೆ.

ಇದು ನಾಮಭೇದದಿಂದಿದು ರೂಪಭೇದದಿಂ ।
ದಿದು ಕರ್ಮಭೇದದಿಂದೆಸೆವುದು ॥
ಇದು ಜಗದ್ಭೇದತ್ರಯಾತ್ಮಕವರಿವಿನೊ ।
ಳಿದು ಪುಸಿ ಕಲ್ಪಿತವಹುದಾಗಿ ॥ 2 ॥

ಜಗತ್ತುನಾಮಭೇದ ರೂಪಭೇದ ಮತ್ತುಕರ್ಮಭೇದದಿಂದೊಡಗೂಡಿ ಮೂರು ಪ್ರಕಾರದಿಂದ ಶೋಭಿಸುವದು ಅದು (ಅದ್ವಯವಾದ) ಅರುವಿನಲ್ಲಿ ಕಲ್ಪಿತವಾಗಿ ರಂಜಿಸುವದು. ಆದ್ದರಿಂದ ಜಗವಿದು ಪುಸಿ.

ತಳಭಾವ ನೀಲತೆ ಮಲಿನತ್ವವೆಂಬಿವಾ ।
ಗಳು ನಭದೊಳು ಮಿಥ್ಯವೆನಿಪಂತೆ ॥
ಕಳಹಂಸಗಮನೆ ಕೇಳೀಜಗತ್ರಯವಿಂತು ।
ತಿಳಿದಂದು ತನ್ನೊಳು ಪುಸಿಯಕ್ಕು ॥ 3 ॥

ಕ್ಷಿತಿಜ, ನೀಲವರ್ಣ ಮತ್ತು (ಹೊಗೆ, ಧೂಳಿಕಣಗಳ) ಮಲೀನತೆ ಇವು ಆಕಾಶದಲ್ಲಿ ತೋರುವಾಗಲೇ ಹುಸಿಯಾಗಿರುವವು. ರಾಜಹಂಸದಂಥ ನಡಿಗೆಯುಳ್ಳ ಮೈತ್ರೇಯಿ ಕೇಳು, ಅರುವಿನಲ್ಲಿ ಜಗತ್ತು ಈ ಮೇಲೆ ಹೇಳಿದಂತೆ ಹುಸಿಯೆಂದು ತಿಳಿ.

ಪಗೆಗೆಟ್ಟು ನೆನಹಿಂಗಾ ಬಗೆದೋರುತಿರ್ಪಂತೆ।
ಜಗವಿಂತಿದೆಲ್ಲವು ಪುಸಿಯಾಗಿ॥
ಮಗುಳೆ ಮುನ್ನಿನ ಪರಿಯೊಳು ಕಾಣಪುದು ತನ್ನ।
ಬಗೆಯೊಳು ಬಾಧಿಸಲರಿಯದು ॥ 4 ॥

ಇಬ್ಬರ ಹಗೆತನವು ರಾಜಿಯಾದ ಬಳಿಕ ಇಲ್ಲದಾಗುವದು. ಪುನಃ ಕೂಡಿದಾಗ ಮೊದಲಿದ್ದ ವೈರಭಾವ ನೆನಪಿಗೆ ಬಂದರೂ ಅವರಿಬ್ಬರಿಗೆ ಏನೂ ಅನಿಸುವದಿಲ್ಲ. ಹಾಗೆಯೇ ಜಗವಿದೆಲ್ಲವೂ ಪುಸಿ, ತಾನು ಮಾತ್ರ ಸತ್ಯವೆಂದು ತಿಳಿದ ಬಳಿಕ ಮೊದಲಿನ ಹಾಗೆ ಜಗವು ಕಂಡರೂ ತನಗೆ (ಆತ್ಮ) ಬಾಧಿಸಲಾರದು.

ಕನಸಿನ ನಿಗಳ ಬಂಧನ ವೆಚ್ಚತ್ತರಿದನೊ।
ಳಿನಿತು ಬಾಧಿಸದೆ ಕಾಣಸುವಂತೆ॥
ನೆನಸಿನಖಿಳ ಪ್ರಪಂಚವಾ ಪರಿಯೊಳು।
ತನಗೆ ತೋರ್ಪುದು ಬಾಧಕವೆಯಲ್ಲ॥ 5 ॥

ಕನಸಿನಲ್ಲಿ ತನ್ನ ಕಾಲಿಗೆ ಹಾಕಿದ ಸಂಕೋಲೆಯ ಬಂಧನವು ಎಚ್ಚತ್ತ ಬಳಿಕ ಹೇಗೆ ಬಾಧಿಸುವದಿಲ್ಲವೊ ಹಾಗೆಯೆ ತನ್ನ ಅರುವಿನಲ್ಲಿ ಎಚ್ಚತ್ತ ಬಳಿಕ ನಿಖಿಳ ಪ್ರಪಂಚವು ಕನಸಿನಂತೆ ತನಗೆ ಪುಸಿಯಾಗುವದು. ಆದರೆ ಬಾಧಕವಲ್ಲ.

ಅದು ತನ್ನಿಂದವೆ ತಾನೆ ಕೆಡುವದವಿದ್ಯೆಯಿಂ।
ದೊದವಿದ ವಾಸನಾಪದವಾಗಿ॥
ಅದು ತನ್ನೊಳುರೆ ಕೆಟ್ಟು ಪೋಗಲಾ ಕೆಡದುಳಿ।
ದುದು ಶುದ್ಧ ಪರಬೊಮ್ಮವದು ತಾನೆ॥ 6 ॥

ತನ್ನನ್ನು ಬಾಧಿಸದೆ ಕಾಣಿಸುವ ಜಗತ್ತು ತನ್ನಿಂದ ತಾನೆ ಕೆಡುವುದು. ಯಾಕೆಂದರೆ ಪ್ರಪಂಚ ಪ್ರತೀತಿಯು ಅವಿದ್ಯೆಯಿಂದ ಜನಿಸಿದೆ. ಅವಿದ್ಯೆಯು ಜ್ಞಾನದಿಂದ ನಾಶವಾದ ಬಳಿಕ ಉಳಿದ ವಾಸನಾ ಪದವೆನಿಸುವ ತೂರ್ಯಾವಸ್ಥೆಯು ತನ್ನಲ್ಲಿ ಸಂಪೂರ್ಣಾಗಿ ಕೆಟ್ಟು ಹೋಗಲು ಕೆಡದೇ ಉಳಿದುದೇ ಪರಬ್ರಹ್ಮವು. ಅದೇ ತಾನು.

ಈ ಒಂಭತ್ತನೆಯ ಸೂತ್ರದ ಆರು ಪದ್ಯಗಳಲ್ಲಿ ಅರುವಿನ ಎಚ್ಚರದಲ್ಲಿ ಆತ್ಮನಿಗೆ ಜಗತ್ತಿನ ಬಾಧೆ ನಿರಾಕರಣ ಮಾಡಿದರು.

– ಇತಿ ನಿರೂಪಣೆ –

## 10ನೇ ಸೂತ್ರ

ಗಣಿಸಿದವಸ್ಥೆಮೂರಳಿದ ತುರಿಯವದು ।
ಗುಣಗಂಧಾವಸ್ಥೆಯಾತ್ಮನೆಯಲ್ಲ ॥

ಮನ ಮಾತುಗಳ ಗಣನೆಗೆ ಗೋಚರಿಸುವ ಅವಸ್ಥೆಗಳು ಮೂರು. ಈ ಮೂರನ್ನು ಆತ್ಮಜ್ಞಾನದಿಂದ ಅಲ್ಲಗಳೆದ ಮೇಲೆ ಉಳಿದ ಅವಸ್ಥೆಯೇ ತುರಿಯವು. ಅದೇ ಗುಣಗಂಧಾವಸ್ಥೆಯು. ಅದಾದರೂ ಆತ್ಮನಲ್ಲ.

ಜಗವಿದು ದಿಟವೆಂಬ ಬಗೆಯೆ ಜಾಗರಣ ವಾ ।
ಜಗವನು ಪುಸಿಯೆಂಬುದದು ಸ್ವಪ್ನ ॥
ಜಗವಿದನೇನೆಂದು ನೋಡದಿರವೆ ಸುಪ್ತಿ ।
ಮೃಗಮದಗಂಧಿ ತಿಳಿವುದಿಂತು ॥ 1 ॥

ಕಸ್ತೂರಿ ಮೃಗದಂತೆ (ನಿನ್ನೊಳಗೆ) ಸುವಾಸನೆ ಧರಿಸಿದ ಮೈತ್ರೇಯಿ, ಜಗವಿದು ಸತ್ಯವೆಂಬ ಭಾವನೆಯೆ ಜಾಗರಣೆಯು. ಈ ಜಗವು ಸುಳ್ಳೆಂದು ಹೇಳುವದೇ ಕನಸು. ಈ ಜಗವ ಕುರಿತು ಏನೊಂದು ನೋಡದ (ಅರಿಯದ) ಇರುವಿಕೆಯು ಸುಪ್ತಾವಸ್ಥೆ. ಈ ರೀತಿ (ವೃತ್ಯಾತ್ಮಕವಾಗಿ) ಮೂರವಸ್ಥೆಗಳನ್ನು ತಿಳಿಯುವವಳಾಗು.

ಇವು ಮೂರವಸ್ಥೆ ಬಾಹ್ಯವೆನಿಪ್ಪದೃಶ್ಯಂಗ ।
ಳಿವನುರೆ ತನಗನ್ಯವಹುದೆಂದು ॥
ವಿವರಿಸಿ ಕಾಣ್ಬಾತನಿಗೆ ದೃಷ್ಟನೆಂಬ ನಾ ।
ಮವು ಸಲ್ವುದಂಬುಜಾಯತ ನೇತ್ರೆ ॥ 2 ॥

ಕಮಲಾಕ್ಷಿಯೆ ಇವು ಮೂರು ಅವಸ್ಥೆಗಳು (ಪ್ರತ್ಯಗಾತ್ಮನಿಗೆ) ಬಾಹ್ಯ ದೃಶ್ಯಗಳು.ಇವು ತನಗೆ ಯಾವಾಗಲೂ ಅನ್ಯವಹುದೆಂದು ವಿಚಾರಿಸಿ ತಿಳಿಯುವವನಿಗೆ ದೃಷ್ಟ ಎಂಬ ಹೆಸರು ಸಲ್ಲುತ್ತದೆ ಎಂದು ತಿಳಿ.

ಈ ಯವಸ್ಥೆಗಳನಭ್ಯಾಸಯೋಗದೆ ತೋರ ।
ಲೀಯದಡಗಿಸಲಾ ದೃಷ್ಟಂಗೆ ॥
ಮಾಯಾಖ್ಯ ದೇಹವಾಗಳೆ ಸಮನಿಪುದೆಲೆ ।
ಪ್ರಿಯತಮೆ ನೋಡದಂತರ ದೃಶ್ಯ ॥ 3 ॥

ಅಭ್ಯಾಸ ಯೋಗದಿಂದ ಈ ಮೂರು ಅವಸ್ಥೆಗಳನ್ನು ತನಗೆ ತೋರದಂತೆ ಅಡಗಿಸಲಾಗಿ ದೃಷ್ಟನಿಗೆ ಮಾಯಾತನು ಪ್ರಾಪ್ತವಾಗುವದು. ಪ್ರಿಯತಮೆ ನೋಡಿದು ಅಂತರದೃಶ್ಯ.

ಮನವಿಡಿದರಿವ ಚೇತನವಚೇತನವನೊಂ।
ದಿನಿಸಿನಗಲದೆ ಮನಮಿವು ತೋರ ॥
ತನುವಿನಲ್ಲಿಯೆ ತೋರ್ಕೆಯಳಿದು ನಿಂದುದೆ ಮಾಯಾ।
ತನು ಧರ್ಮವದು ತುರ್ಯವೆನಿಪುದು ॥ 4 ॥

ಮಾಯಾ ಶರೀರವನ್ನು ಹೊಂದಿ ಅರಿಯುವ ದೃಷ್ಟಾ, ಆರುಹಿಸಿ ಕೊಳ್ಳುವ (ಅಚೇತನ) ಜಾಗ್ರಾದಿ ದೃಶ್ಯ ಮತ್ತು ಈ ಎರಡನ್ನು ಅಗಲದಿರುವ ಮನಸ್ಸು ಎಂಬ ಕರಣ (ದರ್ಶನ) ಈ ತ್ರಿಪುಟಿಯ ತೋರಿಕೆಯು, ಸ್ಥೂಲ ಶರೀರದಲ್ಲಿನಾಶವಾಗುವದು. ಬಳಿಕ ಉಳಿದುದೇ (ಈಶ್ವರನ) ಮಾಯಾ ತನುಧರ್ಮ ಎನ್ನುವ ತುರ್ಯವು.

ತೋರುವ ಕಪಟದ ಮೂರವಸ್ಥೆಗಳನು।
ತೋರುವ ರಿವನಡಗಿಸಲೇನು ॥
ತೋರದೆ ನಿಸ್ತರಂಗಾಂಬುಧಿಯಂತಿರೆ।
ತೋರುತಿರ್ಪುದು ತುರ್ಯಪದವದು ॥ 5 ॥

ಒಂದರೊಳಗೊಂದಿಲ್ಲದೆ ಕಾಣುವ ಕಪಟದ ಮೂರು ಅವಸ್ಥೆಗಳನ್ನು ಮತ್ತು ವಿಶ್ವಾದಿ ಜೀವರ (ಜಾಗ್ರಾದಿ ಅವಸ್ಥೆಗಳ) ಅನುಭವಗಳನ್ನು (ತೀವ್ರತರ ವೈರಾಗ್ಯದಿಂದ) ಅಡಗಿಸಲಾಗಿ ತೆರೆಗಳು ಇಲ್ಲದ ಸಮುದ್ರದ ಹಾಗೆ ಏನೊಂದು ತನಗೆ ಬೇರೆಯಾಗಿ ತೋರದೆ ತನಗೆ ತಾನಾಗಿ ಕಾಣುವದೇ ತುರ್ಯಪದವು.

ಗುಣಗಂಧಾವಸ್ಥೆ ನಿರ್ಗುಣ ಪದವಲ್ಲು ಮ।
ತ್ತೆಣಿಸಲಚ್ಚರಿಯಾಗಿ ಸತ್ವಾದಿ ॥
ಗುಣದಿಂದೆ ತೋರ್ಪವಸ್ಥಾತ್ರಯವಲ್ಲಿದು।
ಗುಣನಿಧಿ ತುರ್ಯವೆಂದೆನಿಪುದು ॥ 6 ॥

ಸದ್ಗುಣಗಳ ಖಣಿಯಂತಿರುವ ಮೈತ್ರೇಯಿ, ತುರ್ಯವೆಂದರೆ ಗುಣಗಂಧಾವಸ್ಥೆ. ಅದು ನಿರ್ಗುಣ ಪದವಾದ ಆತ್ಮವೂ ಅಲ್ಲ, ಸತ್ವಾದಿ ಗುಣ ಇರುವ ಜಾಗ್ರಾದಿ ಮೂರ ವಸ್ಥೆಗಳೂ ಅಲ್ಲ, ಇದು ಸಾಮಾನ್ಯರಿಗೆ ಕಾಣದಾಗಿ ಆಶ್ಚರ್ಯವಾಗಿದೆ. ಮೂರವಸ್ಥೆಗಳ ಆಚೆಗೆ (ಅಭ್ಯಾಸಿಗೆ) ತೋರುವ ನಾಲ್ಕನೆಯ ಅವಸ್ಥೆಯೇ ತುರ್ಯಾವಸ್ಥೆಯು.

ಅದು ಮಾಯೋಪಾಧಿಯೆಂಬುದವಸ್ಥಾವಾಸನಾ।
ಪದವಾ ಪ್ರಯತ್ನಂಗಳಿಲ್ಲದೆ ॥
ಉದಿಸುವ ಮೂರವಸ್ಥೆಗಳಳಿದುಳಿದಿರ।
ವದು ತಾನಭ್ಯಾಸ ಸಂಜನಿತವು ॥ 7 ॥

ತುರಿಯದಲ್ಲಿಮಾಯಾ ಉಪಾಧಿಯಿದೆ. (ಶ್ರವಣಾದಿ) ಅಭ್ಯಾಸದಿಂದ ಜಾಗ್ರಾದಿ ಮೂರವಸ್ಥೆಗಳು ನಾಶವಾದ ಬಳಿಕ ಉಳಿದ ವಾಸನಾ ಪದವೇ ತುರೀಯವು. ಮೂರವಸ್ಥೆಗಳು ಪ್ರಯತ್ನವಿಲ್ಲದೆ ಸಿಗುವವು. ಆದರೆ ನಾಲ್ಕನೇ ಅವಸ್ಥೆಯು ಅಭ್ಯಾಸ ಬಲದಿಂದ ಬರುವದು.

ಆ ಮಾಯಾ-ತನು ಧರ್ಮವಾ ನಿಜಾತ್ಮನಿಗಿಲ್ಲ।
ವಾ ಮಾಯೆಯನು ಕಾಣ್ಬಕತದಿಂದೆ ॥
ಆ ಮಾಯೆ ಕಾಣಸಿಕೊಂಬುದಾಗಿಯೆ ಪುಸಿ।
ಯಾ ಮಹಾ ದೃಶಿ ಮಾತ್ರವದು ಸತ್ಯ ॥ 8 ॥

ಆ ಮಾಯಾತನು ಧರ್ಮವು ನಿಜಾತ್ಮನಿಗೆ ಇರುವದಿಲ್ಲ. ಯಾಕೆಂದರೆ ಆತ್ಮನು ಮಾಯೆಯನ್ನು ನೋಡುವವನು ಮತ್ತು ಆ ಮಾಯೆ ಕಾಣಿಸಿಕೊಳ್ಳುವಂತಹದು ಆದ್ದರಿಂದ ಮಾಯೆ ಮಿಥ್ಯೆ ಆದರೆ (ಮಾಯಾ ಸಾಕ್ಷಿಯಾದ) ದೃಶಿಮಾತ್ರ (ಚಿನ್ಮಾತ್ರನು) ಸತ್ಯ.

ಪ್ರತ್ಯಗಾತ್ಮನ ಬುದ್ಧಿಕೃತ್ಯವೆ ತುರಿಯವ।
ದತ್ಯರ್ಥವೆನೆ ತೋರಿ ಕೆಡುವದು ॥
ಸತ್ಯವಿದೆಂದು ನಂಬೆಲೆ ನೀನು ಮೈತ್ರೇಯಿ।
ಶ್ರುತ್ಯನುಶಾಸನವಹುದಾಗಿ ॥ 9 ॥

ಪ್ರತ್ಯಗಾತ್ಮನೆ ತಾನೆಂಬ ನಿಶ್ಚಯ ಜ್ಞಾನವೇ ತುರಿಯವು. ಇದು ಅತಿ ಅರ್ಥವು ಅಂದರೆ ಪರಮಾರ್ಥವೇನೋ ಅನ್ನುವ ಹಾಗೆ ಕಂಡು ಕಾಣದಾಗುವದು. ಮೈತ್ರೇಯಿ ಇದು ಶೃತಿಯ ಅನುಶಾಸನ ಇರುವದರಿಂದ ಸತ್ಯವೆಂದು ನಂಬು.

ತೋರುವ ವಿಷಯವ ತೋರುವ ದೇಹವ।
ತೋರುವದರಿವರಿವೆಂದೆಂಬ ॥
ಮೂರುಮಾ ಜಾಗರಣಾದಿ ನಾಲ್ಕರೊಳಿಂತು।
ತೋರುತಿರ್ಪುದು ದೃಶಿಮಾತ್ರಕ್ಕೆ ॥ 10 ॥

ಎಲ್ಲವಸ್ಥೆಗಳೊಳಗಲ್ಲಲ್ಲಿ ಕಾಣ್ಬನಿ।
ಗಿಲ್ಲದೆ ಬೇರೆ ತನ್ಮಯವಾಗಿ ॥
ನಿಲ್ಲದೆ ತೋರ್ಪವು ಸುಖದುಃಖಾದಿಗಳವು।
ಬಲ್ಲವರ್ನೋಡಲ್ಕೆ ಪುಸಿಯಕ್ಕು ॥ 11 ॥

ಈ ಪ್ರಕಾರ ಅದು ಜಾಗೃತಾದಿ ನಾಲ್ಕೂ ಅವಸ್ಥೆಗಳಲ್ಲಿರುವದು ಮತ್ತು ದೃಶಿಮಾತ್ರವು (ಚಿನ್ಮಾತ್ರ) ಅರಿಯುವುದು ಇದಕ್ಕೆ ತೋರುವ (ಅರುಹಿಸಿಕೊಳ್ಳುವ) ತತ್ವ ಸಮೂಹವೆಂದರೆ ಸ್ಥೂಲ. ಸೂಕ್ಷ್ಮ, ಕಾರಣ ಮತ್ತು ಮಹಾಕಾರಣ ಈ ನಾಲ್ಕು ದೇಹಗಳು ಮತ್ತು ಅವುಗಳ ವಿಷಯಗಳು ಹಾಗೂ ಈ ದೇಹಗಳಲ್ಲಿದ್ದು (ಅಭಿಮಾನದಿಂದ) ಅರಿಯುವ ವಿಶ್ವ, ತೈಜಸ, ಪ್ರಾಜ್ಞ ಮತ್ತು ತೂರ್ಯ ಜೀವರುಗಳು.

ಜಾಗ್ರಾದಿ ಆಯಾ ಅವಸ್ಥೆಗಳಲ್ಲಿ ಕಾಣುವ ದೃಶ್ಯಗಳು ಅವುಗಳನ್ನು ನೋಡುವ ದೃಕ್‌ನಿಗೆ ಸಂಬಂಧವಿಲ್ಲ ಮತ್ತು ಅವು ಸ್ವತಂತ್ರವಾಗಿ ಇರಲರಿಯವು. ತನ್ಮಯವಾಗಿ ತೋರುವ ಸುಖ ದುಃಖಗಳ ಸ್ವರೂಪವೇನೆಂದು ಬಲ್ಲವರು ವಿಚಾರಿಸಲು ಅವೆಲ್ಲವೂ ಸುಳ್ಳೆನಿಸುವವು.

ಈ ಹತ್ತನೆಯ ಸೂತ್ರದ 11 ಪದ್ಯಗಳಲ್ಲಿ ಆತ್ಮನಿಗೆ ಮಾಯಾತನು ಧರ್ಮವನ್ನು ನಿರಾಕರಣೆ ಮಾಡಿದರು.

– ಇತಿ ನಿರೂಪಣೆ –

## 11ನೇ ಸೂತ್ರ

ತನ್ನ ವಿಶಿಷ್ಟಜಾಗರಣದಿಂದರಿಯಲ್ಕೆ ।
ಮುನ್ನಿನವಸ್ಥೆ ನಾಲ್ಕವು ಮಿಥ್ಯೆ ॥

ತನ್ನ ಶುದ್ಧ ಅರಿವಿನ ಎಚ್ಚರು ಎನಿಸುವ ''ವಿಶಿಷ್ಟ ಜಾಗರಣ'' ದಿಂದ ತಿಳಿಯಲು ಈ ಮೊದಲು ಹೇಳಿದ ನಾಲ್ಕು ಅವಸ್ಥೆಗಳು ಸುಳ್ಳೆಂದು ನಿಶ್ಚಯಿಸಬೇಕು.

ಆ ನಾಲ್ಕವಸ್ಥೆಯನಾ ನಾಲ್ಕು ತನುವನಂ।
ತಾ ನಾಲ್ಕು ತೆರೆದ ಜೀವರುಗಳ॥
ಆ ನಾಲ್ಕು ವಿಕೃತಿರೂಪಾಗಿ ಕೆಡುವದನ॥
-ನೂನಸಾಕ್ಷಿಕನಾತ್ಮನರಿವನು ॥ 1 ॥

ಆ ನಾಲ್ಕು ಅವಸ್ಥೆಗಳ ನಾಲ್ಕು ಶರೀರಗಳ ಮತ್ತುನಾಲ್ಕು ತೆರದ ಜೀವರುಗಳ ನಾಲ್ಕು ರೂಪದಿಂದ ವಿಕಾರ ಹೊಂದಿ ಕೆಡುವದನ್ನು ಸದಾ ಸಾಕ್ಷಿಕನಾಗಿ ಆತ್ಮನು ಅರಿಯುವನು.

ಶುದ್ಧಸಂವಿತ್ತಿನೆಚ್ಚರು ದೋರಲದರಿಂದೆ।
ಸಿದ್ಧಮಾದುದೆ ವಿಶಿಷ್ಟವೆನಿಪ್ಪ॥
ಶುದ್ಧಜಾಗರಣವದನು ನೋಡು ಮೈತ್ರೇಯಿ।
ಶುದ್ಧ ಬುದ್ಧಿಯೊಳು ನೀನೊಲವಿಂದೆ॥ 2 ॥

ಮೈತ್ರೇಯಿ, ಶುದ್ಧಸಂವಿತ್ತಿನ ಎಚ್ಚರು (ಸ್ಥಿತಪ್ರಜ್ಞೆ) ಅನುಭವವಾಗುವ ಅವಸ್ಥೆಗೆ ನಿರ್ಮಲವಾದ ವಿಶಿಷ್ಠ ಜಾಗರಣವೆನ್ನುವರು. ಅದನ್ನು ನಿನ್ನ ಶುದ್ಧಬುದ್ಧಿಯಲ್ಲಿ ಪ್ರೀತಿಯಿಂದ ಅನುಭವಿಸು.

ತರುಣಿ ವಿಶಿಷ್ಟಜಾಗರಣದೆ ನೋಡೆ ಜಾ।
ಗರಣಾದಿ ದೃಶ್ಯವೆಲ್ಲವು ಮಿಥ್ಯೆ॥
ನಿರುತದಿಂದವು ಮಿಥ್ಯೆಯಾಗಲಾದೃಷ್ಟನಾ।
ಪರಿಯೊಳು ಮಿಥ್ಯೆಯಾದೃಶಿ ಸತ್ಯ॥ 3 ॥

ತರುಣಿ ಶುದ್ಧ ಜಾಗರಣದಿಂದ ಅರಿಯಲಾಗಿ (ಮೊದಲಿನ) ಜಾಗರಣಾದಿ ದೃಶ್ಯವೆಲ್ಲವೂ ಯಾವಾಗಲೂ ಮಿಥ್ಯೆಯೆನಿಸುವವು. ಮಿಥ್ಯೆಯಾದ ಈ ದೃಶ್ಯವನ್ನು ತಿಳಿಯುವ ದೃಷ್ಟಾ ಪುರುಷನೂ ಮಿಥ್ಯೆಯೆಂದೇ ತಿಳಿ. ನಂತರ ಉಳುಮೆಯಾದ ದೃಶಿ ಮಾತ್ರನು ಸತ್ಯವೆಂದು ನಂಬು.

ಅಹಿ ಬುದ್ಧಿಯದು ನೇಣನಹಿ ಕೆಡೆ ಕೆಡುವಂತೆ।
ಮಹದಾದಿ ದೃಶ್ಯಂಗಳಿವಲ್ಲಿ॥
ಸಹವಿರದಳಿವನಾ ದೃಷ್ಟನುಮಾ ಸಾಕ್ಷಿ।
ಯಹ ನಿಜ ದೃಶಿಯುಳಿದಿಪ್ಪುದು ॥ 4 ॥

ಹಗ್ಗದಲ್ಲಿ ಹಾವಿನ ಭ್ರಮೆ ಹಗ್ಗದ ಜ್ಞಾನದಿಂದ ನಾಶವಾದ ಕೂಡಲೆ ಅದು ಹಾವೆಂದು ತಿಳಿದ ಚಿದಾಭಾಸನೂ ಕೆಡುವಂತೆ, ಮಹದಾದಿ ದೃಶ್ಯಗಳು ಅಳಿದ ಸಮಕಾಲದಲ್ಲಿ ದೃಷ್ಟನೂ ಇರದೆ ಅವುಗಳೊಡನೆ ತಾನೂ ಅಳಿಯುವನು. ಆದರೆ ಇದೆಲ್ಲವನ್ನೂ ಸಾಕ್ಷಿಯಾಗಿ ಬೆಳಗುವ ನಿಜ ದೃಶಿ (ಚಿನ್ಮಾತ್ರನು) ಉಳಿಯುವನು.

ಆತ್ಮನಿಗೆ ಸಕಲ ಸಾಕ್ಷಿತ್ವ ನಿರೂಪಣೆ ಮಾಡಿದರು.

– ಇತಿ ನಿರೂಪಣೆ –

## 12ನೇ ಸೂತ್ರ

**ಕನಸು ತಾನಿದಿರೆಂದು ಪುಸಿದೋರಿದಂತೆ ನೋ।**
**ಡನಿಮಿತ್ತವಾಯ್ತು ವಿಶ್ವಭ್ರಾಂತಿ ॥**

ಕನಸಿನಲ್ಲಿ ತಾನು (ಕನಸನ್ನು ರಚಿಸುವವ) ಮತ್ತು ಎದುರಿಟ್ಟು ಅರುಹಿಸಿಕೊಳ್ಳುವ ಕನಸಿನ ವಸ್ತುಗಳು ಸುಳ್ಳೆಂದು ತೋರಿದಂತೆ ವಿಶ್ವಭ್ರಾಂತಿ ತನ್ನಲ್ಲಿ ಅನಿಮತ್ತವಾಯಿತು ಎಂದು ತಿಳಿದಿಕೊ.

ಕನಸುಮಾ ದ್ರಷ್ಟನುಮನಿಮಿತ್ತವೆನೆ ಮಾನ।
ವನೊಳಿಲ್ಲದುದೆ ತೋರಿದಂದದಿ॥
ಮುನಿವಧುಜನಮುಖ್ಯೆ ಕೇಳಾತ್ಮನೊಳು ಕಲ್ಪಿ।
ತನುಮೀ ಜಗತ್ರಯಮುದಿಸಿತ್ತು ॥ 1 ॥

ಮಾನವನಲ್ಲಿ ಯಾವ ನಿಮಿತ್ತವಿಲ್ಲದೆ ಕನಸಿನ ದೃಶ್ಯಗಳು ಮತ್ತು ಅವನ್ನು ನೋಡುವ ದೃಷ್ಟನು ಇಲ್ಲದೆ ತೋರಿದಂತೆ, ಮುನಿಗಳ ಸತಿಯರಲ್ಲಿ ಶ್ರೇಷ್ಠಳಾದ ಮೈತ್ರೇಯಿ ಕೇಳು, ಆತ್ಮನಲ್ಲಿ ಮೂರು ಜಗತ್ತು ಮತ್ತು (ಜಗದ್ಬೀಜಮಯನಾದ) ಕಲ್ಪಿತ ಪುರುಷನು ಏಕಕಾಲಕ್ಕೆ ಹುಟ್ಟಿದರು.

ಗಣಸುಪಾದಾನ ಕಾರಣ ಸಹಕಾರಿ ಕಾ।
ರಣ ನಿಮಿತ್ತಾಖ್ಯ ಕಾರಣವೆಂಬ॥
ಗುಣವಂತೆ ಕಾರ್ಯಸಂಭವಕಿಂತು ಮೂರು ಕಾ।
ರಣ ಬೇಹುದೆಂದು ಪೇಳುವರೆಲ್ಲ॥ 2 ॥

ಸದ್ಗುಣಿಯೆ, ಆಲಿಸು, ಯಾವದೊಂದು ಕಾರ್ಯವಾಗಲಿಕ್ಕೆ ಉಪಾದಾನ ಕಾರಣ, ಸಹಕಾರಿ ಕಾರಣ ಮತ್ತು ನಿಮಿತ್ತಕಾರಣ ಎಂಬ ಮೂರು ಕಾರಣಗಳು ಇರಬೇಕೆಂದು ಎಲ್ಲರೂ ಹೇಳುವರು.

ಸುದತಿ ಕೇಳಿಲ್ಲಿ ಗ್ರಾಹ್ಯವೆಯುಪಾದಾನವ।
ಪ್ಪುದು ಸಹಕಾರಿ ಸಾಧನವದು॥
ಒದವಿದ ಕರ್ತೃ ನಿಮಿತ್ತವೆನಿಪುದಿದು।
ವಿದಿತವಖಿಳಕಾರ್ಯದುದಯಕ್ಕೆ॥ 3 ॥

ಚಲುವೆ, ಕಾರ್ಯದೊಡನೆ ಬೆರೆತುಕೊಂಡು ಇರುವ ಕಾರಣವೇ (ಗ್ರಾಹ್ಯವಾಗಿ) ಉಪಾದಾನವು. ಕಾರ್ಯಕ್ಕೆ ಸಾಧನವಾದ ಕಾರಣವು ಸಹಕಾರಿ ಮತ್ತು ಕಾರ್ಯ ಮಾಡುವ ಕರ್ತೃವೇ ನಿಮಿತ್ಯ ಕಾರಣನು. ಎಲ್ಲ ಕಾರ್ಯಗಳುತ್ಪತ್ತಿಗೆ ಈ ಮೂರು ಕಾರಣಗಳು ಇರಬೇಕು.

ಇನಿಯಳೆ ಗ್ರಾಹ್ಯವೆ ಮೃತ್ತಿಕೆ ಸಾಧನ।
ವೆನಿಪುದೆ ಚಕ್ರದಂಡಾದಿಕ॥
ವನಜಾಸ್ಯೆ ಕುಂಭಕಾರನೆ ಕರ್ತೃ ಘಟಕಾರ್ಯ।
ವಿನಿತರಿಂದಹುದೆಂದು ವಿಧಿಪರು॥ 4 ॥

ಪ್ರಿಯಳೆ (ಉದಾ) ಒಂದು "ಕೊಡ" ಮಾಡಲಿಕ್ಕೆ "ಮಣ್ಣು" ಉಪಾದಾನ ಕಾರಣ, ಚಕ್ರ, ಕೋಲು ಮುಂತಾದವುಗಳು ಸಹಕಾರಿ ಕಾರಣ ಮತ್ತು ಕುಂಬಾರ ನಿಮಿತ್ತ ಕಾರಣ, ಕಮಲ ಮುಖಿಯೆ, ಈ ಮೂರು ಕಾರಣಗಳಿಂದ "ಕೊಡ" ಎಂಬ ಕಾರ್ಯ ಉಂಟಾಗುವದೆಂದು ನಿರ್ಣಯಿಸುವರು.

ಇದು ಜಗವಾಕಾರಣತ್ರಯ ಮೊಂದರಿಂ।
ದುದಿಸಿದುದಿಲ್ಲಾತ್ಮ ಪದದೊಳು॥
ವಿದಿತವಾ ಕಲ್ಪಿತಭ್ರಾಂತಿ ಜನಿತಮಾಗಿ।
ಮದಗಜಗಮನೆ ಭಾವಿಸಿ ನೋಡು॥ 5 ॥

ಮದ್ದಾನೆ ನಡಿಗೆಯುಳ್ಳ ಮೈತ್ರೇಯಿ, ಆತ್ಮ ಪದದಲ್ಲಿ ಈ ಮೂರು ಕಾರಣಗಳಲ್ಲಿ ಒಂದಾದರೂ ಸಿದ್ಧವಾಗುವದಿಲ್ಲ ಆದ್ದರಿಂದ ಜಗವಿದು ಆತ್ಮನಿಂದ ಉತ್ಪತ್ತಿಯಾಗಿಲ್ಲ, ಆದರೆ ಆ ಕಲ್ಪಿತ ಪುರುಷನ ಭ್ರಾಂತಿಯಿಂದ ಈ ಜಗವು ಜನಿತವಾದುದೆಂದು ವಿಚಾರಿಸಿ ತಿಳಿ.

ಪರಮನದ್ವಯನಕ್ರಿಯಾತ್ಮನಪ್ಪುದರಿಂದೆ।
ವಿರಚಿಪನಲ್ಲವಾ ಕಲ್ಪಿತ॥
ಪುರುಷನೆ ಪುಸಿಯಾಗಿ ಮಾಡಲರಿಯ ನಿಂತು।
ಪರಿಕಿಸೆ ಜಗವಿದುಪುಸಿದೋರ್ಕೆ ॥ 6 ॥

ಪರಮಾತ್ಮನು ಸ್ವಗತಾದಿ ಭೇದರಹಿತನು (ಅದ್ವಯನು) ನಿಷ್ಕ್ರೀಯನು. ನಿರವಯವನು, ಇರುವದರಿಂದ ಈ ಜಗವನ್ನು ವಿರಚಿಸಲಾರನು. ಆ ಕಲ್ಪಿತ ಪುರುಷನಾದರೊ ಹುಸಿಯಾಗಿ ಇರುವದರಿಂದ ಜಗವನ್ನು ಮಾಡಲರಿಯನು. ಆದ್ದರಿಂದ ವಿಚಾರ ಮಾಡಲಾಗಿ ಜಗವಿದು ಕನಸಿನಂತೆ ಪುಸಿದೋರಿಕೆ ಇದೆ.

– ಇತಿ ಆತ್ಮನಲ್ಲಿ ಜಗನ್ಮಿಥ್ಯತ್ವ ನಿರೂಪಣೆ –

## 13ನೇ ಸೂತ್ರ

ಪರದೊಳು ಭಿನ್ನಾಭಿನ್ನಾದಿರೂಪದೆ ಪೇಳ ।
ಲರಿದು ತತ್‌ಕಲ್ಪಿತಪುರುಷನ ॥

ಪರಮಾತ್ಮನಲ್ಲಿ ಆ ಕಲ್ಪಿತ ಪುರುಷನು (ಪರಮನಿಗೆ) ಭಿನ್ನನಾಗಿ, ಅಭಿನ್ನನಾಗಿ, ಭಿನ್ನಾಭಿನ್ನ ರೂಪದಿಂದ ತೋರುತ್ತಾನೆಂದು ಹೇಳಲು ಬಾರದು (ಕಲ್ಪಿತ ಪುರುಷನು ಪುಸಿಯೆಂಬ ಭಾವ)

ಪರಿಕಿಸಾ ಬ್ರಹ್ಮಕ್ಕೆ ಪರವಪರವೆನಿಪ್ಪ।
ವೆರಡು ರೂಪುಂಟು ಮೇಣವರಲ್ಲಿ॥
ನಿರುಪಾಧಿಕವೆ ಪರ ರೂಪು ಸೋಪಾಧಿಯ।
–ಪರರೂಪವಹುದು ಚಂದನಗಂಧಿ ॥ 1 ॥

ಶ್ರೀ ಗಂಧದ ವಾಸನೆ ಬೀರುವ ಮೈತ್ರೇಯಿ, ವಿಚಾರ ಮಾಡಲಾಗಿ ಆ ಪರಬ್ರಹ್ಮನಿಗೆ ಪರ ಮತ್ತು ಅಪರ ಎಂಬೆರಡು ರೂಪಗಳುಂಟು. ಪರ ರೂಪು ನಿರುಪಾಧಿಕವು. ಅಪರ ರೂಪು ಸೋಪಾಧಿಕವು ಇರುವದೆಂದು ನೀನು ತಿಳಿಯುವುದು.

ಪುಸಿಯಲ್ಲವಾ ನಿರುಪಾಧಿಯು ಸೋಪಾಧಿ।
ಪುಸಿಯಾದವಿದ್ಯೆಯು ಶಬಲವು॥
ಶಶಿಮುಖಿ ಚೋದ್ಯವಂತದು ಬೋಧ್ಯವದು।
ವಿಚಾರಿಸಲು ಕಲ್ಪಿತಪುರುಷನೆಯಕ್ಕು ॥ 2 ॥

ಚಂದ್ರಮುಖಿಯೆ, ನಿರುಪಾಧಿಕ ರೂಪು ಎಂದೂ ಪುಸಿಯಾಗದು. ಸೋಪಾಧಿಕ ರೂಪು ಎಂದೂ ಸತ್ಯವಾಗದು. ಪುಸಿಯಾದ ಸೋಪಾಧಿಗೆ ಅವಿದ್ಯೆ ಶಬಲ (ಸಗುಣ

ಬ್ರಹ್ಮ ಬೋಧ್ಯ ಎಂದು ಅನೇಕ ನಾಮಗಳುಂಟು. ವಿಚಾರಿಸಲು ಈ ನಾಮಾನ್ವಿತನು ಕಲ್ಪಿತ ಪುರುಷನೇ ಇರುವನು.

ಪರನ ಚಿಚ್ಛಕ್ತಿ ತಲ್ಲೀಲೆ ಲಿಂಗಾಕೃತಿ।
ಪರನಾದವೆಂಬಿವು ಮೊದಲಾದ॥
ಪರಿಕಲ್ಪಿತಾಖ್ಯವನೇಕಕ್ಕೆ ಕಲ್ಪಿತ।
ಪುರುಷನೋರ್ವನೆ ವಿಷಯನುಮಕ್ಕು ॥ 3 ॥

ಪರಮಾತ್ಮನ ಚಿಛ್ಛಕ್ತಿ, ತತ್‌ಲೀಲೆ, ಲಿಂಗಾಕೃತಿ, ಪರನಾದ ಮೊದಲಾದ ಕಲ್ಪಿತ ನಾಮಗಳು ಆ ಕಲ್ಪಿತ ಪುರುಷನೋರ್ವನಿಗೆ ಇವೆ.

ಅಂಧಕರಂಟೆ ದುಂದುಭಿ ಸೂರ್ಪ ಮುಸುಲದಂ।
ತೆಂದುಭಾವಿಸಿ ಬೇರೆ ತಿಳಿಯಲ್ಕೆ॥
ಒಂದು ಗಜವೇ ಲಕ್ಷ್ಯವಾದಂತೆ ಮತಿ ಭೇದ।
ದಿಂದೆ ನಾನತ್ವಮೋರ್ವನಿಗಕ್ಕು ॥ 4 ॥

ನಾಲ್ಕು ಮಂದಿ ಕುರುಡರು ಕೂಡಿ ಒಂದು ಆನೆಯನ್ನು ಪರೀಕ್ಷಿಸುತ್ತ "ಇದು ನಗಾರಿ" "ಇದು ಮೊರ" "ಇದು ಒಣಕೆ" "ಇದು ಕಂಬ" ಎಂದು ಹೆಸರಿಡುವಂತೆ, ಬುದ್ಧಿಭೇದದಿಂದ ಒಬ್ಬ ಕಲ್ಪಿತ ಪುರುಷನಿಗೆ ನಾನತ್ವ ಪ್ರಾಪ್ತವಾಗಿದೆ.

ಕಲ್ಪನೆ ಪಿಡಿದೋರ್ವ ಕಲ್ಪಿತ ಪುರುಷನೆ।
ಕಲ್ಪಿತ ನಾಮವನೇಕವ॥
ಕಲ್ಪನೆಯಿಂದ ವೈದಿದನು ಪುತ್ರಾದಿ ವಿ।
ಕಲ್ಪನೆಯುಳ್ಳ ಮಾನವನಂತೆ ॥ 5 ॥

ಒಬ್ಬ ಮಾನವನು ತನ್ನ ಪರಿವಾರದ ಭಾವ ಭೇದದಿಂದ ಮಗನಿಗೆ ತಂದೆಯೆನಿಸಿ, ಹೆಂಡತಿಗೆ ಗಂಡನೆನಿಸಿ, ತಾಯಿಗೆ ಮಗ ಎನಿಸಿ, ಸೊಸೆಗೆ ಮಾವನೆನಿಸಿ, ಹಲವು ಬಗೆಯಾಗಿ ಕರೆಯಲ್ಪಡುವಂತೆ ಓರ್ವ ಕಲ್ಪಿತ ಪುರುಷನೇ ಅನೇಕ ಪ್ರಕಾರದ ಕಲ್ಪಿತ ನಾಮರೂಪ ಪ್ರಪಂಚವಿಡಿದು ಚೇಷ್ಟಿಸುವನು.

ಒಂದೆ ಪ್ರಕಾರಮಾದರುವಿನೊಳೀ ಪೆರ್ಚು।
ಕುಂದಿನ ಬಗೆ ಸಮವಲಿಗೆಯ॥
ಒಂದಿ ಪೀವರ ನಿಮ್ನ ಕುಚ ನಾಭಿಯುಳ್ಳವ।
ಳೆಂದೆನಿಸುವ ಚಿತ್ರದೋಲಿರ್ಕು ॥ 6 ॥

ಒಂಧ್ದು ಸಮಪಾತಳಿಯ ಹಲಗೆಯ ಮೇಲೆ ಚಿತ್ರಕಲಾವಿದನು ಓರ್ವ ನಾರಿಯ ಚಿತ್ರ ತೆಗೆದಿದ್ದಾನೆ. ಅವಳ ಮೊಲೆಗಳು ಉಬ್ಬಿದಂತೆ ಅವಳ ಹೊಕ್ಕಳ ತಗ್ಗಾದಂತೆ ಕಾಣುತ್ತವೆ. ಇದೇ ರೀತಿ ಒಂದೇ ಪ್ರಕಾರದ ಅರುವಿನಲ್ಲಿ ಹೆಚ್ಚು ಕಡಿಮೆ ಬಗೆಗಳು ಕಾಣುವವು.

ನಿಜ ತತ್ವವೆನೆ ರಾಜಿಪನು ಕಲ್ಪಿತಾತ್ಮನೀ।
ತ್ರಿಜಗದೊಳರಿವನ್ನೆವರಮಿಂತು ॥
ಬೆಜವಾಡ ನ್ಯಾಯಪರೀಕ್ಷೆಗೆ ಮುನ್ನಲಾ।
ದ್ವಿಜನೆ ತಾನೆನಿಪ ರಕ್ಕಸನಂತೆ ॥ 7 ॥

ಬೆಜವಾಡ ನ್ಯಾಯ(ಟಿ)ದಲ್ಲಿ(ಇದೊಂದು ಕತೆ) ಪರೀಕ್ಷೆಗೆ ಮೊದಲು ರಕ್ಕಸನು ಬ್ರಾಹ್ಮಣನಂತೆ ನಟಿಸುತ್ತಿರುವನು. ನ್ಯಾಯಾಲಯದಲ್ಲಿ ಪರೀಕ್ಷಿಸಲು ರಾಕ್ಷಸನು ಮಾಯವಾಗುವನು. ಇದೇ ರೀತಿ ಕಲ್ಪಿತ ಜೀವಾತ್ಮನು ತ್ರಿಜಗದಲ್ಲಿ ಅರಿಯುವವರೆಗೆ ತಾನೇ ನಿಜತತ್ವವೆಂಬಂತೆ ರಾಜಿಸುವನು (ಅರಿದ ಬಳಿಕ ಸುಳ್ಳಾಗುವನು).

ಜನನಿಯ ಗರ್ಭದರ್ಭಕನವೋಲಪ್ಪಿನ।
ತನುಜನಂತೊಳಹೊರಗಿರುತಿರ್ಪ ॥
ನೆನಲಾಗದವಿರಳಾನಂತ ಚಿದ್ಘನದೊಳಂ।
ಗನೆ ಪುಸಿಕಲ್ಪಿತಜೀವನ ॥ 8 ॥

ತಾಯಿ ಗರ್ಭದಲ್ಲಿ ಮಗನಿರುವಂತೆ ಕಲ್ಪಿತನು ಅವಿರಳ ಅನಂತ ಪರಮಾತ್ಮನೊಳಗೆ ಇರುವನೆಂದು ಅನ್ನಬಾರದು. ಅಥವಾ ತಾಯಿಯ ಕಂಕುಳದಲ್ಲಿ ಅಪ್ಪಿಕೊಂಡ ಕೂಸಿನಂತೆ ಆ ಪರಮಾತ್ಮನ ಹೊರಗೆ ಕಲ್ಪಿತ ಜೀವನಿರುವನು, ಎಂದೂ ಹೇಳಬಾರದು. (ಏಕೆಂದರೆ) ಮೈತ್ರೇಯೀ ಕಲ್ಪಿತ ಪುರುಷನು (ತ್ರಿಕಾಲದಲ್ಲಿ) ಪುಸಿ, ಅಂದರೆ ತಾನಿಲ್ಲದೆ ತೋರುವನು.

[ ಟಿಪ್ಪಣಿ :– ಬೆಜವಾಡ ನ್ಯಾಯ– ಬೆಜವಾಡದಲ್ಲಿ ಒಬ್ಬ ಬ್ರಾಹ್ಮಣ. ಆತನ ಹೆಂಡತಿ ರೂಪವತಿಯಾಗಿದ್ದಳು. ಒಂದು ದಿನ ಬ್ರಾಹ್ಮಣನು ಕಾಶಿ ಕ್ಷೇತ್ರ ನೋಡಲು ಹೋದ. ಅದೇ ದಿನ ಅವರ ಮನೆ ಎದುರಿನ ಮರದಲ್ಲಿ ವಾಸಿಸುತ್ತ ಇದ್ದ ಒಬ್ಬ ರಾಕ್ಷಸನು ಕೆಲ ವೇಳೆಯಾದ ನಂತರ ಆ ಬ್ರಾಹ್ಮಣನ ರೂಪದಿಂದ ಬಂದು ಬಾಗಿಲ ತಟ್ಟಿದ. ಹೆಂಡತಿ ಬಾಗಿಲು ತೆಗೆದಳು. "ಏನರಿ ? ಯಾಕೆ ತಿರುಗಿ ಬಂದಿರಿ"? ಎಂದು ಕೇಳಿದಳು. ವೇಷಧಾರಿ ರಕ್ಕಸನು ಬ್ರಾಹ್ಮಣನ ಧ್ವನಿಯಲ್ಲಿಯೆ ಏನೋ ಸುಳ್ಳು ನೆವ ಹೇಳಿ, ಅವಳ ಗೂಡ ಅದೇ ಮನೆಯಲ್ಲಿ ಅವಳ ಪತಿಯಂತೆ ನಟಿಸುತ್ತ ವ್ಯವಹರಿಸಿದ. ಬ್ರಾಹ್ಮಣನು ಕಾಶಿಯಿಂದ ಮರಳಿ ಬಂದ. ಭಯ ಭೀತನಾಗಿ ನ್ಯಾಯಾಧೀಶರಿಗೆ ಮೊರೆ ಹೋದ. ಇಬ್ಬರಲ್ಲಿ ನಿಜವಾದ ಗಂಡನು ಯಾರು ಪರೀಕ್ಷಿಸಬೇಕಾಯಿತು. ಒಬ್ಬನು ವೇಷಧಾರಿ ಬ್ರಾಹ್ಮಣನಿದ್ದು, ವೇಷ–ಭಾಷೆ ಬದಲಾಯಿಸುವ ರಕ್ಕಸನಿರಬೇಕೆಂದು ನ್ಯಾಯಾಧೀಶನು ಮನದಲ್ಲಿ ಯೋಚಿಸಿ, ನಿಜವಾದ ಬ್ರಾಹ್ಮಣನ ಮನೆಯಿಂದ ಸುಮ್ಮನೆ ಕೆಲವು ಹಳೆ ದಾಖಲು (ಪತ್ರ) ತರಿಸಿದ. ಅದರಲ್ಲೊಂದು ಕಾಗದ ಪತ್ರ ಓದಿದಂತೆ ನಟಿಸಿ, ಒಂದು ಖಾಲಿ ದೊಡ್ಡಗಾಜಿನ ಬಾಟಲಿ ತರಿಸಿ ಹೇಳಿದ. "ಬ್ರಾಹ್ಮಣರೇ, ನಿಮ್ಮ ಮನೆತನದವರು ಗಾಳಿಯಾಗಿ ಈ ಬಾಟ್ಲಿಯಲ್ಲಿ ಪ್ರವೇಶಿಸುವ ವಿದ್ಯೆ ಕಲಿತಿದ್ದರು. ಹೂ! ಒಳಸೇರಿರಿ," ಎಂದ ನ್ಯಾಯಾಧೀಶ. ರಾಕ್ಷಸನು ಗಾಳಿಯಾಗಿ ಒಳ ಸೇರಿದ ನಿಜ ಬ್ರಾಹ್ಮಣ ಸುಮ್ಮನಿದ್ದ, ಕೂಡಲೇ ರಾಕ್ಷಸನಿದ್ದ ಬಾಟಲಿಯನ್ನು ಸೀಲ ಮಾಡಿ ಕಲ್ಲು ಕಟ್ಟಿ ಸಮುದ್ರದಲ್ಲೆಸೆಯಲಾಯಿತು. ಬ್ರಾಹ್ಮಣ ಸತಿಯೊಡನೆ ನ್ಯಾಯಾಧೀಶನ ಉಪಕಾರ ಸ್ಮರಿಸುತ್ತ ಮನೆಗೆ ಹೋದ. ಇದೇ ರೀತಿ ಕಲ್ಪಿತ ಪುರುಷನು ವಿಚಾರ ಮಾಡುವವರೆಗೆ (ಬ್ರಾಹ್ಮಣನಂತೆ ನಟಿಸುತ್ತ) ಪರಮಾತ್ಮನಂತೆ ವ್ಯವಹರಿಸುವನು. ]

ಚನ್ನೆ ವೇದಾನುಯುಕ್ತಿಯೊಳು ಪರೀಕ್ಷಿಸೆ।
ನನ್ನಿಯೆನಿಸುವ ಪರಮನೊಳು ॥
ಭಿನ್ನನು ಮೇಣಭಿನ್ನನು ಭಿನ್ನಾಭಿನ್ನನೆಂ।
ದೆನ್ನಬಾರದು ಪುಸಿ ಜೀವನ ॥ 9 ॥

ಚಲುವೆ, ವೇದ ಉಪನಿಷತ್ತುಗಳ ಯುಕ್ತಿ ಪ್ರಮಾಣಗಳಿಂದ ಪರೀಕ್ಷಿಸಲು (ತ್ರಿಕಾಲದಲ್ಲಿ) ಸತ್ಯವಾಗಿರುವ ಪರಮನಲ್ಲಿ ಪುಸಿಯಾದ ಜೀವನಿಗೆ ಭಿನ್ನನು ಅಭಿನ್ನನು ಅಥವಾ ಭಿನ್ನ ಅಭಿನ್ನ ಎಂದು ಯಾವ ಹೆಸರನ್ನೂ ಇಡಬಾರದು.

ಭಿನ್ನವೆ ತಮವಭಿನ್ನವೆ ಸತ್ವವೆನಿಪುದು।
ಭಿನ್ನಾಭಿನ್ನವೆ ರಜೋಗುಣವಕ್ಕು॥
ಉನ್ನಿಸಿ ನೋಡಲೀ ಕಾಂಡತ್ರಯಂಗಳು।
ಚಿನ್ನಿಧಿಯೆನಿಪ ತನ್ನೊಳು ಮಿಥ್ಯೆ ॥ 10 ॥

ತಮೋಗುಣಯುಕ್ತ ಕರ್ಮಕಾಂಡಿಗೆ ಕಲ್ಪಿತ ಜೀವನು ಪರಮನಿಂದ ಭಿನ್ನನಾಗಿ ತೋರುವನು. ಸತ್ವಗುಣಿಯಾದ ಜ್ಞಾನಕಾಂಡಿಗೆ ಕಲ್ಪಿತನು ಅಭಿನ್ನನು ಎಂದು, ಮತ್ತು ರಜೋಗುಣಮಯ ಉಪಾಸನಾಕಾಂಡಿಗೆ ಆತನು ಭಿನ್ನಾಭಿನ್ನನು ಎಂದು ತೋರುವನು. ಆದರೆ ಜ್ಞಾನನಿಧಿ ಎನಿಪ ತನ್ನಲ್ಲಿ (ಪರಮನಲ್ಲಿ) ವಿಚಾರಿಸಿ ನೋಡಿದರೆ ಈ ಕಾಂಡತ್ರಯಗಳು ಮಿಥ್ಯೆ.

ಭಿನ್ನನುಮೆಂದು ಕೆಲರು ವಿಚಾರಿಸಿ।
ಭಿನ್ನಾಭಿನ್ನನುಮೆಂದಭಿನ್ನನುಮೆಂದು ॥
ಬಿನ್ನಣದಿಂದೆ ತರ್ಕಿಪರೀವಿಕಲ್ಪನೆ।
ತನ್ನೊಳು ಪುಸಿಯೆಂದು ತಿಳಿವನ್ನ॥ 11 ॥

ಕಲ್ಪಿತನು ಭೇದರೂಪನೆಂದು, ಅಭೇದ ರೂಪನೆಂದು ಮತ್ತೆ ಭೇದಾಭೇದ ರೂಪನೆಂದು ತಮ್ಮ ತಮ್ಮ ಪ್ರೌಢಿಮೆಯಿಂದ ವಾದಿಸುವರು. ಈ ವಿಕಲ್ಪನೆಗಳು ತಮ್ಮಲ್ಲಿ ಪುಸಿಯೆಂದು ತಿಳಿಯುವವರೆಗೆ ಅವರು ತರ್ಕಿಸುವರು.

ಉಳ್ಳವನೊಳು ನೋಡಲಿಲ್ಲದವನು ಭಿನ್ನ।
ನಲ್ಲವಭಿನ್ನ ರೂಪನುಮಲ್ಲ॥
ಚಲ್ಲೆಕಂಗಳೆ ಕೇಳು ಭಿನ್ನಾಭಿನ್ನಾತ್ಮಕ।
ನಲ್ಲವರಿಯೆ ತಾನಿಲ್ಲದನಾಗಿ ॥ 12 ॥

ವಿಶಾಲನೇತ್ರವುಳ್ಳವಳೆ, ಕೇಳು, ಉಳ್ಳ ಪರಮನಲ್ಲಿ ಇಲ್ಲದ ಕಲ್ಪಿತ ಪುರುಷನು ಭೇದ ರೂಪನೂ ಅಲ್ಲ(ಏಕೆಂದರೆ) ಸರಿಯಾಗಿ ವಿಚಾರಿಸಲು ಆತನೆಂದೂ ಇಲ್ಲದನು.

ಉಳ್ಳ ಸ್ಥಾಣುವಿನೊಳಗಿಲ್ಲದ ಚೋರನಂ।
ತಿಲ್ಲವಾ ಕಲ್ಪಿತ ಪುರುಷನು ॥
ಉಳ್ಳ ಪರಮಾತ್ಮಕನೊಳು ತೋರಿ ದಿಟಕೆ ತಾ।
ನಿಲ್ಲವೆನಿಪನು ನೋಡಿದು ತತ್ತ್ವ ॥ 13 ॥

ಉಳ್ಳ ಮೋಟಮರದಲ್ಲಿ ಇಲ್ಲದ ಚೋರನಂತೆ, ಉಳುಮೆಯಾದ ಪರಮಾತ್ಮನಲ್ಲಿಲ್ಲದ ಕಲ್ಪಿತ ಪುರುಷನು ದಿಟದಂತೆ ತೋರಿದರೂ ವಿಚಾರಿಸಲಾಗಿ ಇಲ್ಲವೆನಿಸುವನು. ಇದೇ ತತ್ತ್ವ.

ಎನ್ನೆಗಮೀ ಪರಿಯೊಳು ನೆರೆ ಪುಸಿಯೆಂದು।
ತನ್ನ ತಾನರಿಯದ ಮುನ್ನವೆ ॥
ನನ್ನಿಯೆಂಬಂತೆಸೆದಿರ್ಪನರಿಯೆ ಬಳಿ।
ಕನ್ನೀನಾನೆಂಬುದೆಲ್ಲವು ಮಿಥ್ಯೆ ॥ 14 ॥

ಈ ರೀತಿ ಜೀವತ್ವವು ಅತ್ಯಂತಾಭಾವವು. ಆದರೂ ತನ್ನ ತಾನು ಯಥಾರ್ಥವಾಗಿ ಅರಿಯದ ಮೊದಲು ಈ ಜೀವಭಾವ ನಿಜವೆಂಬಂತೆ ಮೆರೆಯುವದು. ವಿಚಾರಿಸಲು ನಾನು–ನೀನು ಎಂಬುದೆಲ್ಲವೂ ಮಿಥ್ಯೆ.

ಪುಸಿಯಾಗೆ ತನ್ನಿಂದ ತಾನುಮೀ ಜಗಮಿಂತು।
ಶಶಿಮುಖಿ ನಿಜಸತ್ಯಮುಳಿವುದು ॥
ಒಸೆದು ನೀನದರಿಂದವನು ಮತಿಮುಟ್ಟಿಭಾ।
ವಿಸು ವೇಷವಿಭ್ರಾಂತ ನಟನಂತೆ ॥ 15 ॥

ಚಂದ್ರಮುಖಿ ಆಲಿಸು, ಈ ಪ್ರಕಾರ ಕಲ್ಪಿತನು ಮತ್ತು ಕಲ್ಪಿತ ಜಗತ್ತು ಪುಸಿಯಾಗಲು ನಿಜವಾಗಿ ಸತ್ಯವಾದ ಪರಮನು ಮಾತ್ರ ಉಳಿಯುವನು. (ಆದ್ದರಿಂದ) ಆ ಕಲ್ಪಿತನು ''ವೇಷ ವಿಭ್ರಾಂತ ನಟನಂತೆ'' ಚೇಷ್ಟಿಸುವನು ಎಂದು ದೃಢಮತಿಯಿಂದ ತಿಳಿಯಬೇಕು.

ತಾನೆ ಸೃಜಿಸಿ ನೇಣನದರೊಳಗಹಿಯನು।
ತಾನೊಮ್ಮೆ ಕಲ್ಪಿಸಿ ಭೀತಿಸಿ ॥
ತಾನೆ ತಿಳಿದು ಭೀತಿಯಳಿದು ಬಳಿಕ ತನ್ನ।
ತಾನೆ ಪದಳಮಿರ್ಪ ನರನಂತೆ ॥ 16 ॥

ತಾನೇ ಹುಟ್ಟಿಸಿ ಹಗ್ಗದಲ್ಲಿ ತಾನು ಕಲ್ಪಿಸಿದ ಹಾವಿಗೆ ತಾನೇ ಹೆದರಿ, ಬಳಿಕ ತಾನೇ ತಿಳಿದು ಭಯಬಿಟ್ಟು ತನ್ನಷ್ಟಕ್ಕೆ ತಾನು ಸಂತೋಷದಿಂದಿರುವ ನರನಂತೆ, ಜೀವನದಲ್ಲಿ ತೋರುವ ಸುಖ–ದುಃಖವೆಲ್ಲವೂ ಜೀವನ (ತನ್ನ) ಕಲ್ಪನಾ ಸೃಷ್ಟಿಯಿದೆ ಎಂದು ತಿಳಿದು ನೆಮ್ಮದಿಯಿಂದಿರುವನು.

ತನ್ನೊಳಾದಜ್ಞಾನವದರಿಂದೆ ಸಂಸೃತಿ ।
ಯಂ ನಿಜವೆಂದು ದುಃಖವನೈದಿ ॥
ತನ್ನನರಿದು ದುಃಖವನೀಗಿ ಕಲ್ಪಿತ ।
ನುನ್ನತಿಯನು ತಾನೆ ಪಡುವನು ॥ 17 ॥

ಅಜ್ಞಾನದಿಂದ ಸಂಸಾರವು ಸತ್ಯವೆಂದು ತಿಳಿದು ಜೀವನು ದುಃಖ ಪಡುವನು (ಗುರುಮುಖೇಣ) ತನ್ನ ತಾನರಿದ ಬಳಿಕ ಅದೇ ಕಲ್ಪಿತನು ದುಃಖವನ್ನು ನೀಗಿ ಆತ್ಮೋನ್ನತಿಯನ್ನು (ಮುಕ್ತಿಯನ್ನು) ತಾನೆ ಪಡೆಯುವನು.

ಕನ್ನಡಿಯೊಳು ತೋರ್ಪ ತನ್ನ ಮಿಥ್ಯಾರೂಪಿ ।
ನಿನ್ನಾಡೆ ತನ್ನನೆ ಕಾಣ್ಬಂತೆ ॥
ಮುನ್ನವೆ ಪುಸಿಯೆನಿಸುವ ಜೀವಾತ್ಮಕನಿಂದೆ ।
ತನ್ನ ತಾನರಿವನಾ ಪರಮಾತ್ಮ ॥ 18 ॥

ಕನ್ನಡಿಯಲ್ಲಿ ತೋರುವ ಮಿಥ್ಯಾ ಪ್ರತಿಬಿಂಬದಿಂದ ತನ್ನ ನಿಜ ಬಿಂಬವನ್ನು ಕಾಣುವಂತೆ, ಮೊದಲಿನಿಂದ ಪುಸಿಯಾದ ಜೀವಾತ್ಮನಿಂದ ಪರಮಾತ್ಮನು ತನ್ನ ತಾನೇ ಅರಿವನು.

ಆತ್ಮನಲ್ಲಿ (ಪರಮನಲ್ಲಿ) ಕಲ್ಪಿತ ಜೀವತ್ವ ನಿರಾಕರಣ ಮಾಡಲಾಯಿತು.

– ಇತಿ ನಿರೂಪಣೆ –

## 14ನೇ ಸೂತ್ರ

ಪರಮನದ್ವಯನಾಗಿ ಸನ್ನಿಧಿಯಲ್ಲವಾ ।
ಪುರುಷಸನ್ನಿಧಿ ಚೇಷ್ಟೆಯಖಿಳವು ॥

ಪರಮಾತ್ಮನು ಅದ್ವಯನು (ಪರಿಪೂರ್ಣನು). ಅವನ ಸನ್ನಿಧಾನದಲ್ಲಿ (ದೃಕ್–ದೃಶ್ಯರೂಪ) ಚೇಷ್ಟೆಯು ಇರಲಾರದು. ಕಲ್ಪಿತ ಪುರುಷನ ಸನ್ನಿಧಾನದಿಂದ ಅಖಿಳ ಚೇಷ್ಟೆಯು ಸಂಭವಿಸುವದು.

ಇಲ್ಲದ ಪುರುಷನಿಂದಿಲ್ಲದ ಕರಣಾಳಿ ।
ಗಿಲ್ಲದ ಚೇಷ್ಟೆಸಮನಿಪುದೆ ॥
ಉಳ್ಳಂತೆ ಪೇಳೆನಗರಿವಂತಿದನು ತಳು ।
ವಿಲ್ಲದೆ ಸಕಲಸನ್ಮುನಿವಂದ್ಯ ॥ 1 ॥

ಸಕಲ ಸನ್ಮುನಿಗಳಿಂದ ವಂದ್ಯನಾದ ಪತಿದೇವನೆ, (ಮೈತ್ರೇಯಿಯ ಪ್ರಶ್ನೆ) ಇಲ್ಲದ ಪುರುಷನಿಂದ ಇಲ್ಲದ ತನು–ಮನ ಮೊದಲಾದ ಕರಣ ಸಮೂಹಕ್ಕೆ ಇಲ್ಲದ ಚೇಷ್ಟೆ

ಉಂಟಾಗುವದೇ ? ಇದು ಉಳ್ಳಂತೆ ತೋರುತ್ತದೆ. ಇದು ಹೇಗೆ ? ನನಗೆ ತಿಳಿಯುವಂತೆ ತಡಮಾಡದೆ ಹೇಳು.

ಎನೆ ಕೇಳ್ದು ಮುನಿಪನಾ ವನಿತೆಯಂ ಬೋಳೈಸಿ।
ಮನದನುರಾಗವಲರುತಿರೆ ॥
ವಿನಯದಿಂದರುಪಿದನಖಿಳಮಿದಜ್ಞಾನ।
ಜನಿತಮಾಗಿಯೆ ಮಿಥ್ಯೆಯಹುದೆಂದು ॥ 2 ॥

ಈ ರೀತಿ ನುಡಿಯುವದನ್ನು ಕೇಳಿ ಮುನಿಯು (ಯಾಜ್ಞವಲ್ಕ್ಯ) ತನ್ನ ವನಿತೆಯನ್ನು ಸಂತೈಸುತ್ತ ಮನದ ಅನುರಾಗವೆಂಬ ಪುಷ್ಪವು ಅರಳುತ್ತಿರಲು ಅಜ್ಞಾನ ಜನಿತಮಾದ ಅಖಿಳ ವ್ಯವಹಾರವು ಮಿಥ್ಯವಾಗಿರುವದು ಎಂದು ವಿನಯದಿಂದ ತಿಳಿಸಿದನು.

ತರಳಾಕ್ಷಿ ಕಲ್ಪಿತಪುರುಷ ಸನ್ನಿಧಿಯಿಂದೆ।
ದೊರಕೊಂಬುದಖಿಳ ಮಿಥ್ಯಾ ಜಾಡ್ಯ ॥
ಕರಣಾದಿ ವಿಷಯವಿಸರಕೆ ತದ್ವ್ಯವಹೃತಿ।
ನಿರುತದಿಂದರಿಯಲಂತದು ಪುಸಿ ॥ 3 ॥

ಚಂಚಲ ನೇತ್ರಗಳುಳ್ಳ ಮೈತ್ರೇಯಿ, ಕಲ್ಪಿತ ಪರುಷನ ಸನ್ನಿಧಿಯಿಂದ ಜಡವಾದ, (ತನು–ಮನ ಮುಂತಾದ) ಕರಣ ಹಾಗೂ ವಿಷಯ ಸಮೂಹಕ್ಕೆ ಯಾವತ್ತೂ ವ್ಯವಹಾರವು ಮಿಥ್ಯವಾಗಿ (ಕಲ್ಪಿತವಾಗಿ) ಸಂಭವಿಸುವದು. ಆದರೆ ಸರಿಯಾಗಿ ಅರಿಯಲು ಆ ವ್ಯವಹಾರವೆಲ್ಲ ಸದಾವಕಾಲದಲ್ಲಿ ಸುಳ್ಳಾಗಿರುವದು.

ಅರಿವು ಪರಮನಾಗಿ ಮರವೆ ಕಲ್ಪಿತವಾಗಿ।
ಯರಿವಿನೊಳ್ಮರವೆ ಘಟಿಸದಾವ ॥
ತೆರದೊಳು ತೋರಮುಡಿಯಳೆ ಮೈತ್ರೇಯಿ ನೇ।
ಸರನೊಡವೆರೆಯದ ತಮದಂತೆ ॥ 4 ॥

ದೊಡ್ಡ ಕೇಶ–ಮುಡಿಯುಳ್ಳ ಮೈತ್ರೇಯಿ, ಅರಿವೇ ಪರಮನು. ಮರವೆ ಕಲ್ಪಿತವು. ಸೂರ್ಯನೊಡನೆ ಕತ್ತಲೆಯು ಎಂದೂ ಬೆರೆಯದಂತೆ, ಅರಿವಿನಲ್ಲಿ ಮರೆವೆಯು ಯಾವ ರೀತಿಯಿಂದಲೂ ಸಂಭವಿಸಲಾರದು.

ಪರಮನದ್ವಯ ಪೂರ್ಣನಹುದಾಗಿ ಸನ್ನಿಧಿ।
ದೊರಕೊಳ್ಳಲರಿಯದು ಕಲ್ಪಿತ ॥
ಪುರುಷನ ಸನ್ನಿಧಿಯಲ್ಲದೆ ಬೇರೊಂದು।
ಪರಿ ದೊರಕೊಳ್ಳದಿಂತಿದು ಸತ್ಯ ॥ 5 ॥

ಪರಮನು ಅದ್ವಯನು. ಪೂರ್ಣನು. ವ್ಯವಹಾರಕ್ಕೆ ಇವನ ಸನ್ನಿಧಿ ದೊರಕೊಳ್ಳಲಾರದು. ಕಲ್ಪಿತ ಪುರುಷ ಸನ್ನಿಧಿಯಲ್ಲಿ ದೊರಕೊಂಬುದು. ಅವನನ್ನು ಬಿಟ್ಟು ಬೇರೊಬ್ಬರಿಂದ ಈ ವ್ಯವಹಾರವು ಪ್ರಾಪ್ತವಾಗಲಾರದು. ಇದು ಸತ್ಯವೆಂದು ನಂಬು.

ಕನಸಿನಯಸ್ಕಾಂತವಾ ಕನಸಿನ ಲೋಹ।
ವನು ಚಲಿಯಿಸುವಂತೀಸಕಲಕ್ಕೆ॥
ವನರುಹಲೋಚನೆ ಮೈತ್ರೇಯಿ ಕಲ್ಪಿತ।
ನೆನಿಪನು ಚೇಷ್ಟಾದಿಭೀಜನು॥ 6 ॥

ಕನಸಿನ ಲೋಹಚುಂಬಕವು ಕನಸಿನ ಕಬ್ಬಿಣ ತುಂಡನ್ನು ಅಲ್ಲಾಡಿಸುವಂತೆ, ಕಮಲದಂತಹ ಕಣ್ಣುಳ್ಳ ಮೈತ್ರೇಯಿ ಈ ಸಕಲ ವ್ಯವಹಾರದ ಚೇಷ್ಟೆಗೆ ಕಲ್ಪಿತ ಪುರುಷನೇ ಮೂಲ ಬೀಜನೆನಿಸುವನು.

ಇಲ್ಲದ ಭ್ರಾಮಕಮುಳ್ಳಂತೆ ಕನಸಿನೊ।
ಳಿಲ್ಲದ ಲೋಹಚಲನವನು॥
ಮೆಲ್ಲಡಿಯಳೆ ಮಾಳ್ಪುದಂತೆ ಕನಸಿನಂತಿ।
ದೆಲ್ಲವಾ ಪುರುಷಸನ್ನಿಧಿ ಚೇಷ್ಟೆ॥ 7 ॥

ಮಂದಗಮನೆ ಮೈತ್ರೇಯಿ, ಇಲ್ಲದವಗೆ ಇಲ್ಲದ ಭ್ರಮೆ ಇರುವಂತೆ ತೋರುವದು, ಕನಸಿನಲ್ಲಿ ಇಲ್ಲದ ಲೋಹಕ್ಕೆ ಇಲ್ಲದ ಅಯಸ್ಕಾಂತದಿಂದ ಇಲ್ಲದ ಚಲನೆಯು ಉಳ್ಳಂತೆ ಕಾಣುವ ಹಾಗೆ ಕಲ್ಪಿತ ಪುರುಷ ಸನ್ನಿಧಿಯಲ್ಲಿ ಎಲ್ಲ ಚೇಷ್ಟೆಗಳು ತೋರುವವು.

ಕನಸಿನ ಪುರುಷಂಗೆ ಕನಸಿನಂಗನೆಯಿಂದೆ।
ಕನಸಿನ ಪುಲಿಯಿಂದೆ ಸುಖ-ದುಃಖ॥
ಜನಿಸುವಂತೀ ನೆನಸಿನ ವಿಷಯಾಳಿಗ।
ಳನುಭವವಹುದು ಕಲ್ಪಿತನಿಂದೆ॥ 8 ॥

ಕನಸಿನ ಪುರುಷನಿಗೆ ಕನಸಿನ ಸ್ತ್ರೀಯಿಂದ ಸುಖವೂ ಮತ್ತು ಕನಸಿನ ಹುಲಿಯಿಂದ ದುಃಖವೂ ಪ್ರಾಪ್ತವಾಗುವಂತೆ ಈ ಜಾಗರಣದ ವಿಷಯ ಸಮೂಹವು ಕಲ್ಪಿತ ಪುರುಷನಿಂದ ಜನಿತವಾಗಿ ಆ ಸಕಲ ವಿಷಯಾನುಭವವೂ ಅದೇ ಕಲ್ಪಿತನಿಗೆ ಉಂಟಾಗುವದು.

ಇಲ್ಲದ ತನ್ನಿಂದಮಿಲ್ಲದ ತಾನಾಗು।
ತಿಲ್ಲದಖಿಳತೋರಿಕೆಗಳನು॥
ಉಳ್ಳಂತೆ ಬಗೆವನಾ ಕಲ್ಪಿತನರಿದೊಡೊಂ।
ದಿಲ್ಲವಾತೋರ್ಕೆ ಚಿತ್ತಲ್ಲದೆ॥ 9 ॥

ಆ ಕಲ್ಪಿತನು ಇಲ್ಲದ ತನ್ನಿಂದ ಇಲ್ಲದ (ವಿಷಯಗಳೆ) ತಾನಾಗುತ್ತ ಇಲ್ಲದ ಯಾವತ್ತೂ ಇಂದ್ರಿಯಗಳ ಚೇಷ್ಟೆಯನ್ನು ಉಳ್ಳಂತೆ ಬಗೆಯುವನು (ಭ್ರಮಿಸುವನು). ತನ್ನ ತಾನರಿದ ಬಳಿಕ ಆ ಕಾಲ್ಪನಿಕ ಪುರುಷನಿಲ್ಲ ಮತ್ತು ತೋರಿಕೆಗಳಲ್ಲಿ ಒಂದೂ ಇಲ್ಲವು. ಆದುದರಿಂದ ತೋರಿಕೆಗಳು ತೋರಿಕೆಗಳಲ್ಲಿರುವ ದೃಷ್ಟನು ಚಿದ್ರೂಪಕ್ಕೆ ಭಿನ್ನವಲ್ಲ. ಅಂದರೆ ಸಕಲ ಕಾಲ್ಪನಿಕ ತೋರ್ಕೆ. ಚಿತ್ ಅಥವಾ ಅರಿವೆ ಇರುವದು.

ಬಗೆಯಿಂದೆ ತಾನಾಗಿ ಬಗೆಯಿಂದಿಳೆಯನಾಳಿ।
ಬಗೆಯಿಂದೆ ಬಳಿಕಲಾ ಬಗೆಗೆಟ್ಟು॥
ಬಗೆಯಿಂದ ತನ್ನ ತಾನಹನೆಂದು ಮೈತ್ರೇಯಿ।
ಬಗೆ ಸೋಮಶರ್ಮಜನಕನಂತೆ ॥ 10 ॥

ಮೈತ್ರೇಯಿ, ಅನುರಾಗದಿಂದಾಲಿಸು. 'ಸೋಮಶರ್ಮಜನಕನ ಕತೆಯಂತೆ (ಇದನ್ನು ಟಿಪ್ಪಣೆಯಲ್ಲಿ ಕೊಡಲಾಗಿದೆ). ಕಲ್ಪಿತ ಪುರುಷನ ವಂಶಾವಳಿಯು ನಗೆಯ ಸಾಗರವಾಗಿದೆ. ಬ್ರಹ್ಮಚಾರಿ ಬ್ರಾಹ್ಮಣ. ಕನಸಿನಲ್ಲಿ ಗ್ರಹಸ್ಥನಾಗಿ ಸೋಮಶರ್ಮನೆಂಬ ಮಗನ ತಂದೆಯಾದ, ಏನೇನೊ ಆದ. ಆದರೆ ಎಚ್ಚರಾದ ಬಳಿಕ ಏನೂ ಆಗಿಲ್ಲ, ತಾನು ತನ್ನಂತೆ ಒಬ್ಬನೇ ಇದ್ದಾನೆ. ಈ ಕತೆಯ ಪುರುಷನಂತೆ, 'ಬಗೆಯಿಂದ ಅಖಿಳಾಕಾರದಿ ತೋರಿದ. ಬಗೆಗಳು ಕೆಡಲು ತಾನೋರ್ವನೆ ಇರುವ.' ಎಂದೆಂದು, ಎಲ್ಲ ಜೀವರಾಶಿಯಲ್ಲಿ ಅಚ್ಚಳಿಯದ ಅರುವಿನಿಂದ ಇರುವವ ತಾನೊಬ್ಬನೇ. ಆದರೆ ಅಜ್ಞಾನದಿಂದ 'ಅಹಂ, ಇದಂ' ಎಂಬ ನಾನಾ ಬಗೆ (ಭಾವನೆ)ಗಳನ್ನು ತನ್ನೊಳು ತಾನೆ ಸೃಜಿಸಿ, ತನ್ನ ಬಗೆಯ (ಭ್ರಾಮಕ) ಜಗತ್ತಿಗೆ ತಾನೆ ಒಡೆಯನಾಗುವನು. ಕನಸಿನಂತಿರುವ ಬಗೆಗಳು ನಾಶವಾಗಲು ಮುನ್ನಿನಂತೆ ತಾನು ತನ್ನಲ್ಲಿ ಓರ್ವನೇ ಇರುವನು, ತಾನು ತನ್ನಂತೆ ಇರುವನು.

ಧರೆಯೊಳುದಿಸಿ ವೇಣು ಕದಳಿ ನಾಳಾದಿಕ।
ಏರದೆ ಫಲಿಸಿ ತಾನೇ ಕೆಡುವಂತೆ॥
ಪರನೊಳೊಗೆದು ಕಲ್ಪಿತನು ಬೋಧಮಾಗಲಂ।
ತರಿಸದೆ ತನ್ನ ತಾನಳಿವನು ॥ 11 ॥

ಭೂಮಿಯಲ್ಲಿ ಹುಟ್ಟಿದ ಬಿದಿರು, ಬಾಳೆ, ತಾವರೆ ಮೊದಲಾದವುಗಳ ದೇಟು (ಬೊಡ್ಡೆ) ಫಲಿಸಿದ ಬಳಿಕ ತಾವಿರದೆ ನಾಶವಾಗುವಂತೆ, ಪರಮಾತ್ಮನಲ್ಲಿ ಜನಿಸಿದ ಕಲ್ಪಿತ

[ ಟಿಪ್ಪಣಿ :– ಸೋಮಶರ್ಮ ಜನಕನ ಕಥೆ– ಒಬ್ಬ ದರಿದ್ರ ಬ್ರಹ್ಮಚಾರಿ ದುರ್ಭಿಕ್ಷಕಾಲದಲ್ಲಿ ಭಿಕ್ಷೆ ಬೇಡಿ ಸ್ವಲ್ಪ ಅರಳಿಟ್ಟು ಸಂಪಾದಿಸಿ, ಅದನ್ನು ಪಕ್ಕದಲ್ಲಿಟ್ಟು ಮಲಗಿದ. ತನ್ನ ಕನಸಿನಲ್ಲಿ ಕೆಳಗಿನಂತೆ ನಾನಾ ಕಲ್ಪನೆಗಳನ್ನು ಮಾಡಿದ. 'ಈ ಹಿಟ್ಟನ್ನು ಮಾರುವೆ, ಬಂದ ಹಣದಿಂದ, ವ್ಯಾಪಾರ ಮಾಡುತ್ತ ಬಹು ಶ್ರೀಮಂತನಾಗುವೆ. ರಾಜಕನ್ಯೆಯನೆ ಮದುವೆಯಾಗುವೆ. ಪಡೆದ ಮಗನಿಗೆ ''ಸೋಮಶರ್ಮ''ನೆಂದು ಹೆಸರಿಡುವೆ. ಒಂದು ದಿನ ನನ್ನ ಮಗನು ಬಹಳವಾಗಿ ಅಳುವದನ್ನು ಕೇಳಿ, ಹೆಂಡತಿಯನ್ನು ಕರೆಯುವೆ. ಆಕೆ ಬರಲೇಯಿಲ್ಲ, ನನಗೆ ಸಿಟ್ಟು ಬಂತು. ಕಾಲಿನಿಂದ ಆಕೆಯನ್ನು ಹೀಗೆ ಒದೆಯುತ್ತೇನೆ, ಎಂದು ಭಾವಿಸುತ್ತ ಒದ್ದನು. ಅವನ ಕಾಲು ಪಾತ್ರೆಯಲ್ಲಿಟ್ಟ ಅರಳಿಟ್ಟಿಗೆ ಬಡಿಯಿತು. ಹಿಟ್ಟು ಮಣ್ಣುಪಾಲಾಯಿತು. ಎಚ್ಚತ್ತು ನೋಡಿದ, ಅವನ ಬಗೆಗಳೆಲ್ಲ ಬಯಲಾದವು. ಇದೇ ರೀತಿ, ಇರುವ ಅರಿವ ತನ್ನಲ್ಲಿ ಇಲ್ಲದ ಕಲ್ಪಿತ ಪುರುಷನ ಸನ್ನಿಧಿಯಲ್ಲಿ ಪುಸಿಯಾದ ಪ್ರಪಂಚದ ಉತ್ಪತ್ತಿ ಸ್ಥಿತಿ, ಲಯವು ತೋರುವದು. ತನ್ನ ತಾನು ಅರಿದಾಕ್ಷಣ ನಾನಾ ಬಗೆಗಳು ಬಯಲಾಗುವವು, ತಾನೋರ್ವನೆ ಉಳಿಯುವನು. ]

ಪುರುಷನು (ಶ್ರೀ ಗುರುವಿನ ಉಪದೇಶದಿಂದ) ತನ್ನ ನಿಜ ತಾನು ತಿಳಿದ ಬಳಿಕ ತಡಮಾಡದೆ ನಾಶಹೊಂದುವನು.

ಸುರಪದವೆಳಸಿ ಕುರುಕ್ಷೇತ್ರದೊಳು ನಿಜ।
ನರಭಾವವನು ಜನಮುಳಿವಂತೆ ॥
ಪರರೂಪದೊಳು ಮಿಗಿಲರಿವಿಂದೆ ಜೀವಂಗೆ।
ಒರಿದು ತನ್ನಳಿವಂಗೀಕೃತವಕ್ಕು ॥ 12 ॥

(ತನ್ನ ನಾಶಕ್ಕೆ ತಾನು ಹೇಗೆ ಒಡಂಬಡುವನು ಎಂದು ಶಂಕಿಸಿದರೆ ದೃಷ್ಟಾಂತ ಮುಖದಿಂದ ಉತ್ತರಿಸುವರು) ಯುದ್ಧದಲ್ಲಿ ವೈರಗಳೊಡನೆ ಕಾದಾಡಿ ಮಡಿದರೆ ತನಗೆ ವೀರ (ಸುರಪದ) ಸ್ವರ್ಗ ಪ್ರಾಪ್ತವಾಗುವದೆಂದು ನಂಬಿ ಯೋಧನು ತನ್ನ ಪ್ರಾಣತ್ಯಾಗ ಮಾಡಲು ಸಿದ್ಧನಾಗುವದು ಅಥವಾ ದತ್ತಕ ಪುತ್ರನು ತನ್ನ ಮೊದಲಿನ ತಂದೆ ತಾಯಿಗಳನ್ನು ಮರೆತು ಹೆಚ್ಚಿನ ಭೋಗೈಶ್ವರ್ಯಕ್ಕಾಗಿ ದತ್ತಕ ಪಿತನ ಮನೆಯಲ್ಲಿ ವಾಸ ಮಾಡುವನು. ಇದೇ ರೀತಿಜೀವನು ಪರಮನಲ್ಲಿ ಮಿಗಿಲಾದ, ನಿತ್ಯವಾದ ಅರಿವು ಆನಂದ ಪ್ರಾಪ್ತಿಗಾಗಿ ಸ್ವನಾಶಕ್ಕೆ ಒಡಂಬಡುವನು.

ಕನಸಿನ ತೋರ್ಕೆಯಾ ಕನಸನು ಕಾಣ್ಬಾತ।
ನನಿತುಮೆಚ್ಚರಿನೊಳು ಪುಸಿಯಂತೆ ॥
ನೆನಸಿನ ವಿಷಯವಾ ದ್ರಷ್ಟನುಮೆಂಬ ಭಾ।
ವನೆ ಮಿಥ್ಯೆ ತನ್ನ ತಾನರಿದಂದು ॥ 13 ॥

ಕನಸಿನ ತೋರಿಕೆ ಮತ್ತು ಆ ಕನಸು ಕಾಣುವವನು ಎಚ್ಚತ್ತ ಬಳಿಕ ಪುಸಿಯಾಗುವಂತೆ, ನೆನಸಿನ (ಜಾಗ್ರದ) ದೃಶ್ಯ ವಿಷಯಗಳು ಮತ್ತು ಅವುಗಳನ್ನು ನೋಡುವ ದೃಷ್ಟನು ನಿಜ ಸ್ವರೂಪಜ್ಞಾನವಾದ ತಕ್ಷಣ ದೃಕ್ ದೃಶ್ಯವೆಂಬ ಭಾವನೆ ಮಿಥ್ಯೆ ಎನಿಸುವದು.

– ಆತ್ಮನಲ್ಲಿ ದೃಗ್ ದೃಶ್ಯಭ್ರಾಂತಿ ನಿರಸನ ನಿರೂಪಿಸಲಾಯಿತು–

– ಇತಿ ನಿರೂಪಣೆ –

## 15ನೇ ಸೂತ್ರ

ತಾನುಳ್ಳೊಡುಂಟು ತೋರುವ ಜಗವಿದು ನೋಡು ।
ತಾನಿಲ್ಲವರಿದಂದು ನಿಜದಲ್ಲಿ ॥

ನೋಡುವವ ತಾನು (ದೃಷ್ಟಾ) ಇರುವವರೆಗೆ ತೋರುವ (ದೃಶ್ಯ) ಜಗವಿರುವದು. ಮೈತ್ರೇಯಿ, ವಿಚಾರಿಸಿ ನೋಡು ನಿಜಸ್ವರೂಪವರಿತ ಕೂಡಲೇ (ಅದ್ವಯವಾದ) ನಿಜದಲ್ಲಿ (ತನ್ನಲ್ಲಿ) ತಾನೆಂಬಭಾವ ಇಲ್ಲವು. (ತಾನೆ ಅದ್ವಯಾತ್ಮನೆಂಬ ಭಾವ).

ಇಂತು ತೋರುವ ಜಗದ್ಭ್ರಮೆಯುಮಾ ತನ್ನಹಂ।
ಭ್ರಾಂತಿಯುಮೆಂಬುಭಯವ್ರು ಮಿಥ್ಯೆ ॥
ಕಾಂತೆ ಮೈತ್ರೇಯಿ ಭಾವಿಸಿ ನೋಡೆ ಬಳಿಕೇನೊಂ।
ದುಂ ತೋರದರಿವೊಂದೆ ಪರಮಾರ್ಥ ॥ 1 ॥

ಪ್ರಿಯ ಮಡದಿ ಮೈತ್ರೇಯಿ, ದೃಕ್–ದೃಶ್ ಭ್ರಮೆ ಅಹಂಭ್ರಮೆ ಮತ್ತು ಜಗದ್ಭ್ರಮೆಗಳು ತೋರುವದರಿಂದ, ಹಾಗೂ ಅಡಗುವದರಿಂದ ಮಿಥ್ಯೆ, ಎಂದು ವಿವೇಕಿಸಿ ತಿಳಿ. ಆ ಬಳಿಕ ಏನೊಂದು ತೋರದ ಅರಿವೊಂದೆ ಉಳಿವುದು. ಅದೇ ಪರಮಾರ್ಥ' (ಸತ್ಯವಾಗಿ ಉಳಿದ ಪರವಸ್ತುವೆ ತಾನೆಂಬ ಭಾವ).

ತಾನುಂಟು ಜಗಮುಂಟು ತಾನಿಲ್ಲದಿರೆ ಜಗ।
ವೇನುಮಿಲ್ಲಾಗ್ಗಿ ವಿಚಾರಿಸೆ ॥
ತಾನಿಲ್ಲವದರಿಂದೀ ತ್ರಿಜಗದೊಳಿಂತೆಂಬು।
ದೇನೇನು ನುಡಿಯಲೊಂದಿಸಿಲ್ಲ ॥ 2 ॥

''ತಾನುಂಟು ಜಗಮುಂಟು'' ವಿಚಾರಿಸಲು ತಾನಿಲ್ಲವಾದುದರಿಂದ ಜಗವು ಮೊದಲೇ ಇಲ್ಲ. ತಾನೇ ಇಲ್ಲದಿರಲು (ಅಹಂಭ್ರಮೆ ನಿರಸನವಾಗಲು) ಈ ಮೂರು ಲೋಕಗಳಲ್ಲಿ ಅಂತು ಇಂತೆಂದು ನುಡಿಯಲಿಕ್ಕೆ ಯಾವುದೂ ಕಿಂಚಿತ್ ಉಳಿಯಲಿಲ್ಲ. (ಮನ ವಾಣಿಗಳಿಗೆ ವಿಷಯನಾಗದ ಅದ್ವಯಾತ್ಮನು ಅಂದರೆ ತಾನೊಬ್ಬನೇ ಉಳಿಯುವನೆಂಬ ಭಾವ.)

ತೋರುವ ದೃಶ್ಯದೃಕ್ಕುಗಳೆಂಬುಭಯಮಿಂತು।
ತೋರದ ಕತದಿಂದೆ ಪುಸಿಯೆಂದು ॥
ಬೇರೆ ನುಡಿಯಲುಂಟೆ ತಿಳಿ ಬಳಿಕೇನೊಂದು।
ತೋರದ ಚಿನ್ಮಯಾತ್ಮನೆ ಸತ್ಯ ॥ 3 ॥

ತೋರುವ ದೃಶ್ಯದೃಕ್ಕುಗಳೆರಡೂ ವಿಚಾರಿಸೆ ನಿವೃತ್ತಿಯಾಗುವವು. ಪುನಃ ತೋರಲರಿಯವು. ಆ ಬಳಿಕ ಇವು ಪುಸಿ ಎಂದು ಬೇರೆ ಹೇಳಬೇಕೆ ? ಆದುದರಿಂದ ಏನೊಂದೂ ತೋರದ (ಅಡಗದ) ಚಿನ್ಮಯಾತ್ಮನೇ ಸತ್ಯ.

ಜಡದೃಶ್ಯವೀ ದೇಹವಜಡ ದೃಶ್ಯನೆ ದ್ರಷ್ಟ।
ನೆಡೆವಿಡದಿಲ್ಲದಿಂತುಭಯವು ॥
ಮಡದಿ ಕೇಳ್ತನಗೆ ತೋರದಿರಲ್ಕೆ ತಾನೆಂಬೀ।
ನುಡಿಯದೆಂತಹುದು ವಿಚಾರಿಸೆ ॥ 4 ॥

ಮಡದಿ ಕೇಳು. ಈ ದೇಹ (ಅಥವಾ ಜಗತ್ತು) ಜಡದೃಶ್ಯವು. ದೃಷ್ಟನು (ಅರಿಯುವಾತನು) ಅಜಡ ದೃಶ್ಯನು. (ಅರುಹಿಸಿಕೊಂಡು ಅರಿಯುತ್ತಾನೆ) ಈ ಉಭಯ

ದೃಶ್ಯಗಳು ಒಂದನ್ನೊಂದು ಅಗಲಿರದೆ ತೋರಿ ಅಡಗುವವು. ವಿಚಾರಿಸಲಾಗಿ ಇವು ತನ್ನಲ್ಲಿ ಅತ್ಯಂತ ಅಸದ್ವಸ್ತುವಾಗಿ ತೋರದಿರಲು ತಾನೆಂಬ ನುಡಿಗೆ ತೆರಹು ಎಂತಹುದು ? (ಆಸ್ಪದವಿಲ್ಲೆಂಬ ಭಾವ).

ತಾನೆಂಬನಾ ದೃಶ್ಯವನು ದ್ರಷ್ಟನನು ಮೇಣು ।
ತಾನೆಂಬನಿಂತನುಭವಸಿದ್ಧ ॥
ತಾನೆಂಬ ವೇದ್ಯತೆಯಿಂದೆ ನೋಡಲು ಮಿಥ್ಯೆ
ತಾನಲ್ಲದುದುತಾನೆ ಪರತತ್ತ್ವ ॥ 5 ॥

ಒಮ್ಮೆ ದೇಹಾದಿ ದೃಶ್ಯವೇ ತಾನೆಂಬನು, ಇನ್ನೊಮ್ಮೆ ದೃಷ್ಟನು (ನೋಡುವವ) ತಾನೆಂಬನು, ಇದು ಅನುಭವ ಸಿದ್ಧ. ಈ ಉಭಯ ಅನುಭವ ತನಗೆ ವೇದ್ಯವಾಗಿರುವದರಿಂದ ಎರಡೂ ಮಿಥ್ಯೆ. ಅಂದರೆ ಆರುಹಿಸಿಕೊಳ್ಳುವ ಮತ್ತು ಅರಹಿಸಿಕೊಂಡು ಅರಿವ ಜಡಾಜಡವಸ್ತುಗಳು ತಾನಲ್ಲ "ತಾನಲ್ಲದುದು ತಾನೆ ಪರತತ್ತ್ವ" (ನಾನು–ನೀನೆಂಬ ಭಾವಗಳು ಇಲ್ಲದುದೇ ನಿಜತತ್ತ್ವ).

ಪ್ರಕೃತಿ ಮೊದಲ್ಗೊಂಡು ವಿಕೃತಿ ರೂಪದೆ ತೋರ್ಪ ।
ಸಕಲ ದೃಶ್ಯಂಗಳನೆಲ್ಲವ ॥
ಅಕುಟಿಲೆ ತನುವನುರೆ ನೇತಿಗಳೆದು ನಿಂ ।
ದಕಲಂಕಾದ್ವಯ ಬೋಧಮಯನಾತ್ಮ ॥ 6 ॥

ಕಾಪಟ್ಯದೂರಳಾದ ಮೈತ್ರೇಯಿ, ತ್ರಿಗುಣಾತ್ಮಕ ಪ್ರಕೃತಿಯೆ ಮೊದಲ್ಗೊಂಡು ವಿಕಾರರೂಪದಿಂದ ತೋರುವ (ಅಹಂಕಾರ, ದೇಹ, ಜಗತ್ತು ಮೊದಲಾದ) ಸಕಲ ದೃಶ್ಯಗಳನ್ನು ಮತ್ತು ದೃಷ್ಟಾರೂಪನಾದ ಅಹಂಕಾರವನ್ನು (ತನ್ನನ್ನು) ವಿಚಾರಿಸಿ ಅಲ್ಲಗಳೆಯಲು (ನೇತಿಗಳೆಯಲು) ಉಳಿಯುವ ಸ್ವರೂಪವೆ ನಿಷ್ಕಲಂಕವಾದ, ಸ್ವಗತಾದಿ ಭೇದವಿಲ್ಲದ, ಜ್ಞಾನಮಯ ಆತ್ಮನೇ (ತಾನು) ಇದ್ದಾನೆ.

ಎಂದು ಕರ್ಮವನೊಂದದೆಂದು ಬಂಧನಮಿಲ್ಲ ।
ವೆಂದು ನಿರ್ಗುಣ ನಿರ್ವಿಕಲ್ಪಕ ॥
ವೆಂದು ಸುಖಾದ್ವಯ ಪೂರ್ಣಚಿತ್ತದು ಬೊಮ್ಮ ।
ವೆಂದು ನಂಬೆಲೆ ನೀರೆ ನಿಜವಿದು ॥ 7 ॥

ಉಳುಮೆಯಾದ ಚಿನ್ಮಯಾತ್ಮನು ಎಂದೂ ಕರ್ಮವನ್ನು ಹೊಂದನು, ಅವನಿಗೆ ಯಾವ ಕಾಲಕ್ಕೂ ಬಂಧನವಿಲ್ಲ. ಅವನು ಎಂದೆಂದೂ ನಿರ್ಗುಣಿ, ನಿರ್ವಿಕಲ್ಪಕನು. ಸದಾ ಸುಖಮಯನು. ಅದ್ವಯನು (ಎರಡಿಲ್ಲದವನು) ದೇಶ, ಕಾಲಾದಿಗಳ ಇತಿಮಿತಿಯಿಲ್ಲದ ಪೂರ್ಣ ಚಿನ್ಮಯನು. ಪರಬ್ರಹ್ಮನು. ಇದೇ ನಿಜವೆಂದು, ಹೇ ನಾರಿಮಣಿಯೇ ನೀ ನಂಬು.

ಈ ಸೂತ್ರದಲ್ಲಿ ಅದ್ವೈತಾತ್ಮ ನಿರೂಪಿಸಲಾಯಿತು.

– ಇತಿ ನಿರೂಪಣೆ –

## 16ನೇ ಸೂತ್ರ

ಬಳಿಕಾತ್ಮನಿಗೆ ಬಂಧಮೋಕ್ಷಾದಿಯೆಂತೆಂದು ।
ನಳಿನಾಕ್ಷಿ ಬೆಸಗೊಂಡಳಿನಯನ ॥

ಬಳಿಕ ಕಮಲಾಕ್ಷಿಮೈತ್ರೇಯಿ ತನ್ನ ಪತಿಗೆ ''ಆತ್ಮನಿಗೆ ಬಂಧ ಮೋಕ್ಷಗಳು ಹೇಗೆ ಸಂಭವಿಸುವವು?'' ಎಂದು ಪ್ರಶ್ನಿಸಿದಳು.

ಎನಲದನುರೆನಂಬಿ ವನಿತೆ ಮೈತ್ರೇಯಿಯಾ ।
ಮುನಿಪಂಗೆ ನಮಿಸಿ ಬಳಿಕ ತನ್ನ ॥
ಮನದೊಲವಿಂದೆ ಬಿನ್ನೈಸಿದಳಾಭ್ರಾಂತಿ ।
ಜನಿಸಿತೆಂತಾಪರಾತ್ಮನೊಳೆಂದು ॥ 1 ॥

ಆತ್ಮನು ಅದ್ವಯನು ಎನ್ನುವದನ್ನು ಚನ್ನಾಗಿ ನಂಬಿದ ಮೈತ್ರೇಯಿ ತನ್ನ ಪತಿ ಮುನಿವರನಿಗೆ ನಮಿಸಿ, ತನ್ನ ಮನದೊಲವಿಂದೆ ''ಅಹಂ ಭ್ರಾಂತಿ ಮತ್ತು ಜಗತ್ಭ್ರಾಂತಿಗಳು ಪರಮಾತ್ಮನಲ್ಲಿ ಹೇಗೆ ಹುಟ್ಟಿದವು ?'' ಎಂದು ವಿಜ್ಞಾಪಿಸಿಕೊಂಡಳು.

ಮತ್ತಮಾಭ್ರಾಂತಿ ನಿಮಿತ್ತಮೆಂದೆನಿಸಿ ತೋ ।
ರುತ್ತಿರ್ಪ ಸುಖದುಃಖ ಬಂಧನ ॥
ಮೊತ್ತದ ಮೋಕ್ಷವಾತ್ಮನೊಳಾವತೆರೆದೊಳಾ ।
ಯಿತ್ತು ಪೇಳೆನಗೆ ತಾಪಸವಂದ್ಯ ॥ 2 ॥

ಮತ್ತು ಆ ಭ್ರಾಂತಿ ಮೂಲಕ ತೋರುವ ಸುಖದುಃಖ, ಬಂಧ ಮೋಕ್ಷಗಳ ಸಮೂಹವು ಆತ್ಮನಲ್ಲಿ ಯಾವ ರೀತಿ ಉಂಟಾಯಿತು ? ತಪಸ್ವಿಗಳಿಂದ ವಂದ್ಯನಾದಪತಿಯೆ ನನಗಿದನು ಹೇಳು.

ತನುವಿದು ತಾನೆಂಬ ತನು ತನ್ನದೆಂದೆಂಬ ।
ತನುಧರ್ಮವೆಲ್ಲವು ತನಗೆಂಬ ॥
ಇನಿತು ವಿಭ್ರಾಂತಿಯಾತ್ಮನೊಳಾದುದೆಂತು ಸ ।
ನ್ಮುನಿ ಮುಖ್ಯ ತಿಳುಪಿ ರಕ್ಷಿಪುದೆನ್ನ ॥ 3 ॥

ಮುನಿಪುಂಗವರಿಗೆ ಮುಖ್ಯಸ್ಥನೆ, ''ತನುವಿದು ತಾನು, ತನುವಿದು ತನ್ನದು, ಎನ್ನುವ ಮತ್ತು'' ತನುಧರ್ಮವೆಲ್ಲವೂ ತನಗೆ ಎಂಬ, ಈ ಪ್ರಕಾರದ ವಿಭ್ರಾಂತಿಯು ಆತ್ಮನಲ್ಲಿ ಅಂದರೆ ತನ್ನಲ್ಲಿ ಹೇಗೆ ಉಂಟಾಯಿತು ? ಎಂಬುದನ್ನು ನನಗೆ ತಿಳಿಸಿ ನನ್ನನ್ನು ರಕ್ಷಿಸಬೇಕು.

ಎನಗಿದು ಕೌತುಕವೆನಿಸಲ್ಕೆ ಬೆಸಗೊಂಡೆ ।
ನನಿತೆಲ್ಲವನು ಸವಿಸ್ತರಮಾಗಿ ॥
ಮುನಿಪ ನೀನೊಲವಿಂದೆ ತಿಳುಪೆಂದು ಮೈತ್ರೇಯಿ ।
ವಿನಯ-ವಾರಿಧಿ ನಮಿಸಿದಳೆಂದು ॥ 4 ॥

ಮುನಿವರನೇ, ನನಗಿದು ಆಶ್ಚರ್ಯವೆನಿಸುವದರಿಂದ ಕೇಳಿದೆ. ಒಲವಿಂದೆ ಇದನೆಲ್ಲ ನನಗೆ ಸವಿಸ್ತಾರವಾಗಿ ತಿಳಿಸು, ಎಂದು ವಿನಯವಾರಿಧಿ ಮೈತ್ರೇಯಿ ನಮಿಸಿ ಅಂದು ಬೆಸಗೊಂಡಳು.

ಇದು ನಿಜಗುಣಯೋಗಿ ಮುದದಿಂದೆ ತಿಳಿಯ ಪೇ ।
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥
ಒದವಿದ ಸಂವಾದದೊಳಗೆರಡನೆಯದ।
ಪ್ಪುದು ಸಂಧಿ ಪರಮಾನುಭವಬಂಧಿ ॥ 5 ॥

ಇದು ನಿಜಗುಣಯೋಗಿ ಪ್ರೀತಿಯಿಂದ ತಿಳಿಯಪಡಿಸಿದ ಯಾಜ್ಞವಲ್ಕ್ಯ ಮೈತ್ರೇಯಿಯರಲ್ಲಿ ನಡೆದ ಸಂವಾದರೂಪ ಪರಮಾನುಭವ ಬೋಧೆಯಲ್ಲಿ ಇದು ಎರಡನೆಯ ಸಂಧಿ.

ಈ ಸೂತ್ರದಲ್ಲಿ ಪ್ರಶ್ನೆ ನಿರೂಪಣೆ ಇದೆ.

ಸಂಧಿ ಎರಡು ಸೂತ್ರ 16 ಕ್ಕೆ ಸಂಪೂರ್ಣ

ಮಂಗಲಮಸ್ತು

****

ಶ್ರೀಗುರು ಶಂಭುಲಿಂಗಾಯ ನಮಃ
ಪರಮಾನುಭವ ಬೋಧೆ

## 3ನೇ ಸಂಧಿ

# ಭ್ರಾಂತಿನಿರಾಕರಣ

### 1ನೇ ಸೂತ್ರ .

ಭ್ರಾಂತಿಗೆ ಲಕ್ಷಣವುಂಟೆ ಪರೀಕ್ಷಿಸೆ ।
ಕಾಂತೆ ಕೇಳಂತಾದೊಡಹುದಲ್ತೆ ॥

ಕಾಂತೆ ಮೈತ್ರೇಯಿ ಕೇಳು. ಸುವಿಚಾರಿಸಲಾಗಿ ಭ್ರಾಂತಿಗೆ ಲಕ್ಷಣವಿರುವುದೇ ? (ಇಲ್ಲೆಂಬ ಭಾವ 1) ಆದರೂ ವ್ಯಾವಹಾರಿಕ ದೃಷ್ಟಿಯಿಂದ ಭ್ರಾಂತಿಗೆ ಲಕ್ಷಣವಿರುವದೆಂದು ಹೇಳಿದರೆ ಅದು ಉಳ್ಳದ್ದಾಗುವದಲ್ಲವೇ ? ಆದ್ದರಿಂದ ಆತ್ಮನಿಗೆ ವಿಲಕ್ಷಣವಾಗಿ ತೋರುವದೆ ಭ್ರಾಂತಿಯ ಲಕ್ಷಣವೆಂದು ನಿರೂಪಿಸುವರು.

ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ ।
ಧಾಮಂಗೆ ಸತ್ಯಚಿದ್ರೂಪಂಗೆ ॥
ಕಾಮಿತಜನಕಲ್ಪಭೂಜಂಗೆ ಶಂಭುವಿಂ।
ಗಾಮೋದದಿಂದೆ ವಂದಿಸುವೆನು ॥ 1॥

ಶ್ರೀ ಮಹಾದೇವನೂ, ಉಮಾಸಮೇತನೂ, (ಉಮಾಪತಿ) ಪೂರ್ಣಾನಂದಸ್ವರೂಪನೂ, ಸತ್ಯಚಿದ್ರೂಪನೂ, ತನ್ನ ನಂಬಿದವರಿಗೆ ಇಷ್ಟಾರ್ಥಗಳನ್ನು ಕೊಡುವ ಕಲ್ಪವೃಕ್ಷನೂ ಆದ ಶಂಭುಲಿಂಗನಿಗೆ ಆನಂದದಿಂದ ವಂದಿಸುವೆನು.

ಶ್ರೀ ಮದಾನಂದಾತ್ಮಾರಾಮನೂರ್ಜಿತನಭಿ।
-ರಾಮನಧಿಕ ದಯಾರಸಪೂರ್ಣ ॥
ಕಾಮವಿದೂರನುತ್ತಮ ಯಾಜ್ಞವಲ್ಕ್ಯಮ।
ಹಾಮುನಿ ಸುಗುಣಸಂಪನ್ನನು ॥ 2 ॥

ಶ್ರೀ, ಜ್ಞಾನ, ಐಶ್ವರ್ಯ, ಶಕ್ತಿ ಬಲ, ವೀರ್ಯ, ತೇಜಸ್ಸು ಎಂಬ ಷಡ್ಗುಣೈಶ್ವರ್ಯ ಸಂಪನ್ನನೂ, ಆತ್ಮಾರಾಮನೂ (ಟಿ–1)(ಟಿ.100ನೇಪುಟ ನೋಡಿ) ಬ್ರಾಹ್ಮೀ ಸ್ಥಿತಿಯಲ್ಲಿ ಉನ್ನತಿ ಪಡೆದವನೂ,

[ ಟಿಪ್ಪಣಿ :– (1) ನ ಹಿ ಭ್ರಾಂತೇರ್ಲಕ್ಷಣಮಸ್ತಿ "ಭ್ರಾಂತಿಗೆ ಲಕ್ಷಣವಿಲ್ಲ, ಭ್ರಾಂತಿ ಇದೆ ಎಂದರೆ ವಿಚಾರಕಾಲದಲ್ಲಿ ಇಲ್ಲದುದಾಗಿ ಮತ್ತು ಇಲ್ಲ ಎಂದರೆ ಅವಿಚಾರಕಾಲದಲ್ಲಿ ಉಳ್ಳದುದಾಗಿ ತೋರುವದರಿಂದ ಭ್ರಾಂತಿಗೆ ಅನಿರ್ವಚನೀಯ ಲಕ್ಷಣವನ್ನು ಹೇಳಬಹುದು.]

ಅಭಿರಾಮನೂ (ಟಿ–2) ಅಪಾರ ಕರುಣಾರಸಭರಿತನೂ, ಕಾಮವನ್ನು ಜಯಿಸಿದವನೂ, ಮಹಾತ್ಮನೂ, ಆದ ಯಾಜ್ಞವಲ್ಕ್ಯ ಮಹಾಮುನಿಗಳು ಸುಗುಣ ಸಂಪನ್ನರಾಗಿದ್ದರು.

ಮುನಿವರನಿನಿಯಳಿಗನುರಾಗದಿಂದವ ।
-ಳೆನಿತನು ಬೆಸಗೊಂಡಳನಿತನು ॥
ಅನುಭವಗಮ್ಯವೆಂದೆನಿಪಂತೆ ತಿಳುಪಿ ಚಿ ।
ದ್ಘನಮುಕ್ತಿ ಸುಖದೊಳಿರಿಸಿದನು ॥ 3 ॥

ಮುನಿಶ್ರೇಷ್ಠರಾದ ಶ್ರೀ ಯಾಜ್ಞವಲ್ಕ್ಯರು ತನ್ನ ಪತ್ನಿ ಪ್ರೀತಿಯಿಂದ ಕೇಳಿದ ಎಲ್ಲ ಪ್ರಶ್ನೆಗಳಿಗೆ ಅವಳ ಸ್ವಾನುಭವಕ್ಕೆ ಬರುವ ಹಾಗೆ ಉತ್ತರಿಸಿ ಅವಳನ್ನು "ಚಿದ್ಘನ ಮುಕ್ತಿ ಸುಖದಲ್ಲಿ ಇರಿಸಿದರು.

ಅದು ವರಸುಜ್ಞಾನ ನಿರ್ಯೋಗವದು ತಿಳಿ ।
ಯದಡೀಗಳದಕೆ ಕಾರಣಮಾಗಿ ॥
ಸದಮಳಾತ್ಮಕನೊಳಾರೋಪಿತಮೆನೆ ಸರ್ವ ।
ವಿದನು ನಿವರ್ತಿಪೆನೆಲೆ ಕೇಳು ॥ 4 ॥

ಇಲ್ಲಿಯವರೆಗೆ ಉತ್ತಮಾಧಿಕಾರಿಗೆ ಹೇಳಿದುದು ಸಹಜವಾದ ಸುಜ್ಞಾನ ನಿರ್ಯೋಗವು. ಇದು ತಿಳಿಯದಿದ್ದರೆ, ಸ್ವಗತಾದಿಭೇದವಿಲ್ಲದ ತ್ರಿಕಾಲಾಭಾದಿತ ನಿರ್ಮಲಾತ್ಮನಲ್ಲಿ(ಕಲ್ಪಿತಭ್ರಾಂತಿಯನ್ನು) ಅಧ್ಯಾರೋಪ ಮಾಡಿ ತಿಳಿಸುವೆ. ಎಲೆಕಾಂತೆ ಕೇಳು. ಆರೋಪಿತವಾದುದನ್ನು ಪುನಃ ನಿವೃತ್ತಿಗೊಳಿಸುವೆ.

ತನುವನೆ ತಾನೆಂಬ ತನು ತನ್ನದೆಂದೆಂಬ ।
ತನುಮುಖ್ಯಜಗವಿದು ನಿಜವೆಂಬ ॥
ಇನಿತಳವಟ್ಟುವಿವೇಕವನುಳಿದ ಚೇ ।
ತನಭಾವವದು ತಾನೆ ಭ್ರಮೆಯಕ್ಕು ॥ 5 ॥

ತೋರುವ ಶರೀರವೇ ತಾನು, ಶರೀರ ತನ್ನದು ಮತ್ತು ದೇಹ ಮುಖ್ಯವಾಗಿ ಜಗವೆಲ್ಲಸತ್ಯ ಎಂಬ ಭಾವಗಳು (ತನ್ನಲ್ಲಿ) ಅಳವಟ್ಟಿವೆ. ವಿವೇಕವಿಲ್ಲದ ಈ ಜಡಬುದ್ಧಿಗೆ ಭ್ರಮೆ ಎನ್ನುವರು. (ಇದು ತನ್ನಲ್ಲಿ ಆರೋಪಿತವು)

ಅನುಭೂತವಿದು ತನ್ನಿಂದನನುಭೂತಂ ತಾನಿ ।
ದೆನಲಿಲ್ಲವಾಭ್ರಾಂತಿಯನು ಮತ್ತೆ ॥
ವನಿತೆ ಸದೃಶವಸದೃಶವಹುದೀ ಭ್ರಾಂತಿ ।
ಯೆನಲಿಲ್ಲವಾತ್ಮನೊಳರಿಯಲ್ಕೆ ॥ 6 ॥

[ ಟಿಪ್ಪಣಿ :– (1) ಯೋಽಂತಃ ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವಯಃ । (ಗೀತಾ 5–24) ಅಂತಃಸುಖವನ್ನು ಅನುಭವಿಸುವವನೇ ಆತ್ಮಾರಾಮನು. (2) ಹರ್ಷದಾಯಕನು, ಅಭಿರಾಮನು. ]

ವನಿತೆ ಮೈತ್ರೇಯಿ, ಈ ಭ್ರಾಂತಿ ತನ್ನಿಂದ ಅನುಭವಿಸಲ್ಪಟ್ಟಿತು ಎಂದೆನಬಾರದು ಮತ್ತು ಇದು ತನ್ನಿಂದ ಅನುಭವಿಸಲ್ಪಡಲಿಲ್ಲ ಎಂತಲೂ ಅನ್ನಬಾರದು (ಎಂದೂ ಇಲ್ಲದ) ಈ ಭ್ರಾಂತಿ ಆತ್ಮನಂತೆ ಇದೆ ಎಂದಾಗಲಿ ಅಥವಾ ಇಲ್ಲವೆಂದಾಗಲಿ ಹೇಳಲು ಬಾರದು ವಿಚಾರಿಸಿ ನೋಡಿದರೆ ಭ್ರಾಂತಿಯು ಆತ್ಮನಿಗೆ ವಿಲಕ್ಷಣವಾಗಿದೆ.

ಗುಣರಹಿತನಿಗೆ ಸಗುಣತನು ತಾನೆಂಬ ।
ಗುಣವಿದು ತಾನೆ ತದ್ಭ್ರಮೆಯಲ್ತೆ ॥
ಗುಣಮಣಿಭೂಷಣೆ ತಿಳಿ ನಹಿ ಬ್ರಾಂತೇರ್ಲ ।
ಕ್ಷಣಮಸ್ತಿಯೆಂಬವಚನದಿಂದ ॥ 7 ॥

ಸದ್ಗುಣ ಮಣಿಗಳಿಂದ ಅಲಂಕೃತಳಾದ ಮೈತ್ರೇಯಿ, ನಿರ್ಗುಣಾತ್ಮನಿಗೆ ಸಗುಣ ತನು ತಾನೆಂಬ ತಿಳುವಳಿಕೆ ಭ್ರಮೆಯಲ್ಲವೇ ? ''ನ ಹಿ ಭ್ರಾಂತೇರ್ಲಕ್ಷಣಮಸ್ತಿ'' ಎಂಬ ವಚನದಂತೆ ಭ್ರಾಂತಿಗೆ ಲಕ್ಷಣವಿಲ್ಲೆಂದು ತಿಳಿ.

ಸವಿಕಾರಿಯೆನಿಪೊಡಲನು ನೀನೆಂಬೀ ಭ್ರಾಂತಿ ।
ಸವನಿಸಲದುಕಾರಣದೆ ನಿನ್ನ ॥
ಸವಿಕಾರಿಯೆಂಬೆ ವಿವೇಕಿಸದೊಮ್ಮೆ ನೀ- ।
ನವಿಕಾರಿ ತಿಳಿಯಲ್ಕೆ ನಿಜದಿಂದ ॥ 8 ॥

ಷಡ್ಭಾವವಿಕಾರಯುಕ್ತ ದೇಹ ನಾನೆಂಬ ಈ ಭ್ರಾಂತಿಯು ನಿನ್ನಲ್ಲಿ ಹುಟ್ಟಿದ ನಿಮಿತ್ತವಾಗಿ 'ನಾನು ಸವಿಕಾರಿ' ಎನ್ನುವಿ. ಆದರೆ ನಾನಾರು ಎಂಬುದನ್ನು ಒಮ್ಮೆಯೂ ನೀನು ವಿವೇಕಿಸಲಿಲ್ಲ, ನಿಜವಾಗಿ ತಿಳಿದು ನೋಡಿದರೆ ನೀನು ಎಂದೆಂದೂ ನಿರ್ವಿಕಾರ ಆತ್ಮನಿರುವಿ.

– ಇತಿ ಆತ್ಮಂಗೆ ಭ್ರಾಂತಿ ವಿಲಕ್ಷಣತ್ವ ನಿರೂಪಣೆ –

## 2ನೇ ಸೂತ್ರ

ಕಂಡುದನೆಲ್ಲವನುಂಡೆನೆಂದೆನಲಾತ್ಮ ।
ನುಂಡಾತನಖಿಳವನೆನಬೇಕು ॥

ಕಂಡುದುದನು, ಕೇಳಿದುದನು, ಮುಟ್ಟಿದುದನು, ಮೂಸಿಸಿದುದನು (ಎಲ್ಲಾ ಇಂದ್ರಿಯ ವಿಷಯಗಳನ್ನು) ನಾನು ಭೋಗಿಸಿದೆನು ಎಂದು ನೀನು ಅನ್ನುವದಾದರೆ ಆತ್ಮನು ಯಾವತ್ತು (ಶುದ್ಧಾಶುದ್ಧ) ವಿಷಯಗಳನ್ನು ಉಂಡಾತನು, ಎಂದು ಒಪ್ಪಲೇಬೇಕಾಗುವದು.

ಸವಿಕಾರಿಯಾಗಿ ತೋರುವ ತೋರಿ ಕೆಡುವ ದೇ ।
ಹವನೆ ನಾನೆಂದೆಂಬ ಭ್ರಮೆಯಿಂದೆ ॥
ಭವಬಂಧನಿವಹತಾಪತ್ರಯಾದಿಗಳಿಂತು ।
ಸಮನಿಸುಗವು ನಿನ್ನೊಳರಿಮಿಥ್ಯೆ ॥ 1 ॥

ಷಡ್ಭಾವವಿಕಾರಗಳಿಂದ (ಟಿ–1)(ಟಿ.1–2ಕ್ಕೆ ಮುಂದಿನ ಪುಟ ನೋಡಿ) ತೋರುವ ಮತ್ತು ಕೆಲದಿನ ಬದುಕಿಕೊಂಡಿದ್ದು ಬಳಿಕ ನಾಶವಾಗುವ 'ದೇಹವೇ ನಾನು'

ಎನ್ನುವ ಭ್ರಾಂತಿಯಿಂದಲೇ ಭವಬಂಧ (ಟಿ–2) ಮತ್ತು ತಾಪತ್ರಯಾದಿಗಳು (ಟಿ–3) ನಿನಗೆ ಪ್ರಾಪ್ತವಾಗುವವು. ಆದರೆ ನಿನ್ನೊಳಗೆ ನೀನು ನಿನ್ನ ನಿಜಸ್ವರೂಪ ಅರಿತರೆ ಈ ತೋರಿಕೆಲ್ಲವು ಮಿಥ್ಯೆ (ಟಿ–4) ಎನಿಸುವದು.

ಅವಕುಪರತಿಯದು ಸವನಿಸೆ ಸುಖವೆಂಬ ।
ರವಿವೇಕಿಗಳು ತಮ್ಮ ಬಗೆಯಿಂದೆ ॥
ಕುವಲಯದಳನೇತ್ರೆ ಮೈತ್ರೇಯಿ ಕೇಳು ದುಃ ।
ಖವನೆ ತತ್ಸುಖವೆಂಬರರಿಯದೆ ॥ 2 ॥

ಕಮಲದ ದಳಗಳಂತೆ ಕಣ್ಣುಗಳುಳ್ಳ ಮೈತ್ರೇಯಿ (ಈ ಉಪಮೆ ಅವಳ ನಿರ್ಲೇಪ ಸ್ಥಿತಿ ತೋರಿಸುವದು) ಕೇಳು. ಮೇಲೆ ಹೇಳಿದ ದೈಹಿಕ ತಾಪತ್ರಯಾದಿಗಳಿಗೆ (ಕರ್ಮವಶದಿಂದ ಸುಷುಪ್ತಿ ಅವಸ್ಥೆಯಲ್ಲಿ) ಉಪರತಿ ಅಂದರೆ ವೃತ್ತಿಗೆ, ವಿಲಯಾವಸ್ಥೆ ಪ್ರಾಪ್ತವಾಗುವದು. ಆಗ ಅಂತರ್ಮುಖವಾದ ಸಾತ್ವಿಕವೃತ್ತಿಯಲ್ಲಿ ಸುಖ ಹೊಳೆಯುವದು ಇದು ಕ್ಷಣಿಕ ಹಾಗು ಆಯಾಸದ ಕರ್ಮದಿಂದ ಒದಗಿದ ಕ್ಷಣಿಕಸುಖ. ಆದರೆ ಅವಿವೇಕಿಗಳು ತಮ್ಮ ಬಗೆ (ಭ್ರಾಂತಿ) ಯಿಂದ ದುಃಖಕ್ಕೆ ನಿಜಸುಖವೆನ್ನುವರು.

ತನುವಿರಹಿತನವಿಕಾರಿಯಚಲಿತನೆಂ ।
ದೆನಿಸುವಾತ್ಮನಿಗೆ ತತ್ತನುದುಃಖ ॥
ಜನನ ಮರಣ ಶೋಕ ಭಯ ಬಂಧವೆಂಬಿವೆ ।
ಳ್ಳೆನಿತಿಲ್ಲವಬಲೆ ಕೇಳರಿದಂದು ॥ 3 ॥

ಅಬಲೆ ಕೇಳು. ತನ್ನ ತಾನು ಸರಿಯಾಗಿ ತಿಳಿದಾಗ ದೇಹಾದಿ ಕರಣಗಳ ಜನನ, ಮರಣ, ಶೋಕ, ಭಯ ಬಂಧ ಎಂಬಿವು ತನಗಿಲ್ಲ, ನಿರ್ದೇಹಿ, ನಿರ್ವಿಕಾರಿ, ನಿಶ್ಚಲ (ನಿಷ್ಕ್ರಿಯ)ನಾಗಿರುವ ಆತ್ಮನಿಗೆ (ನಿನಗೆ) ಇವು ಅಣುಮಾತ್ರವಿಲ್ಲ.

ದುಃಖಾದಿಕವನಿದಿರಿಟ್ಟು ಕಾಣ್ಬಾತನಾ ।
ದುಃಖಾದಿ ರೂಪವನೆಲೆಗೈದು ॥
ದುಃಖಾದಿಗಳನನು ಭವಿಸುವನಲ್ಲವಾ ।
ದುಃಖಾದಿ ತನಗೆ ಕೇಳುಪ್ಪಿಯಾಗಿ ॥ 4 ॥

ಜನನ ಮರಣಾದಿ ದುಃಖಗಳನ್ನು ಎದಿರಿಟ್ಟು ಕಾಣುವ ತಾನು ಅರಿವು; ಆ ದುಃಖಾದಿಗಳನ್ನು ಹೊಂದಿ ಅನುಭವಿಸುವನಲ್ಲ. (ಕೊಡವನ್ನು ಕಾಣುವವ ಕೊಡಕ್ಕೆ ಭಿನ್ನವಾಗಿರುವಂತೆ) ತಾನು ಆ ಸುಖದುಃಖಾದಿಗಳಿಂದ ಬೇರೆ (ಸಾಕ್ಷಿಯಾಗಿ) ಇರುವನು. ಆದ್ದರಿಂದ ತನ್ನಲ್ಲಿ ಭೋಗ್ಯ ವಸ್ತುಗಳು (ಇಲ್ಲದೆ) ಪುಸಿಯಾಗಿ ತೋರುವವು.

[ ಟಿಪ್ಪಣಿ :– (1) ಅಸ್ತಿ ಜಾಯತೆ, ವರ್ಧತೆ, ವಿಪರಿಣಮತೆ, ಅಪಕ್ಷೀಯತೆ ಮತ್ತು ವಿನಶ್ಯತಿ ಇವು ದೇಹದ ಆರು ವಿಕಾರಗಳು. (2) ನನಗೆ ಜನನ ಮರಣವಿದೆ, ಅವಿದ್ಯೆ (ಹೃದಯಗ್ರಂಥಿ), ಸಂಶಯ ಕರ್ಮಗಳು, ಪರಿಚ್ಛಿನ್ನಭಾವನೆ, ಅಲ್ಪಜ್ಞತ್ವ ಮೃತ್ಯು, ಪುನರ್ಜನ್ಮ ಇವೆಲ್ಲ ಭವ ಬಂಧದ ಪ್ರಕಾರಗಳು. (3) ಆಧ್ಯಾತ್ಮಿಕ, ಆಧಿ ಭೌತಿಕ, ಆಧಿದೈವಿಕ ಇವೆ ಮೂರು ತಾಪಗಳು. (4) "ರಜ್ಜುಸರ್ಪದಂತೆ" ತಾನಿಲ್ಲದ ಕಡೆ ತಾನು ತೋರುತ್ತಿರುವದೆ ಮಿಥ್ಯೆ 'ಇದೆ ಇಲ್ಲ' ಎನ್ನಲು ಬಾರದ್ದೆ ಮಿಥ್ಯೆ, ಬ್ರಹ್ಮಜ್ಞಾನದಿಂದ ಮಾತ್ರ ಅಳಿದುಹೋಗುವದೇ. ಮಿಥ್ಯೆ ]

ಕಂಡುದನೆಲ್ಲವನುಂಡೆನೆಂದೆಂಬೊಡೆ।
ಕಂಡಶುದ್ಧಾದಿ ವಿಷಯವನು ॥
ಉಂಡಾತನಹನದರಿಂದೆ ತಿಳಿಯೆ ಚಿದ।
ಖಂಡಾತ್ಮನಿಗೆ ಭೋಕ್ತೃತನಮುಂಟೆ ॥ 5 ॥

ಕಣ್ಣಿಗೆ ಕಾಣುವ ಯಾವತ್ತನ್ನು ಆತ್ಮನು ಉಂಡನು ಎಂದು ಅನ್ನುವಿಯಾದರೆ ಕಾಣುವ (ಹಂದಿ ನಾಯಿಗಳು ತಿನ್ನುವ) ಅಶುದ್ಧಾದಿ ವಿಷಯಗಳನ್ನು ಆತ್ಮನು ಉಂಡವನಾದನೆಂದು ಒಡಂಬಡಬೇಕು. ಆದ್ದರಿಂದ ಸರಿಯಾಗಿ ತಿಳಿದು ನೋಡಲು ಚಿದ್ಘನನಾದ ಆತ್ಮನಿಗೆ ಭೋಕ್ತೃತ್ವವುಂಟೇ ? (ಸರ್ವಥಾ ಇಲ್ಲೆಂಬ ಅಭಿಪ್ರಾಯ)

– ಇತಿ ಆತ್ಮಂಗೆ ಭೋಕ್ತೃತ್ವನಿರಾಕರಣ ನಿರೂಪಣೆ –

## 3ನೇ ಸೂತ್ರ

ತೋರುವತನುವಿದು ತಾನಲ್ಲವೆಂತೆನೆ ।
ತೋರುವಘಟಪಟಾದಿಗಳಂತೆ ॥

ತೋರುವ ಕೊಡ ವಸ್ತ್ರಾದಿಗಳು ಹೇಗೆ ತಾನಲ್ಲವೋ ಹಾಗೆ ತನಗಿದಿರಿಟ್ಟು ತೋರುವ ಈ ದೇಹ ತಾನಲ್ಲವು.

ತನುದೋರದಿರೆ ತನುವಿದು ನೀನೆಂದೆಂತೆಂಬೆ।
ತನು ತೋರ್ಪಕತದಿಂದೆ ನೀನೆಂಬೆ॥
ನಿನಗೆ ತೋರಿತ್ತಾಗಿ ನೀನಲ್ಲವೀತನು।
ತನುವಿಂದವನ್ಯವಿಂತಿದು ಸತ್ಯ ॥ 1 ॥

ಈ ದೇಹವು ನಿನಗೆ ತೋರದಿದ್ದರೆ ಈ ದೇಹ ನಾನೆಂದು ಹೇಗೆ ಅನ್ನುವಿ ? ದೇಹ ತೋರುವ ಕಾರಣದಿಂದ 'ಇದು ನಾನು' ಎನ್ನುವಿ. ನಿನಗೆ ದೇಹ ತೋರುವದರಿಂದಲೆ ಈ ದೇಹ ನೀನಲ್ಲವು. ಈ ದೇಹದಿಂದ ನೀನು ಬೇರೆಯಿರುವಿ ಎಂಬುದೇ ಸತ್ಯ.

ತನುವಿದಾನೆಂದೋರ್ಮೆ ತನು ತನ್ನದೆಂದೋರ್ಮೆ।
ನಿನಗೆ ತೋರ್ಪುದರಿಂದೆ ತನುವಿದು ॥
ಮನದನ್ನೆ ನೀನಲ್ಲವಿದನು ಯುಕ್ತ್ಯನುಮಾನ।
ವನುಭವದಿಂದವಧರಿಪುದು ॥ 2 ॥

ಮನೋಹರಿ ಮೈತ್ರೇಯಿ, ಒಮ್ಮೆ ಈ ದೇಹ ನಾನೆನ್ನುವಿ ಇನ್ನೊಮ್ಮೆ ದೇಹ ನನ್ನದೆನ್ನುವಿ. (ಎರಡು ಬಗೆಯಾಗಿ) ನಿನಗೆ ತೋರುವದರಿಂದ ಈ ದೇಹ ನೀನಲ್ಲವು. ಈ ಮಾತನ್ನು ಯುಕ್ತಿ ಅನುಮಾನ ಮತ್ತು ಅನುಭವದಿಂದ (ಮುಂದೆ ಹೇಳುವೆ) ಲಕ್ಷ್ಯಗೊಟ್ಟು ಕೇಳಬೇಕು.

ಘಟವ ಕಾಣ್ಬಾತನಾಘಟವಲ್ಲವೆಂಬಂತೆ।
ಘಟದಂತೆ ತೋರುವ ತನುವಿದು ॥

ಘಟಕುಟಿ ಪರಿಭಾವಿಸಲ್ಕೆ ನೀನಲ್ತು ಕ।
ಪಟವ್ಯಸೆ ನೀನೆಂಬುದಿದು ಯುಕ್ತಿ ॥ 3 ॥

ಕೊಡದಂತೆ ಮೊಲೆಯುಳ್ಳ ಮೈತ್ರೇಯಿ, ಕೊಡವನ್ನು ಕಾಣುವವನು ಹೇಗೆ ಕೊಡಲ್ಲವೋ ಹಾಗೆ ಕೊಡದಂತೆ ತೋರುವ ಈ ದೇಹ ನೀನಲ್ಲವು. ವಿವೇಕಿಸಲಾಗಿ ಈ ದೇಹ ಜಡ. ನೀನು ಅಜಡನು. ನೀನಲ್ಲದ ದೇಹವನು ನೀನೆಂದು ಭಾವಿಸುವುದು ಕಪಟವಲ್ಲವೇ ? ಇದು ಯುಕ್ತಿ

ಈ ದೇಹವಿದು ವಿವಾದಾಸ್ಪದಿ ತಾನಲ್ತು।
ಭೇದ ಭೀತ್ಯಾದಿ ಜನಕಮಾಗಿ ॥
ಕಾದಲೆ ಕೇಳ್ಪರ ದೇಹದಂತೆಂಬುದು।
ವೇದಾನುಮತವಿಂತಿದನುಮಾನ ॥ 4 ॥

ಪ್ರಿಯಳೆ ಕೇಳು ಪ್ರಯೋಗ (ಪರೀಕ್ಷೆ)ಗಳಿಗೆ ಒಳಗಾದ ಮತ್ತು ಒಮ್ಮೆ ತಾನು, ಇನ್ನೊಮ್ಮೆ ತನ್ನದು, ಎಂಬ ವಿವಾದಕ್ಕೆ ಆಸ್ಪದವಾದ ಈ ದೇಹವು ತಾನಲ್ಲವು. (ಪ್ರತಿಜ್ಞೆ) ಯಾಕೆಂದರೆ ಭೇದ, ಭಯ, ಕಾಮ, ಮೋಹಗಳನ್ನು ಹುಟ್ಟಿಸುವದಾಗಿದೆ (ಹೇತು) ಹೇಗೆಂದರೆ ಅನ್ಯರ ದೇಹದಂತೆ ತನ್ನ ದೇಹವಿದೆ (ದೃಷ್ಟಾಂತ) ಇಂತು ಇದು ವೇದಕ್ಕೆ ಸಮ್ಮತವಾದ ಅನುಮಾನ ಪ್ರಮಾಣವು.

ಮಲ ಮೂತ್ರ ರೇತೋರುಧಿರ ಪೂಯ ನರ ಮಜ್ಜ।
ವೆಲು ಚರ್ಮಮಯವಾದ ತನುವೆತ್ತ ॥
ಸಲೆಶುದ್ಧಬೋಧಾತ್ಮಪದವಾದ ತಾನೆತ್ತ।
ಲೆಲೆ ನೀರೆ ನೋಡಿಂತಿದನುಭಾವ ॥ 5 ॥

ಎಲೌ ನಾರೀಮಣಿ, ಮಲ ಮೂತ್ರ ರೇತಸ್ಸು ರಕ್ತ ಕೀವು ನರನಾಡಿ ಎಲವು ತೊಗಲುಗಳ ಹಂದರವಾದ ಶರೀರವೆತ್ತ? ಪರಿಶುದ್ಧ ಹಾಗೂ ಅರುವು ಸ್ವರೂಪವಾದ ತಾನೆತ್ತ? ನೋಡು ಇಂತಿದು ತನ್ನ ಸ್ವಾನುಭವ.

ತನುವಿನಂತಿರೆ ದೃಶ್ಯವೆನಿಪುದರಿಂದಿಂದ್ರಿ।
ಯನಿಕಾಯವಾಪ್ರಾಣವಹಮಾದಿ ॥
ಇನಿತನು ನೀನಲ್ಲವೆಂದು ಭಾವಿಪುದು ಮಾ।
ನಿನಿರನ್ನೆ ಸತ್ಯಾನುಭವದಿಂದ ॥ 6 ॥

ಹೆಣ್ಣುಮಕ್ಕಳಲ್ಲಿ ರತ್ನ ಪ್ರಾಯಳಾದ ಮೈತ್ರೇಯಿ. ದೇಹದಂತೆ ದೃಶ್ಯವೆನಿಸುವ (ತೋರುವ) ದರಿಂದ (ಕರ್ಮ ಮತ್ತು ಜ್ಞಾನ) ಇಂದ್ರಿಯ ಸಮೂಹವು ಪ್ರಾಣ (ಪಂಚಕ) ಅಹಂಕಾರ (ಮನಬುದ್ಧಿ) ಇವೆಲ್ಲ ನೀನಲ್ಲವೆಂದು (ನಿನ್ನ) ಸತ್ಯಾನುಭವದಿಂದ ನಿಶ್ಚಯಿಸಬೇಕು.

ವನಿತೆ ಮನೋಮತಿಯಹಮು ಚಿತ್ತಾದಿ ಸಾ।
ಧನತೆಯಿಂದವೆ ದೃಶ್ಯವಹವಾಗಿ ॥

ಅನುದಿನಮಿವು ತನಗನ್ಯವಲ್ಲದೆ।
ತಾನೆಂದೆನಲಿಲ್ಲವರಿ ದೀಪಾದಿಗಳಂತೆ ॥ 7 ॥

ವನಿತೆ ಮೈತ್ರೇಯಿ, ಮನ ಬುದ್ಧಿ ಅಹಂಕಾರ ಚಿತ್ತ ಮತ್ತು ಜ್ಞಾತೃ ( ಈ ಅಂತಃಕರಣ ವೃತ್ತಿಗಳು) ತನಗೆ ಸಾಧನವಾಗಿರುವದರಿಂದಲೇ ದೃಶ್ಯವಾಗಿವೆ. ಆದ್ದರಿಂದ ಯಾವಾಗಲೂ ಇವು ತನಗೆ ಭಿನ್ನವಲ್ಲದೆ ತಾನಲ್ಲವು. ಅರಿದು ನೋಡಲು ಸಾಧನಗಳಾದ ದೀಪ, ಸೂರ್ಯ, ಚಂದ್ರರೇ ತಾನೆಂದು ಯಾರೂ ಅನ್ನುವದಿಲ್ಲ ಇದನ್ನು (ನಿನ್ನೊಳಗೆ) ಚೆನ್ನಾಗಿ ತಿಳಿ.

ಅರಿದೆನೆಂಬಾಗಳಾ ಮರೆದೆನೆಂಬಾಗಳಾ।
ಅರಿವಿನುಳುಮೆ ನೀನಲ್ಲದೊಡಾವ ॥
ತೆರದಿಂದ ನೀರೆ ನೀನರಿದೆಂತು ಪೇಳ್ವೆಮ-।
ತ್ತರಿದೆನಾ ಮರೆದೆನೆಂಬೆರಡನು ॥ 8 ॥

ಪ್ರಿಯೆ ಮೈತ್ರೇಯಿ, (ದೇಹ, ಇಂದ್ರಿಯಾದಿ ಜಡ ದೃಶ್ಯಗಳನ್ನು) 'ನಾನು ಅರಿದೆನು' ಎನ್ನುವಾಗ ಮತ್ತು (ಬೇರೊಂದು ಕಾಲದಲ್ಲಿ) 'ನಾನು ಮರೆದೆನು' ಎನ್ನುವಾಗ ನೀನು ಅರುವಿನ ಉಳುಮೆ (ಇರುವಿಕೆ) ಆಗಿರುವಿಯಷ್ಟೇ. ಹಾಗೆ ನೀನು ಸತ್ಯವಾಗಿಲ್ಲ, ಎಂದು ಹೇಳುವದಾದರೆ 'ನಾನು ಅರಿದೆ, (ಮತ್ತು) 'ನಾನು ಮರೆದೆ' ಎಂಬ ಉಭಯ ವೃತ್ತಿಗಳನ್ನು ಅರಿದು (ಪ್ರಕಾಶಿಸುತ್ತ) ನೀನು ಹೇಗೆ ಉಸುರಬಲ್ಲೆ? [ ಆದುದರಿಂದ ಜ್ಞಾನಾಜ್ಞಾನ (ಅರಿದೆ ಮರೆದೆ) ಎಂಬ ವೃತ್ತಿಗಳಿಗೆ ಸಾಕ್ಷಿಕನಾಗಿ (ವೃತ್ತಿ ಪ್ರಭಾಕರನಾಗಿ) ನೀನು ಇದ್ದೇ ಇರುವಿ, ಎಂಬ ತಾತ್ಪರ್ಯ. ]

ಸುಖವಲ್ಲದುದನೆಳ್ಳೆನಿತನೊಲ್ಲನಾಗಿ ತ-।
ತ್ಸುಖವನೆ ಕೂರ್ತು ನಿನಗೆ ತೋರ್ಪ ॥
ನಿಖಿಳವೆಲ್ಲವು ಪ್ರೀತಿಕರಮಪ್ಪುದದರಿಂದೆ।
ಸುಖರೂಪನಾತ್ಮನೆಂಬುದೆ ಸತ್ಯ ॥ 9 ॥

ಸುಖವಲ್ಲದುದು (ಅಥವಾ ನಿರಸವಾದುದು) ತನಗೆ ಎಳ್ಳು ಕಾಳಷ್ಟು ಬೇಡವೆನಿಸುವದು, 'ಅದನೊಲ್ಲೆ' ಎಂದು ಹೇಳುವನು. (ಮತ್ತು) ಆ ಸುಖವನ್ನು (ಸತ್ಯವಾಗಿರುವದನ್ನು) ಕುರಿತು ತನಗೆ ತೋರುವ ಯಾವತ್ತೂ ವಿಷಯಗಳು ಪ್ರೀತಿಕರ (ಪ್ರೇಮಾಸ್ಪದ)ವಾಗಿ ಇರುವವು. ಆದ್ದರಿಂದ ಆತ್ಮ (ತಾನು) ಸುಖರೂಪನೆಂಬುದೆ ಸತ್ಯವು.(ಟಿ) [ ಟಿಪ್ಪಣಿ :– ಆತ್ಮನಸ್ತುಕಾಮಾಯ ಸರ್ವಂ ಪ್ರಿಯಂ ಭವತಿ। ಆತ್ಮನ (ತನ್ನ) ಮೇಲೆ ಸವೆಯದ, ಸಾಕೆನಿಸದ ಅತ್ಯಧಿಕ ಪ್ರೀತಿ ಇರುವ ಕಾರಣದಿಂದಲೆ, ತನಗೆ ತೋರುವ ವಿಷಯಗಳಲ್ಲಿ ಪ್ರೀತಿ ಉಂಟಾಗುವದು. ಉದಾ– ಗಂಡನು ತನ್ನ ಹೆಂಡತಿಯನ್ನು ಪ್ರೀತಿಸುವದು, ಹೆಂಡತಿಗಾಗಿ ಅಲ್ಲ, ತನ್ನ ಸಲುವಾಗಿ ಅವಳನ್ನು ಪ್ರೀತಿಸುವನು. ಅದೇ ರೀತಿ ಹೆಂಡತಿ ಗಂಡನನ್ನು ಪ್ರೀತಿಸುವದು ತನ್ನ ಸಲುವಾಗಿಯೆ ಇದೆ. ಗಂಡನ ಸಲುವಾಗಿಯಿಲ್ಲ, ಆವನ ಮೇಲೆ ಇರುವ ಪ್ರೀತಿಗೌಣ. ತನ್ನ ಮೇಲಿರುವ ಪ್ರೀತಿ ನಿಜ ಮತ್ತು ಸಹಜವಾಗಿದೆ. ]

– ಇತಿ ಆತ್ಮಂಗೆ ದೇಹಾದಿ ವಿಲಕ್ಷಣತ್ವ ನಿರೂಪಣೆ –

## 4ನೇ ಸೂತ್ರ

ತನುವಿಗಾತ್ಮನಿಗೆ ಸಂಗತಿಯಿಲ್ಲವೆಂದೆಂದು ।
ವನಿತೆ ಕೇಳ್ಬೆಳಕುಕತ್ತಲೆಯಂತೆ ॥

ವನಿತೆ ಮೈತ್ರೇಯಿ ಕೇಳು. ಬೆಳಕು ಕತ್ತಲೆ ಒಂದೆಡೆಯಲ್ಲಿ ಕೂಡಿರದಂತೆ ದೇಹಕ್ಕೆ ಮತ್ತು ಆತ್ಮನಿಗೆ (ತನಗೆ) ಎಂದೆಂದೂ ಸಮರಸ (ಸಂಬಂಧ) ವಿಲ್ಲ.

ಜಡವಿದುತನು ತಾನಜಡನೆಂತು ಸಂಗತಿ ।
ಜಡವಜಡಂಗಳಿಗಪ್ಪುದೆ ॥
ಬಡನಡುವಿನ ಬಾಲೆ ಬಗೆವುದು ನೀನಿಲ್ಲಿ ।
ಸೊಡರು ಕತ್ತಲೆಗಳ ತೆರನೆಂದು ॥ 1 ॥

ಸಿಂಹಕಟಿಯಂತೆ ಬಡಕಾದ ನಡವುಳ್ಳ ಮೈತ್ರೇಯಿ, ಈ ದೇಹ ಜಡ (ಅರುಹಿಸಿಕೊಳ್ಳುವದರಿಂದ) ತಾನು ಅಜಡನು (ಅರಿವು). ಬೆಳಕು ಕತ್ತಲೆಗಳಂತಿರುವ ಈ ಚೇತನಾಚೇತನ ವಸ್ತುಗಳಿಗೆ ಹೇಗೆ ಸಂಗತಿಯಿರಬಲ್ಲದು? ಎಂದೂ ಸಾಧ್ಯವಿಲ್ಲವೆಂಬುದನ್ನು ನೀನಿಲ್ಲಿ ನಿಶ್ಚಯಿಸಬೇಕು.

ತನುವಿಗಾತ್ಮನಿಗೆಂತು ಪುದುವಿಲ್ಲವೆಂತೆನೆ ।
ತನುಮೂರ್ತವದು ತಾನಮೂರ್ತನು ॥
ತನು ಭಿನ್ನವದ್ವಯನೆನಿಪನೆ ತಾನಿಂತು ।
ತನುಲಯವದು ತಾನಲಯನಾಗಿ ॥ 2 ॥

ದೇಹಕ್ಕೆ ಆತ್ಮನಿಗೆ ಎಂದೂ ಎಳ್ಳಷ್ಟೂ ಬೆರಿಕೆ (ಸೇರಿಕೆ) ಇಲ್ಲಾ ಹೇಗೆಂದರೆ ತನು ಆಕಾರವುಳ್ಳುದು. ತಾನು (ಆತ್ಮನು) ನಿರಾಕರನು. ತನು ಅನೇಕ ಭೇದವುಳ್ಳುದು. ತಾನು ಅಭೇದನು, ಅದ್ವಯನು. ದೇಹ ನಶ್ವರ, ತಾನು ಅವಿನಾಶಿ. (ಆತ್ಮನಿಗೆ ಲಯ, ಉದಯಗಳಿಲ್ಲ ಜನನ ಮರಣಗಳು ದೇಹಕ್ಕೆಂಬ ತಾತ್ಪರ್ಯ) ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ. (ಭ.ಗೀತೆ 2–20).

ತನು ದೃಶ್ಯವಾತ್ಮನೆ ದೃಶಿರೂಪು ತನು ಮಿಥ್ಯೆ ।
ಯೆನಿಪುದು ತಾನೆ ಸನ್ಮಾತ್ರನು ॥
ತನು ದುಃಖಪಿಂಡವರಿವೆ ಸುಖಮಯವಾಗಿ ।
ತನುವಿಗೆ ತನಗೆ ಮೇಳನವಿಲ್ಲ ॥ 3 ॥

ದೇಹ ಎದುರಿಟ್ಟು ತೋರುವದು. ತಾನು ತೋರದೆ, ತೋರಿದುದೆಲ್ಲವನರಿಯುವ ಆತ್ಮನು. ದೇಹ ಹುಸಿದೋರಿಕೆ, ತಾನು (ಆತ್ಮನು) ಸತ್ಯವಾಗಿರುವವನು. ಜಡದೃಶ್ಯವಾದ. ದೇಹ ದುಃಖಮಯ, ಅರಿವು (ತಾನು) ಸುಖಮಯ. ಆದ್ದರಿಂದ ತನುವಿಗೆ ತನಗೆ ಮೇಳನವಿಲ್ಲ.

ತನುವಿನೊಡನೆ ಸಂಗವನುದಿನಮಿಲ್ಲಾಗಿ ।
ತನುಧರ್ಮ ಕರ್ಮಂಗಳೊಡಗೂಟ ॥
ಇನಿತಿಲ್ಲವಾತ್ಮಂಗೆ ತಿಳಿದಂದು ಕೇಳೆನ್ನ ।
ಮನದನ್ನೆ ಮೈತ್ರೇಯಿ ಮುದದಿಂದ ॥ 4 ॥

ಮನೋಹರಳಾದ ಮೈತ್ರೇಯಿ, ಸಂತೋಷದಿಂದ ಕೇಳು. ದೇಹದೊಡನೆ ತನ್ನ ಸಂಗವು ಎಂದೆಂದೂ ಇಲ್ಲವು. ಇದನ್ನು ತಿಳಿದ ಬಳಿಕ ದೇಹದ ಧರ್ಮ ಕರ್ಮಗಳ ಸಂಬಂಧವಾದರೂ ಆತ್ಮನಿಗೆ (ತನಗೆ) ಎಳ್ಳಷ್ಟೂ ಇಲ್ಲ.

ದೇಹವಿದನನ್ಯದೇಹದಂದೊಳು ಸಂ ।
ದೇಹವಿಲ್ಲದೆ ಕಾಣಲರಿಯದ ॥
ಮೋಹಿತಂಗಹುದೆ ನಿಜಾನಂದವದು ಕೋಟಿ ।
ದೇಹದೊಳುಗ್ರತಾಪಸನಾಗೆ ॥ 5 ॥

ಸ್ವದೇಹವನ್ನು ಪರದೇಹದಂತೆ (ಟಿ–1) ಸಂಶಯವಿಲ್ಲದೆ ಕಾಣಲು ಅಸಮರ್ಥನಾದ ಅವಿವೇಕಿಗೆ (ಮೋಹಿತಗೆ) ಕೋಟಿ ಜನ್ಮಗಳಲ್ಲಿ ಉಗ್ರ ತಪವನ್ನಾಚರಿಸಿದರೂ ನಿಜಾನಂದವು ದೊರೆಯುವದೇ ? (ಆತ್ಮಸುಖ ಸಾಧ್ಯವಿಲ್ಲೆಂಬ ಭಾವ).

– ಇತಿ ದೇಹ ಆತ್ಮನಿಗೆ ಅನ್ಯೋನ್ಯ ವಿಲಕ್ಷಣತ್ವ ನಿರೂಪಣೆ –

## 5ನೇ ಸೂತ್ರ

**ತನುಗುಣವಾತ್ಮನಿಗಿಲ್ಲವೆಂತೆಂದೊಡೆ– ।
ತನುವಾಗಿ ಪರತನುಗುಣದಂತೆ ॥**

ಅನ್ಯಶರೀರದ ಗುಣಧರ್ಮಗಳು ತನಗಿಲ್ಲದಂತೆ ಶರೀರರಹಿತವಾಗಿರುವ ಆತ್ಮನಿಗೆ ಶರೀರದ ಗುಣಧರ್ಮಗಳಿಲ್ಲ. (ಟಿ–2)

ದೇಹಾದಿಯನು ಕಾಣ್ಬನಾ ದೇಹಾದಿಕವಲ್ತು ।
ದೇಹಾದಿಗಳ ಗುಣಕರ್ಮವು ॥
ಊಹಿಸಿ ನೋಡು ಮೈತ್ರೇಯಿ ನೀನಿಂತು ನಿ– ।
ರ್ದೇಹಿಯಾದರಿವಿಗಿಲ್ಲಿದು ತಥ್ಯ ॥ 1 ॥

1. [ ಟಿಪ್ಪಣಿ :– ತನಗೆ ಮತ್ತು ದೇಹಕ್ಕೆ ಇರುವ ಅನ್ಯೋನ್ಯ ವಿಲಕ್ಷಣತ್ವವನ್ನು ಇದೆ ಗ್ರಂಥಕಾರರು ಜ್ಞಾನ ಪ್ರತಿಪಾದನ ಸ್ಥಳದ 42 ಪದ್ಯದಲ್ಲಿ ಹೇಳಿದ್ದಾರೆ ಇದು ಹೃದಯ ಗ್ರಂಥಿ ಛೇದನ. ]

2. [ ಟಿಪ್ಪಣಿ :– ಇದು ಅನುಮಾನ ಪ್ರಮಾಣ : ಇದರಲ್ಲಿ ತನುಗುಣವು ಆತ್ಮನಿಗಿಲ್ಲ (ಪ್ರತಿಜ್ಞೆ). ' ಆತ್ಮನುವಾಗಿ', ನಿರ್ದೇಹಿಯಾಗಿರುವದರಿಂದ (ಹೇತು). ಪರದೇಹದ ಗುಣಗಳು ತನಗಿಲ್ಲದಂತೆ (ದೃಷ್ಟಾಂತ) ]

ಮೈತ್ರೇಯಿ, ನೀನು ವಿಚಾರಿಸಿ ನೋಡು, ದೇಹ ಇಂದ್ರಿಯ ಮನಾದಿಗಳನ್ನು ಕಾಣುವವನು ಆ ದೇಹಾದಿಕವಲ್ಲ, ದೇಹಾದಿ ಇಂದ್ರಿಯಗಳ ಗುಣ ಕರ್ಮವು ದೇಹಕ್ಕೆ ವಿಲಕ್ಷಣವಾದ (ನಿರ್ದೇಹಿ) ಅರುವಿಗಿಲ್ಲ. ಇದು ಸತ್ಯ.

ತೋರುದನರಿವನಾ ತೋರುವದಲ್ಲೆಂತು।
ಬೇರೆ ಚಿದ್ರೂಪನಾದುದರಿಂದ॥
ತೋರುವೀ ಸಕಲ ಜಡಂಗಳ ಧರ್ಮವಾ।
ಬೇರೆನಿಸಿದ ಚಿತ್ತಿಗೆನಲುಂಟೆ ॥ 2 ॥

ತೋರುವದನ್ನು ಅರಿವವನು ಆ ತೋರುವ ವಿಷಯವಲ್ಲ (ಇದು ಅನುಮಾನ ಪ್ರಮಾಣದ ಪ್ರತಿಜ್ಞಾವಾಕ್ಯ) ಏಕೆಂದರೆ ಅರಿಯುವವನು ಬೇರೆ ಚಿದ್ರೂಪನಾಗಿದ್ದಾನೆ (ಇದು ಹೇತು) ಕೊಡವನ್ನು ನೋಡುವವನು ಕೊಡಕ್ಕೆ ಭಿನ್ನನಿರುವನು (ಎಂಬುದು ದೃಷ್ಟಾಂತ) ಆದ್ದರಿಂದ ತೋರುವ ಈ ಸರ್ವ ಜಡದೃಶ್ಯಗಳ ಗುಣಧರ್ಮಗಳು ತನಗಿಲ್ಲ ಬೇರೆ ಸಾಕ್ಷಿಕನಾದ (ದೃಶ್ಯವಿಲಕ್ಷಣನಾದ) ಅರುವಿಗೆ (ಚಿದ್ರೂಪನಾದ ತನಗೆ) ಇವೆ ಎಂದು ಹೇಳಬೇಕೆ ? (ಹೇಳಲಾಗದು)

ತನುಧರ್ಮವಾತ್ಮನಿಗಿಲ್ಲವಾವನುವಿಂದ-।
ತನುವಾಗಿ ತಿಳಿ ದೇವದತ್ತನ॥
ತನುಧರ್ಮವದು ಯಜ್ಞದತ್ತನಿಗಿಲ್ಲವೆಂ।
ದೆನಿಪಂತೆ ಮೈತ್ರೇಯಿ ನಿಜದಿಂದ ॥ 3 ॥

ಯಾವ ರೀತಿಯಿಂದ (ಅನುಮಾನ ಪ್ರಮಾಣದಿಂದ) ವಿಚಾರಿಸಿದರೂ ತನುವಿನ ಧರ್ಮಗಳು ಆತ್ಮನಿಗಿಲ್ಲ (ಇದು ಪ್ರತಿಜ್ಞೆ) ಅಶರೀರಿಯಾಗಿ ಆತ್ಮನಿರುವದರಿಂದ (ಇದು ಹೇತು) ದೇವದತ್ತನ ದೇಹಧರ್ಮಗಳು ಯಜ್ಞದತ್ತನಿಗೆ ಇರಲಾರವು (ಟಿ) ಎಂಬಂತೆ (ಇದು ದೃಷ್ಟಾಂತ) ಮೈತ್ರೇಯಿ ಇದು ನಿಜವೆಂದು ತಿಳಿ.

ತನುವಲ್ಲವಿಂದ್ರಿಯವಲ್ಲವಾಮತಿ ಮುಖ್ಯ।
ವೆನಿಪ ಕರಣವಲ್ಲ ವಾತ್ಮನು॥
ಅನಿತಕ್ಕೆ ಸಾಕ್ಷಿಕ ನಾದುದರಿಂದ ತ।
ಜ್ಜನಿತ ಧರ್ಮಂಗಳಾತ್ಮನವಲ್ಲ॥ 4 ॥

ಆತ್ಮನು (ತಾನು) ದೇಹವಲ್ಲ ಇಂದ್ರಿಯವಲ್ಲ (ಮಾನವನಿಗೆ) ಮುಖ್ಯವಾಗಿರುವ ಮನ ಬುದ್ಧಿ ಮೊದಲಾದ ಕರಣಗಳೂ ಅಲ್ಲ. ಈ ಎಲ್ಲಕ್ಕೂ ಆತ್ಮನು ಸಾಕ್ಷಿಯಾಗಿದ್ದಾನೆ. ಆದುದರಿಂದ ದೇಹಾದಿ ಕರಣಗಳಿಂದ ಹುಟ್ಟಿದ ಧರ್ಮಗಳು ಆತ್ಮನವು ಅಲ್ಲ.

[ ಟಿಪ್ಪಣಿ :– ಆಯಾ ವ್ಯಾಧಿಗಳಾ ಒಡಲಿಂಗೆ। ಸಾಯಸವಲ್ಲವು ಮಿಕ್ಕೊದಲಿಂಗೆ॥ ಎಂಬಂತೆ ಒಬ್ಬನ ಬೇನೆ ಇನ್ನೊಬ್ಬನಿಗೆ ಆಯಾಸಗೊಡುವದಿಲ್ಲ. ]

– ಇತಿ ಆತ್ಮನಿಗೆ ತನುಧರ್ಮ ನಿರಾಕರಣೆ –

## 6ನೇ ಸೂತ್ರ

ತೋರುವತನುವನು ತಾನೆಂದುಬಗೆದೊಡೆ ।
ತೋರುವೆಲ್ಲವನು ತಾನೆನಲಕ್ಕು ॥

ಎದಿರಿಟ್ಟು ತೋರುವ ಶರೀರವೆ ತಾನೆಂದು ಕಲ್ಪಿಸಿದರೆ ಅದೇ ರೀತಿ ಎದಿರಿಡುವ ಗಿಡ, ಪಕ್ಷಿ, ಪಶು, ಭೂತ, ಭೌತಿಕ ವಸ್ತುಗಳೆಲ್ಲವನ್ನೂ ತಾನೆಂದು ತಿಳಿಯಬೇಕಾದೀತು.

ವ್ಯೋಮವನನಿಲನನಾ ವಹ್ನಿ ಜಲವನು ।
ಭೂಮಿಯನಬಲೆ ನೀನೆಂದೊಡೆ ॥
ನಾಮಾದಿವಿಡಿದು ಕಾಣಿಸಿಕೊಂಬ ಜಗವಿದೆ।
ಲ್ಲೇ ಮಾತು ನೀನೆಂದೆನಿಸುತಿರ್ಕು ॥ 1 ॥

ಅಬಲೆ ಮೈತ್ರೇಯಿ, ಆಕಾಶ, ವಾಯು, ಅಗ್ನಿ, ಜಲ, ಭೂಮಿಗಳನ್ನು ನೀನು ಎಂದು ಅಭಿಮಾನಿಸಿದರೆ, ನಾಮರೂಪು ಕ್ರಿಯೆವಿಡಿದು 'ಬಹು ವೃತ್ತಿಗಾಸ್ಪದವಾಗಿ ಮೆರೆವ, ಜಗವಿದೆಲ್ಲವೂ ನೀನೆ ಎಂದು ಎಡಬಿಡದೆ ನುಡಿಯಬೇಕಾದೀತು,

ನೀನಲ್ಲದೊಡಲನು ನೀನೆಂದು ತಿಳಿದೊಡೆ।
ಮಾನಿನಿ ಘಟ ಪಟಾದಿಗಳನು ॥
ನೀನೆಂದು ಬಗೆಯಬೇಹುದು ಜಡ ದೃಶ್ಯತೆ।
ತಾನವರೊಳು ಸಮವಹುದಾಗಿ ॥ 2 ॥

ಮಾನಿನಿ, ನೀನಲ್ಲದ ದೇಹವನ್ನು ನೀನೆಂದು ತಿಳಿದರೆ, ಕೊಡ, ಅರಿವೆ, ಮುಂತಾದ ಪಡಿಪದಾರ್ಥಗಳನ್ನು ನೀನೆಂದು ತಿಳಿಯಬೇಕಾದೀತು। (ಯಾಕಂದರೆ) ಜಡ ದೃಶ್ಯತ್ವ ಲಕ್ಷಣಗಳು ದೇಹಾದಿ ಸಕಲ ಪದಾರ್ಥಗಳಲ್ಲಿ ಸಮಾನವಾಗಿರುವವು.

ತಾನಲ್ಲದೊಡಲನು ತಾನೆಂದು ತಿಳಿಯಲಾ।
ಶ್ವಾನ ಖರಾದಿಕ ತನುವದು ॥
ತಾನೆಂಬುದೇ ಕಾಗದಿಹುದು ಪೇಳಂಗನೆ।
ಹಾನಿ ಮೇಣದರಿಂದ ಪೆರತುಂಟೆ ॥ 3 ॥

ತಾನಲ್ಲದ ದೇಹವನು ತಾನೆಂದು ತಿಳಿದರೆ (ಜಡದೃಶ್ಯತೆಯಲ್ಲಿಸಮಾನವಿರುವ) ನಾಯಿ, ಕತ್ತೆ, ಹಂದಿ, ಮೊದಲಾದವುಗಳ ದೇಹವು ತಾನೆಂಬುದು ಏಕಾಗಬಾರದು ? ಅಂಗನೇ, ಹೀಗೆ ತಿಳಿಯುವದರಿಂದ ಮತ್ತಿಷ್ಟು ನಿನಗೆ ಹಾನಿಯಲ್ಲದೆ ಬೇರೆನಿದೆ ? ನೀನೆ ಹೇಳು. (ಯಾವುದೇ ಪ್ರಾಣಿಯ ದೇಹ ತಾನೆಂದು ತಿಳಿದರೂ ತನಗೆ ಕೇಡು ತಪ್ಪದೆಂಬ ಭಾವ)

ಅನ್ನಪಾನದಿನಾದ ತನುವ ನೀನೆಂದೆನ್ನ ।
-ಲನ್ನ ಪಾನಂಗಳಿಂದುದಿಸಿದ ॥
ಭಿನ್ನರೂಪಿನ ಮಲಮೂತ್ರ ರಕ್ತಾದಿಗ ।
ಳಂ ನೀನೆಂಬುದು ನಿನಗಾಗದೆ ॥ 4 ॥

ಅನ್ನ, ನೀರು, ಅಗ್ನಿ, ವಾಯು, ಮುಂತಾದ ಪಂಚಭೂತಗಳಿಂದ ಜನಿಸಿದ ದೇಹವನು ನೀನೆಂದು ಭಾವಿಸಿದರೆ, ಅವೇ ಅನ್ನ ಪಾನಂಗಳಿಂದ ನಿರ್ಮಿತವಾದ ಹಾಗೂ ಬೇರೆ ಬೇರೆ ರೂಪುಳ್ಳ ಮಲ, ಮೂತ್ರ, ರಕ್ತ ಮಾಂಸ, ಮಜ್ಜ ವೀರ್ಯ, ಎಲುಬುಗಳು ನೀನೆ ಅಹುದೆಂದು ಏಕೆ ನಿನಗೆ ಆರೋಪಿಸಬಾರದು.

ತನು ಪುಟ್ಟದೊಡೆ ನೀನು ಜನಿಸಿದೆನೆನೆ ದಿನ ।
ದಿನದೊಳು ಶತಕೋಟ ತನುಗಳು ॥
ಜನಿಸುವವನಿತೆಲ್ಲರೊಳು ನೀರೆ ನೀನು ಸಂ ।
ಜನಿಸಿದೆನೆಂದೆಂಬುದಲಸದೆ ॥ 5 ॥

ಚಲುವೆ, ದೇಹ ಪುಟ್ಟಿದರೆ ನಾನು ಹುಟ್ಟಿದೆನು, ಎಂದು ನೀನು ಅನ್ನುವದಾದರೆ ಪ್ರತಿ ದಿನವೂ (ಜಗತ್ತಿನಲ್ಲಿ) ಶತಕೋಟಿ ದೇಹಗಳು ಹುಟ್ಟುವವು, ಆ ಎಲ್ಲಾ ದೇಹಗಳೊಡನೆ ನಾನೇ ಹುಟ್ಟಿದೆ, ಎಂದು ನೀನು ಬೇಸರಿಯದೆ ತಿಳಿಯಬೇಕಾಗುವದು.

ತನುವಿನ ಮರಣವಿದನು ನಿನಗೆನೆ ಕೋಟ ।
ತನುವಳಿವವು ದಿನದಿನದೊಳು ॥
ಅನಿತರ ಮರಣವೆಲ್ಲವನು ಕೇಳಲೆ ಕಾಂತೆ ।
ನಿನಗೆಂಬುದೇಕಾಗದಿರ್ಪುದು ॥ 6 ॥

ಈ ಶರೀರದ ಮರಣವೇ ನನ್ನ ಮರಣವೆಂದು ನೀನು ತಿಳಿದರೆ, ಕಾಂತೆ ಮೈತ್ರೇಯಿ ಕೇಳು. ದಿನದಿನ ಕೋಟಿ ಶರೀರಗಳು ಸಾಯುವವು. ಆ ಎಲ್ಲ ಶರೀರಗಳ ಮರಣವೆಲ್ಲವು (ಟಿ) ನಿನಗೇ ಸಂಭವಿಸುವವು ಎಂದು ನೀನೇಕೆ ಒಡಂಬಡಬಾರದು ?

[ ಟಿಪ್ಪಣಿ:– (ತಾನಲ್ಲದ ದೈಹಿಕ ಜನನ ಮರಣಗಳು ತನಗೆಂದು ಭಾವಿಸುವದು. ವಿಪರೀತ ಜ್ಞಾನವೆನಿಸುವದು) ]

– ಇತಿ ದೇಹಾತ್ಮಭಾವ ನಿರಾಕರಣ –

## 7ನೇ ಸೂತ್ರ

ನಿನ್ನದಲ್ಲದ ತನುವೊದಲಾದವನು ನಿನ್ನ ।
ವೆನ್ನಲೆಲ್ಲವು ನಿನ್ನವೆನವೇಳ್ಕು ॥

ನಿನ್ನವು ಅಲ್ಲದ (ಪಂಚಭೂತಂಗಳ ಕಾರ್ಯವಾದ) ದೇಹೇಂದ್ರಿಯ ಮನ ಮೊದಲಾದ ಕರಣಗಳು ಹಾಗೂ ಅವುಗಳ ಧರ್ಮಗಳು ನಿನ್ನವೆಂದು ಅಭಿಮಾನಿಸಿದರೆ ತೋರುವ ಎಲ್ಲ ದೇಹಗಳು ಮತ್ತು ಅವುಗಳ ಧರ್ಮ–ಕರ್ಮಾದಿಗಳು ನಿನ್ನವು ಎಂದೇ ಒಪ್ಪಬೇಕು.

ಇಲ್ಲದ ಕುಲ ಗೋತ್ರವನು ನೀರೆ ನಿನಗೆಂಬೊ ।
ಡೆಲ್ಲ ಜಾತಿಯ ಕುಲಗೋತ್ರವ ॥
ನಿಲ್ಲದೆ ನಿನಗೆಂಬುದಹುದು ದೇಹಾದಿಕ- ।
ದಲ್ಲಿ ನೀನೆಂತು ಭಾವಿಸಿದಂತೆ ॥ 1 ॥

ಪ್ರಿಯೆ, ನೀನಲ್ಲದ ದೇಹಾದಿಗಳಲ್ಲಿ ನಿನಗಿಲ್ಲದ ಕುಲ, ಜಾತಿ, ಗೋತ್ರಗಳನ್ನು ನಿನ್ನ ಮೇಲೆ ಹಾಕಿಕೊಂಡರೆ, ಎಲ್ಲ ಜಾತಿಯ ಕುಲಗೋತ್ರಗಳು ನಿನಗಿವೆ, ಎಂದು ಅನುಮಾನಿಸದೆ ನೀನು ಒಪ್ಪಬೇಕಾಗುವದು.

ಪುಸಿ ನಿನಗಿಲ್ಲದ ಪೆಸರಿಗೋಯೆಂಬೊಡೆ ।
ಪೆಸರನಂತಂಗಳುಂಟವಕೆಲ್ಲ ॥
ಸಸಿನೆ ನೀನೋಯೆಂಬುತಿರಬೇಹುದಲಸದೆ ।
ವಸುಧೆಯೊಳುನ್ಮಾದಿ ನರನಂತೆ ॥ 2 ॥

ನಿನಗಾವ ಹೆಸರಿಲ್ಲ (ದೇಹಕ್ಕೆ ಹೆಸರಿಡುವರು) ನಿನಗಿಲ್ಲದ ಹುಸಿ ಹೆಸರಿಗೆ "ಓ" ಎಂದು ಅನ್ನುವದಾದರೆ (ಒಂದು ದೇಹಕ್ಕೆ ಒಂದರಂತೆ) ನಿನಗೆ ಅನಂತ ಹೆಸರುಗಳುಂಟು, ಚೆಲುವೆ ನೀನು ಆ ಎಲ್ಲ ಹೆಸರುಗಳಿಗೆ 'ಓ' 'ಓ' ಎಂದು ಅನ್ನುತ್ತಲೆ ಇರಬೇಕಾಯಿತು. ಲೋಕದಲ್ಲಿ ಹುಚ್ಚು ಹಿಡಿದವರಂತೆ.

ತನು ಗುಣ ಧರ್ಮ ಕರ್ಮವನೆಲ್ಲವನು ನಿನ್ನ ।
ವೆನುತಿರ್ಪುದಿಂತು ತೋರ್ಪಖಿಳರ ॥
ತನು ಗುಣ ಧರ್ಮ ಕರ್ಮವನೆಲ್ಲವನು ನಿನ್ನ ।
ವೆನುತಿರು ನೀರೆ ನೀನುಸುರದೆ ॥ 3 ॥

ಲಾವಣ್ಯವತಿಯೇ ತೋರತನುವಿನ ಗುಣ, ಧರ್ಮ, ಕರ್ಮಗಳು ನಿನ್ನವು ಎಂದು ಮಮಕರಿಸಿದರೆ (ನಿನ್ನ ದೇಹದಂತೆ) ಅನೇಕ ದೇಹಗಳು ತೋರುವವು ಆ ಎಲ್ಲಾ ದೇಹಗಳ ಗುಣ, ಧರ್ಮ, ಕರ್ಮಗಳು ನಿನ್ನವು ಎಂದು ಮಾತು ಸಹ ಆಡದೆ ಸುಮ್ಮನೆ ಅವುಗಳ ಕರ್ಮಫಲ ಅನುಭವಿಸುತ್ತಾ ಇರಬೇಕಾಗುವದು.

ನಿನ್ನವಲ್ಲದವನು ನಿನ್ನವೆಂದೆಂಬೊಡೆ।
ನಿನ್ನವೆಂದೆನ್ನು ಲೋಕದೊಳಂತು॥
ಭಿನ್ನರೂಪಿಂದುದಿಸಿದ ವಿಷಯಂಗಳ।
ನಿನ್ನು ನೀನಾಲಸ್ಯವಿಲ್ಲದೆ॥ 4 ॥

ನಿನ್ನವು ಅಲ್ಲದ (ಪರರ) ವಿಷಯಗಳನ್ನು ನಿನ್ನವು, ಎಂದು ಮೋಹಿಸಿದರೆ ಲೋಕದಲ್ಲಿ ಬೇರೆ ಬೇರೆ ಹೆಸರು ರೂಪುಳ್ಳ ಅನೇಕ ವಿಷಯಗಳು (ಪ್ರತಿಕ್ಷಣ) ಹುಟ್ಟುವವು. ಇನ್ನು ಬಳಿಕ ನೀನೆಡೆಬಿಡದೆ ಅಥವಾ ಆಲಸ್ಯವಿಲ್ಲದೆ (ನಿನ್ನಿಂದ ಆರುಹಿಸಿಕೊಳ್ಳುವ) ಅವೆಲ್ಲ ವಿಷಯಗಳು ನನ್ನವು ಎಂದು ಗ್ರಹಿಸಬೇಕಾಗುವದು.

ಮಾಡದ ಕರ್ಮವ ಮಾಡಿದನೆಂಬೊಡೆ।
ನಾಡೆಲ್ಲರೆಸಗಿದ ಕರ್ಮವ॥
ಮಾಡಿದೆನೆನ್ನು ನೀನನುದಿನವವರಲ್ಲಿ।
ಮಾಡಿದೆನೆನೆ ಹಾನಿ ನಿನಗುಂಟೆ॥ 5 ॥

ಕರ್ಮೇಂದ್ರಿಯಗಳು ಮಾಡುವ ಕರ್ಮಗಳನ್ನು ಇಂದ್ರಿಯಾಭಿಮಾನದಿಂದ ನಾನು ಮಾಡಿದೆನೆಂದು ಹೇಳುವದಾದರೆ ನಾಡಿನಲ್ಲಿ ಬೇರೆ ಬೇರೆಯವರು ಮಾಡುವ ಕರ್ಮಗಳೆಲ್ಲವನ್ನೂ ನಾನು ಮಾಡಿದೆನೆಂದು ಒಪ್ಪಬೇಕು ಹೀಗೆ ನೀನೊಡಂಬಟ್ಟರೆ ಹಾನಿ ನಿನಗುಂಟೆ ? (ಕರ್ತೃತ್ವಾಭಿಮಾನದಿಂದ ತನಗೆ ಸರ್ವ ಅನರ್ಥಗಳುಂಟೆಂಬ ಭಾವ)

ತನು ವಿಷಯಂಗಳನನುಭವಿಸುವನೆ ನೀ।
ನನುಭವಿಸುವನೆಂಬೊಡಿದಿರಿಟ್ಟ॥
ತನು ವಿಷಯಾದಿಗಳನುಭವವೆಲ್ಲವು।
ವನಿತೆ ನೀನರಿ ನಿನ್ನ ವೆನಿಸುಗು॥ 6 ॥

ವನಿತೆ ಮೈತ್ರೇಯಿ, ದೇಹದ ಇಂದ್ರಿಯಗಳು ವಿಷಯಗಳ ಮೇಳನದಿಂದ ಸುಖ ದುಃಖಗಳನ್ನು ಅನುಭವಿಸುತ್ತಿರಲು ನೀನು ಅವನ್ನು ಅನುಭವಿಸುವವನೆಂದು ತಿಳಿದರೆ ನಿನಗಿದಿರಿಟ್ಟು ಅನೇಕ ತನುಭೋಗಗಳಿವೆ ಅವೆಲ್ಲವೂ ನಿನಗೆ ಅನುಭವವಾಗ ಬೇಕಾಯಿತು. ತಿಳಿದು ನೋಡು.

ತನು ಇಂದ್ರಿಯಾಳಿಮಾನಸಮಿವು ದುಃಖವ।
ನನುಭವಿಸುತಮಿರ್ಪವಲ್ಲದೆ ವನಿತೆ॥
ನಿನ್ನನನುಭವವಲ್ತು ನೀನವಕೆ ಬೇ।
ರೆನಿಸಿರ್ಪಕತದಿನಿಂತಿದು ಸತ್ಯ॥ 7 ॥

ವನಿತೆ ಮೈತ್ರೇಯಿ, ದೇಹ, ದಶ ಇಂದ್ರಿಯಗಳು ಮತ್ತು ಮನಾದಿ ಅಂತಃಕರಣಗಳು (ವಿಷಯ ಸಂಪರ್ಕದಿಂದ) ದುಃಖಗಳನ್ನು ಅನುಭವಿಸುತ್ತಿರುವವಲ್ಲದೆ

ನೀನಲ್ಲ, ನೀನು ದೇಹಾದಿ ಕರಣಗಳಿಗೆ ಬೇರಾಗಿ (ಸಾಕ್ಷಿಕನಾಗಿ) ಇರುವಿ. ಆದುದರಿಂದ ಆ ಕರಣಗಳಿಗಾಗುವ ದುಃಖ ನಿನ್ನ ಅನುಭವವಲ್ಲ, ಇಂತಿದು ಸತ್ಯವೆಂದು ನಂಬು. ನೀನು ಕರಣರಹಿತನು. (ನೀನು ಪ್ರತ್ಯಗಾತ್ಮನಿರುವಿ ಎಂಬ ತಾತ್ಪರ್ಯ).

ಮನವದು ನೀನಲ್ಲವದರನುಭವ ದುಃಖ।
ವನು ನಿನಗೆಂದು ನೀನರಿವಡೆ ॥
ಮನವೆನಿತುಂಟು ಲೋಕದೊಳನಿತೆಲ್ಲರೊ।
ಳನುಭವಿಸುವ ಬಾಧೆ ನಿನಗಕ್ಕು ॥ 8 ॥

ಆ ಮನ ನೀನಲ್ಲ, ಮನಸ್ಸು ಅನುಭವಿಸುವ ದುಃಖ ನಿನಗಿಲ್ಲ, ಯಾಕೆಂದರೆ ಮನವಡಗಿದ ನಿದ್ರೆಯಲ್ಲಿ ನೀನಿರುವಿ. ಆದರೆ ಮನದ ದುಃಖಗಳ ಭಾವ ನಿನಗಿಲ್ಲ. ಈಗ ಮನದನುಭವದ ದುಃಖಗಳು ನಿನಗಿವೆ, ಎಂದು ಭಾವಿಸುವದಾದರೆ ಲೋಕದಲ್ಲಿ ಎಷ್ಟು ಪ್ರಕಾರದ ಮನಸ್ಸುಗಳಿವೆಯೋ ಅವೆಲ್ಲವುಗಳ ದುಃಖಗಳನ್ನು (ಎಡಬಿಡದೆ) ಅನುಭವಿಸುವ ಕೇಡು ನಿನಗೆ ಸಂಭವಿಸುವದು.

– ಆತ್ಮಂಗೆ ಕುಲಗೋತ್ರಾದಿ ಭ್ರಾಂತಿ ವಿಲಕ್ಷಣತ್ವ ನಿರುಪಣೆ –

## 8ನೇ ಸೂತ್ರ

**ಇಲ್ಲದಜಾತ್ಯಾದಿಗಳು ತನ್ನವೆನೆ ತೋರು ।**
**ವೆಲ್ಲಜಾತ್ಯಾದಿ ತನ್ನವೆನಿಕ್ಕು ॥**

ಇಲ್ಲದ ಜಾತಿ, ವರ್ಣ, ಆಶ್ರಮಗಳು ತೋರುವದರಿಂದ ಅವು ತನ್ನವು ಎಂದು ಭಾವಿಸುವನು. ಹಾಗಾದರೆ ತೋರುವ ಎಲ್ಲ ಜಾತ್ಯಾದಿಗಳು ತನ್ನವು ಎಂದು ತಿಳಿಯಬೇಕಾಯಿತು.

ಜನನ ಮರಣಮಿವು ತನಗುಂಟೆ ರೇತದ।
ಹನಿಯೊಳಾತ್ಮನು ಸಿಲುಕುವನಲ್ಲ॥
ತನುವಿರಹಿತ ನಪರಿಯಮಿತ ನಖಂಡಿತ।
ನನುಪಮಾ ದ್ವೈತನಚಲನಾಗಿ ॥ 1 ॥

ಜನನ ಮರಣಗಳು ಯಾರಿಗೆ ? ತನಗೆ (ಆತ್ಮನಿಗೆ) ಉಂಟೇ ? ತಾನು ಹುಟ್ಟಲೇ ಇಲ್ಲ, ತಂದೆ ತಾಯಿಯ ರೇತೋರಕ್ತ ಹನಿಗಳಲ್ಲಿ ಜನಿಸುವ ಈ ತೋರತನುವನ್ನು ತಾನು ಅರಿಯುವದರಿಂದ ರೇತದ ಹನಿಯೊಳು ಆತ್ಮನು ಸಿಲುಕುವವನಲ್ಲ. (ವಿಷಯಗಳಲ್ಲಿ ಇಂದ್ರಿಯಗಳು ಸಿಕ್ಕುಬೀಳುವವು) ಆತ್ಮನು ತನುವಿಲ್ಲದವನು, ಇತಿ-ಮಿತಿಯಿಲ್ಲದ ಅಖಂಡಿತನು, ಅನುಪಮನು, ಅದ್ವೈತನು ಅಚಲನು (ನಿಷ್ಕ್ರಿಯನು) ಇದ್ದಾನೆ. (ಅವನೇ ನೀನಿರುವಿ.)

ಕನಸಿನೊಳರಸಾಗಿ ಮಗುಳೆ ತನ್ನಯ ಶಿರ ।
ವನು ನೀಗಿದುದನು ಕಾಣ್ಬಂದದಿ ॥
ಜನನವಾದುದು ಮೃತಿ ತನಗಾದುದೆಂಬ ಭಾ ।
ವನೆ ವಿಚಾರಿಸಿ ನೋಡೆ ಪುಸಿಯಕ್ಕು ॥ 2 ॥

ಕನಸಿನಲ್ಲಿ (ಒಬ್ಬ ಬಡವ) ಅರಸನಾದ ಮತ್ತೆ ತಾನು ಯುದ್ಧ ಮಾಡಿದ. ವೈರಿಗಳಿಂದ ತನ್ನ ಶಿರವನ್ನು ಕಡಿಸಿಕೊಂಡ. ಈ ಕನಸಿನ ದೃಶ್ಯವನ್ನು ನೋಡುವ ಪುರುಷನೂ ತಾನೇ ಆಗಿದ್ದಾನೆ. ಎಚ್ಚತ್ತ ಬಳಿಕ ತಾನು ಮೊದಲಿನಂತೆ ಇದ್ದಾನೆ. ಆದ್ದರಿಂದ ಪುಸಿಯಾಗಿ ತನ್ನೊಳು ತೋರುವ ಕನಸು ದಿಟವಲ್ಲ. ಇದರಂತೆ (ದೇಹ ನೋಡಿ) ಅಜ್ಞಜೀವನು ತನಗೆ ಜನನವಾಯಿತು ಮರಣವಾಗುವದು ಎಂದು ಪುಸಿಯಾಗಿ ಭಾವಿಸುವನು, ಮೈತ್ರಾ ವಿಚಾರಿಸಿ ನೋಡು ದೇಹದ ಜನನ ಮರಣಗಳು ಮತ್ತು ಈ ವಿಕಾರಗಳು ತನಗೆಂದು ಬಾಧೆಪಡುವವನನ್ನು ನೀನು ಅರಿಯುವದರಿಂದ ನೀನೀ ದೃಶ್ಯಗಳಿಗೆ ವಿಲಕ್ಷಣಳಾಗಿರುವಿ. ಆದ್ದರಿಂದ ಜನನ ಮರಣಗಳು ಪುಸಿದೋರಿಕೆ ಮಿಥ್ಯೆ. ಅದರೆ (ಜನನಾದಿಗಳ ಅನುಭವ ನನ್ನದೆಂದು ಭಾವಿಸಿದರೆ ನೀನಿನ್ನೂ ಕನಸಿನಲ್ಲಿರುವಿ, ಎಂಬುದು ಸತ್ಯವಾದೀತು !)

ಜನನವಿಲ್ಲದವಂಗೆ ತನುವುಂಟೆ ತನುವಿಲ್ಲ ।
ದನಿಗೆ ವರ್ಣಾಶ್ರಮ ಧರ್ಮವು ॥
ಇನಿತನುಸುರಲುಂಟೆ ತಿಳಿದು ನೋಡಲ್ಕೆ ಮಾ- ।
ನಿನಿ ಸಂವಿದಾತ್ಮನೊಳವು ಮಿಥ್ಯೆ ॥ 3 ॥

ಮಾನಿನಿ ಮೈತ್ರೇಯಿ, ಜನನವಿಲ್ಲದ, ದೇಹದ ಜನನ ಅರಿವ, ಶುದ್ಧ ಸಂವಿತ್ ತಾನಾದ ಆತ್ಮನಿಗೆ ದೇಹ ಉಂಟೇ ? ದೇಹವಿಲ್ಲ. ದೇಹವೇ ಇಲ್ಲದ ಮೇಲೆ ಅದಕ್ಕೆ ಸಂಬಂಧಿಸಿದ ವರ್ಣಾಶ್ರಮ ಧರ್ಮವ ಆತ್ಮನಿಗೆ ಹೇಳಬೇಕೆ ? ಇಂತು ತಿಳಿದು ನೋಡಲು ಅರಿವು ತಾನಾದ ನಿಜನಿಷ್ಠನಲ್ಲಿ ದೇಹದ ಧರ್ಮಗಳು ಮಿಥ್ಯೆ (ನಿಜವಾಗಿರದೆ ಪುಸಿಯಾಗಿ ತೋರುವವು)

ತನು ವಿಪ್ರನೊ ಮೇಣು ಜೀವಾತ್ಮನೆ ವಿಪ್ರನೊ ಮೇಣು ।
ತನು ಜೀವರುಗಳೊಂದಿ ವಿಪ್ರನೊ ॥
ತನುವಿಗಾತ್ಮನಿಗೆ ಕೇಳುಭಯಕ್ಕೆ ವಿಪ್ರತ್ವ ।
ವನು ಪೇಳಲರಿದಾಗಿ ಭ್ರಮೆಯದು ॥ 4 ॥

ವಿಪ್ರ (ಬ್ರಾಹ್ಮಣ) ನೆಂದರೆ ಯಾರು ? ಜಡವಾದ ಶರೀರವೋ ? ಚೈತನ್ಯರೂಪ ಜೀವಾತ್ಮನೋ ? ಅಥವಾ ಶರೀರ ಜೀವಾತ್ಮರ ಒಕ್ಕೂಟವೋ । ಶರೀರ ಮತ್ತು ಆತ್ಮಾ ಈರ್ವರಿಗೆ ಬ್ರಾಹ್ಮಣತ್ವವನ್ನು ಹೇಳುವಿ ಎಂದರೆ ಅದು ಸಿದ್ಧಿಸದು. ಏಕೆಂದರೆ ಈ ದೇಹ ಬಿದ್ದ ಬಳಿಕ ಆತ್ಮನೋರ್ವನೆ ನಿರ್ವಾಣ ಹೊಂದುವನು (ಬಯಲಿಗೆ ಬಯಲಾಗುವನು)

ಆದ್ದರಿಂದ ಆತ್ಮ ಮತ್ತು ದೇಹ ಇವರಿಬ್ಬರಿಗೂ ವಿಪ್ರತ್ವವನ್ನು ಹೇಳಲು ಬಾರದ್ದರಿಂದ ನಾನು ಬ್ರಾಹ್ಮಣನೆಂಬುದು ಭ್ರಮೆ.

ಭೂತಸಂಜಾತಮಾದೀ ತನುವನು ವಿಪ್ರ।
ಜಾತಿಯೆಂದೊಡೆ ಭೂತಚಯದಿಂದೆ॥
ಜಾತಮಾದಖಿಳಜಾತಿಯ ತನುಗಳು ವಿಪ್ರ।
ಜಾತಿಗಳಹವದುಘಟಿಸದು ॥ 5 ॥

ಪಂಚಮಹಾಭೂತಗಳಿಂದ ಹುಟ್ಟಿದ ಈ ದೇಹವು ಬ್ರಾಹ್ಮಣ ಜಾತಿಯದೆಂದರೆ. ಎಲ್ಲ ದೇಹಗಳು ಇವೇ ಐದು ಭೂತಗಳಿಂದ ಹುಟ್ಟಿರುವವು. ಅಂದ ಬಳಿಕ ಎಲ್ಲಾ ದೇಹಗಳು ಬ್ರಾಹ್ಮಣ ಜಾತಿಗೆ ಸಂಬಂಧಪಟ್ಟವುಗಳಾದವು. ಎಲ್ಲರೂ ಬ್ರಾಹ್ಮಣರಾದ ಬಳಿಕ ತನ್ನದೊಂದು ಈ ಜಾತಿಯ ಪ್ರತ್ಯೇಕತೆ ಘಟಿಸಲಾರದು ಮತ್ತು ದೇಹಕ್ಕೆ ನೀನು ಬ್ರಾಹ್ಮಣನೆಂದು ಕರೆದರೆ ದೇಹ ಮೃತವಾದಾಗ ಮಕ್ಕಳು ದೇಹವನ್ನು ದಹಿಸಲು ಬ್ರಹ್ಮಹತ್ಯಾ ದೋಷವು ಮಕ್ಕಳಿಗೆ ಬರಬೇಕಾದೀತು !

ಜೀವಾತ್ಮನೆ ವಿಪ್ರನೆನೆ ಬಳಿಕಲ್ಲಿಕೇ।
ಳೀವಿಶ್ವದೊಳು ಬಹು ವಿಧವಾದ॥
ಜೀವರೆಲ್ಲರು ವಿಪ್ರರೆನಬೆಹುದರಿಂದೆ।
ಜೀವನೆ ವಿಪ್ರನಲ್ಲಿದು ಸತ್ಯ ॥ 6 ॥

ಸರ್ವದೇಹಗಳಲ್ಲಿ ''ನಾನು ನಾನು'' ಎನ್ನುವ ಜೀವನೆ ಬ್ರಾಹ್ಮಣನು, ಎಂದು (2ನೆ ಪಕ್ಷ) ಗ್ರಹಿಸಿದರೆ ಕೇಳು. ಈ ಜಗತ್ತಿನಲ್ಲಿ ಅನೇಕ ಬಗೆಯ ಜನರೆಲ್ಲರೂ ನಾನು–ನಾನೆಂಬ ಜೀವಭಾವದಿಂದಲೇ ವರ್ತಿಸುವರು. ಆ ಜೀವರೆಲ್ಲರಿಗೆ ಬ್ರಾಹ್ಮಣರೆಂದೇ ಕರೆಯಬೇಕಾಗುವದು. ಆದ್ದರಿಂದ ಜೀವನು ಬ್ರಾಹ್ಮಣನಲ್ಲ ಎಂಬುದು ಸತ್ಯ. (ಇದೇ ರೀತಿ ತಾನು ವೀರಶೈವನಲ್ಲ ಶೂದ್ರನಲ್ಲ ವೈಶ್ಯನಲ್ಲ ಕ್ಷತ್ರಿಯನಲ್ಲಎಂದು ತಿಳಿಯಬೇಕು).

ತನು ಜೀವರೊಂದುಗೂಟವೆ ವಿಪ್ರನೆಂದೊಡೆ।
ತನುಜೀವರೆನಿತುಂಟು ಜಗದೊಳು ॥
ಅನಿತಲ್ಲವನುವಿಪ್ರರೆನ ವೇಳ್ಕುಮದರಿಂದೆ।
ತನು ಜೀವರನು ವಿಪ್ರರೆನಲಿಲ್ಲ॥ 7 ॥

(ಬಳಿಕ 3ನೇ ಪಕ್ಷದಲ್ಲಿ) ದೇಹ ಹಾಗು ಜೀವ ಈರ್ವರೂ ಕೂಡಿಕೊಂಡಿರುವ ಕೂಟಕ್ಕೆ ವಿಪ್ರನೆಂದು ಕರೆಯುವದಾದರೆ, ಜಗತ್ತಿನಲ್ಲಿ ದೇಹ ಮತ್ತು ಜೀವರುಗಳ ಒಡಗೂಟವೆಷ್ಟಿರುವವೋ ಅಷ್ಟೆಲ್ಲಕ್ಕೂ ವಿಪ್ರರೆಂದು ಹೇಳಬೇಕಾಗುವದು. ಆದ್ದರಿಂದ ದೇಹ ಮತ್ತು ಜೀವರೀರ್ವರು ಕೂಡಿಕೊಂಡಿರುವದಕ್ಕೂ ಬ್ರಾಹ್ಮಣರೆಂದು ಕರೆಯಲಾಗದು.

ಭಾವ ಭೇದದೊಳಿಂತು ತೋರುವ ವಿಪ್ರಾದಿ।
ಭಾವನೆ ತಾನುಮೀ ಜಗವೆಂಬ ॥
ಭಾವದ ಬಳಕೆ ಭಾವಕಿ ಭಾವಿಸಲು ಪುಸಿ।
ಭಾವಾತೀತನು ತಾನೆ ಪರಮಾತ್ಮ॥ 8 ॥

ಭಾವಜ್ಞಳೇ, ಇಂತು ತನ್ನಲ್ಲಿ ಭೇದ ರೂಪಿನ ತನುಭಾವ ಹಾಗೂ ಬ್ರಾಹ್ಮಣಾದಿ ಜಾತಸೂತಕ ಭಾವಗಳನ್ನು ಆರೋಪಿಸಿಕೊಂಡೆ ಹಾಗು ಅನೇಕ ಬಗೆಯ ದೇಹ ಮತ್ತು ಜಾತಿ ಆಶ್ರಮಗಳಿಂದೆಸೆವ ಜಗತ್ತು ಮನದಲ್ಲಿ ತೋರುವದು. ''ತಾನು ಇದಿರು'' ಎಂಬ ಈ ಭೇದರೂಪಿನ ತೋರಿಕೆ ಎಲ್ಲವೂ ತನ್ನ 'ಭಾವದ ಬಳಕೆ' ಮನದ ಕಲ್ಪನಾವಿಲಾಸವೆಂದೇ ತಿಳಿ. ತೋರಿಕೆ ಅಥವಾ ಭಾವ ಸತ್ಯವಾಗಿರುವ ವಸ್ತುವಲ್ಲವಾದ್ದರಿಂದ ಅದು ಪುಸಿಯಾಗಿದೆ. (ಭಯಕಾರಕ) ದ್ವೈತರೂಪಿನ ಈ ಭಾವ ವಿನ್ಯಾಸವನ್ನು ತ್ಯಜಿಸಿದರೆ ತಾನು ಭಾವಾತೀತನಾದ ಪರಮಾತ್ಮನೇ ಇರುವನು.

ನಿನಗೆಂತು ನಿತ್ಯ ನೈಮಿತ್ತಿಕ ಕಾಮ್ಯಾದಿ।
ಯೆನಿಪ ಕರ್ಮದೊಳಧಿಕಾರವು ॥
ಜನನವಿಲ್ಲದ ನಿಷ್ಕಳಾತ್ಮನಿಗಾಶ್ರಮ।
ವಿನಿತಿಲ್ಲವಾಗಿ ತದ್ವಿಧಿ ಮಿಥ್ಯೆ ॥ 9 ॥

ನಿತ್ಯ, ನೈಮಿತ್ತಿಕ, ಕಾಮ್ಯ, (ಟಿ–3) ಪ್ರಾಯಶ್ಚಿತ್ (ಟಿ–4) ಕರ್ಮಗಳಲ್ಲಿ ನಿನಗೆಂತು ಒಡೆತನವಿದೆ? (ಇಲ್ಲೆಂಬ ಭಾವ) ಏಕೆಂದರೆ ನಿನಗೆ ಜನ್ಮವಿಲ್ಲ, ಜನ್ಮವಿಲ್ಲದವಗೆ ದೇಹದ ಕರ್ಮಾದಿಗಳಿಲ್ಲ(ಟಿ–1) ನೀನು ನಿರವಯವನು, ನಿಷ್ಕಳನು ಆದ್ದರಿಂದ ದೇಹ ಬುದ್ಧಿಯುಳ್ಳ ಜನರು ಪಾಲಿಸುವ ವರ್ಣಾಶ್ರಮ ವಿಧಿಗಳು ನಿನಗಿಲ್ಲ, ಇದೆ, ಎಂಬುವ ಕರ್ಮನಿಷ್ಠರ ನುಡಿ ಮಿಥ್ಯೆ. (ಟಿ–2) (ತಾನಿಲ್ಲದ ಕಡೆ ತೋರುತ್ತಿರುವದೇ ಮಿಥ್ಯೆ, ಇದೆ, ಇಲ್ಲವೆನ್ನಲಶಕ್ಯವಾಗಿ ಜ್ಞಾನಮಾತ್ರದಿಂದ ಅಳಿವುದೇ ಮಿಥ್ಯೆ. ತ್ರಿಕಾಲದಲ್ಲಿ ನಿಷೇಧಿಸಲ್ಪಡತಕ್ಕದ್ದೇ ಮಿಥ್ಯೇ. ಅರ್ಥವಿಲ್ಲದ ಮಿಥ್ಯೆ ಅರಿತರೆ ಸತ್ಯ ತನ್ನಲ್ಲಿಯೇ ಸಿದ್ಧಿಸುವದು.)

[ ಟಿಪ್ಪಣಿ :– (1) ಸಂಧ್ಯಾವಂದನೆ, ಅರ್ಚನೆ ಇತ್ಯಾದಿ ನಿತ್ಯ *ಕರ್ಮ*. (2) ಶ್ರಾದ್ಧ ಗ್ರಹಣಕಾಲಗಳಲ್ಲಿ ಮಾಡುವದು *ನೈಮಿತ್ತಿಕ ಕರ್ಮ*. (3) ಫಲಾಪೇಕ್ಷೆಯಿಂದ ಮಾಡುವದು *ಕಾಮ್ಯಕರ್ಮ*. (4) ತಾನು ಮಾಡಿದ ಅಪರಾಧ ಒಪ್ಪಿಕೊಂಡು ಅದರ ನಿವಾರಣೆಗಾಗಿ ಮಾಡುವದು *ಪ್ರಾಯಶ್ಚಿತ್ ಕರ್ಮ*. ]

– ಇತಿ ಆತ್ಮನಿಗೆ ಜಾತ್ಯಾಶ್ರಮ ಧರ್ಮ ನಿರಾಕರಣ ನಿರೂಪಣೆ –

## 9ನೇ ಸೂತ್ರ

ಗಗನದಂತಿರೆ ನಿರವಯವನೆನಿಸುವಾತ್ಮ
ನಿಗೆ ಬಂಧಮೋಕ್ಷದವಿಧಿಯುಂಟೆ ॥

ಆಕಾಶದಂತೆ ನಿರವಯವನಾಗಿರುವ ಆತ್ಮನಿಗೆ (ತನಗೆ) ಬಂಧ–ಮೋಕ್ಷದ ವಿಧಿ (ಧರ್ಮಾಧರ್ಮದ ಕಟ್ಟಳೆ) ಉಂಟೇ ? ಇಲ್ಲೆಂಬ ಭಾವ.

ನಿರವಧಿ ನಿರುಪಮ ನವಿಕಾರಿ ನಿರ್ಗುಣ ।
ನಿರುಪಾಧಿ ನಿರ್ಮಲನೆನಿಸುವ ॥
ಪರಮಾತ್ಮಕನು ನಿನಗಾವಾವ ತೆರದಿಂದೆ ।
ದೊರಕೊಳ್ಳಲರಿಯದು ಭವಬಂಧ ॥ 1 ॥

ನೀನು ನಿರವಧಿ (ಕಾಲಮೀರದವನು), ನಿರುಪಮ, ವಿಕಾರವಿಲ್ಲದ, ನಿರ್ಗುಣ. ಅವಿದ್ಯಾ ಉಪಾಧಿಯಿಲ್ಲದ, ನಿರ್ಮಲನೆನಿಸುವ ಪರಮಾತ್ಮನೆ ಇರುವಿ. ಆದ್ದರಿಂದ ನಿನಗೆ ಯಾವ ರೀತಿಯಿಂದಲೂ ಜನನ ಮರಣರೂಪ ಭವ–ಬಂಧವು ಪ್ರಾಪ್ತವಾಗದು. (ಏಕೆಂದರೆ ನೀನು ನಿತ್ಯ ಸುಖರೂಪನು, ಏಕನು, ಜ್ಞಾನನಿಧಿಯು, ನಿಷ್ಕಳನು ನಿರವಯವನು ಮತ್ತು ನಿತ್ಯ ಪರಿಪೂರ್ಣನಾಗಿರುವದರಿಂದ) ನೀನು ನಿತ್ಯ ಮುಕ್ತನಿರುವಿ.

ನಿನ್ನಿಂದ ಭವಬಂಧವೆನ್ನದಿರನ್ಯರಿಂ ।
ದೆನ್ನದಿರ್ನೀನು ಸುಖಾದ್ವಯ ॥
ಚಿನ್ನಿಧಿಯಾಗಿ ನಿಷ್ಕಳನಾಗಿ ಪೂರ್ಣತೆ ।
ಯಿಂ ನಿತ್ಯನಾಗಿರ್ಪ ಕತದಿಂದ ॥ 2 ॥

ನಿನಗೆ ನಿನ್ನಿಂದಲೂ ಬಂಧನವಿಲ್ಲ ಅಥವಾ ಅನ್ಯರಿಂದಲೂ ಬಂಧನವಿಲ್ಲ ಏಕೆಂದರೆ ನೀನು ನಿತ್ಯ ಸುಖರೂಪನು, ಏಕನು, ಜ್ಞಾನ ನಿಧಿಯು, ನಿಷ್ಕಳನು (ನಿರವಯವನು) ಮತ್ತು ನಿತ್ಯ ಪರಿಪೂರ್ಣನಾಗಿರುವಿ.

ತನ್ನಿಂದ ಬಂಧವೆಂದೊಡೆ ತನುರಹಿತನ- ।
ಭಿನ್ನಾತ್ಮಕನು ತಾನೆ ತನ್ನನು ॥
ತನ್ನಿಂದೆ ಕಟ್ಟಿಕೊಳ್ಳಲು ಶಕ್ಯವಲ್ಲಾಗಿ ।
ತನ್ನಿಂದ ಬಂಧವೆನಲಿಲ್ಲ ॥ 3 ॥

ತನ್ನಿಂದ ತನಗೆ ಬಂಧವೆನ್ನುವೆಯಾ ? ತನುವಿಲ್ಲದವನು ಅಭಿನ್ನಾತ್ಮಕನು (ಸ್ವಗತಾದಿ ಭೇದರಹಿತನು) ತನ್ನಿಂದ ತನ್ನನ್ನು ತಾನು ಕಟ್ಟಿಕೊಳ್ಳಲು ಶಕ್ಯವಿಲ್ಲ, ಆದ್ದರಿಂದ ತನ್ನಿಂದ ಬಂಧವೆನ್ನಬಾರದು.

ಅನ್ಯರಿಂದೆಂದೊಡನನ್ಯಾದ್ವಯಾತ್ಮನೊ।
ಳನ್ಯರಿಲ್ಲಾಗಿ ಕಟ್ಟುವರಿಲ್ಲ॥
ಧನ್ಯೆ ಮೈತ್ರೇಯಿ ನೀನಿಂತು ವಿಚಾರಿಸ।
ಲನ್ಯರಿಂದವೆ ಬಂಧವೆನಲಿಲ್ಲ॥ 4 ॥

ಅನ್ಯರಿಂದ ತನಗೆ ಬಂಧವೆನ್ನುವೆಯಾ ? ತಾನು ಅದ್ವಯಾತ್ಮನು ಎಂದೆಂದು ಒಬ್ಬನೇ. ತನಗನ್ಯರಾಗಿ ಯಾರೂ ಇಲ್ಲವಾಗಿ ಕಟ್ಟುವವರಿಲ್ಲ. (ಆದ್ದರಿಂದ) ಅನ್ಯರಿಂದಲೂ ತನಗೆ ಬಂಧವೆನ್ನಬಾರದು. ಇಂತು ವಿಚಾರಿಸಲು ಮೈತ್ರೇಯಿ ನೀನು ಧನ್ಯಳು, ನಿತ್ಯಮುಕ್ತಳು.

ಜಡ ಮೂರ್ತದೊಳು ಬಂಧವದನೊಪ್ಪಲಹುದು ಪೇ।
ಳ್ಪಿಡಿದು ನಿನ್ನನು ಹೆಡಗೈಯನು ॥
ಜಡಿದು ಕಟ್ಟಿದರಾರು ಚಿದಮೂರ್ತ ಪರಿಪೂರ್ಣ।
ದೊಡಲು ನೀನದರಿನೆಲ್ಲವು ಮಿಥ್ಯೆ ॥ 5 ॥

ಸಾವಯವ ಮತ್ತು ಜಡವಾಗಿರುವ ವಸ್ತುವಿಗೆ ಬಂಧವನ್ನು ಒಪ್ಪಬಹುದು. ನಿರವಯವನು (ಅಮೂರ್ತನು) ಅಜಡನು, ಚಿದ್ರೂಪನು ಮತ್ತು ಪರಿಪೂರ್ಣ ಆತ್ಮನೆನಿಪ ನಿನ್ನನ್ನು ಹಿಡಿದು ಹೆಡಮುರಿಗೆ ಕಟ್ಟಬಲ್ಲವರಾರು ? ಆದ್ದರಿಂದ ತೋರುವದೆಲ್ಲವೂ ಮಿಥ್ಯೆ.

ಆರು ನಿನ್ನಯ ಕಾಲ್ಗೆ ಕಾರಣಮುಳಿದವಿ- ।
ಚಾರದಿಂದವೆ ಸಂಕಲೆಯನಿಕ್ಕಿ ॥
ಭೂರಿ ದುಃಖವ ನುಣಿಸುವರಿದು ತಿಳಿ ಮಿಥ್ಯೆ ।
ಯಾರೈ ನೀನದ್ವಯನಹುದಾಗಿ ॥ 6 ॥

ಕಾರಣವಿಲ್ಲದೆ ಅವಿಚಾರದಿಂದ ನಿನ್ನ ಕಾಲಿಗೆ ಸಂಕೋಲೆಯನ್ನು ಕಟ್ಟಿ, ನಿನಗೆ ಅಖಿಳ ದುಃಖ ಕೊಡುವವರು ಯಾರಿದ್ದಾರೆ ? ನೀನು ಯಾವಾಗಲೂ ಅದ್ವಯ (ಎರಡಿಲ್ಲದವ) ನಾಗಿರುವದರಿಂದ ಇದೆಲ್ಲವೂ ಮಿಥ್ಯೆ ಎಂದು ತಿಳಿ.

ಪುಸಿಯಾಗಿ ಭವಬಂಧವದು ಮೋಕ್ಷವೆಂಬುದು।
ಪುನಿ ನಿನಗಿದು ನಿನ್ನ ಭ್ರಮೆಯಿಂದ ॥
ಪಸರವಿಟ್ಟೆಸೆವುದು ನಿಜದಂತೆ ನಾಡೆ ಭಾ।
ವಿಸಲಿದೆಲ್ಲವು ಮಿಥ್ಯೆಯೆನಿಪುದು ॥ 7 ॥

ಆದ್ದರಿಂದ ಭವಬಂಧವು ಮತ್ತು ಮೋಕ್ಷವೆಂಬುದು ಪುಸಿ ( ಮಿಥ್ಯೆ). ಇದೆಲ್ಲ ನಿನ್ನ ಅಜ್ಞಾನವೇ ಹೊರಗೆ ಚಿಮ್ಮಿ ಪ್ರಸಾರ ಪ್ರವರ್ತಕಗೊಂಡು ನಿಜದಂತೆ ಭಾಸವಾಗುವುದು. ಸಮ್ಯಗ್ ರೀತಿಯಿಂದ ವಿಚಾರಿಸಲಾಗಿ ಎಲ್ಲವೂ ಮಿಥ್ಯೆಯೆನಿಸುವದು.

ಅದರಿಂದೆ ಬಂಧಶಾಸ್ತ್ರದ ಮುಕ್ತಿ ಪೇಳ್ವಶಾ।
ಸ್ತ್ರದ ಗತಿದ್ವಯಮಿವು ತನ್ನೊಳು ॥
ಪದವಿಡಲರಿಯವೆಂಬುದನರಿದಾತನೆ।
ಪದುಳದಿಂದವೆ ತನ್ನನರಿದಾತ ॥ 8 ॥

ಆದ್ದರಿಂದ ಅಜ್ಞಾನದಿಂದ ಬಂಧ ಮತ್ತು ಜ್ಞಾನದಿಂದ ಮೋಕ್ಷ ಹೀಗೆ ಹೇಳುವ ಶಾಸ್ತ್ರದ ಉಭಯ ಗತಿಗಳು (ಗುರಿಮುಟ್ಟುವ ಮಾರ್ಗಗಳು) ತನ್ನಲ್ಲಿ ಪಾದವನ್ನಿಡಲಾರವು (ಟಿ) ಇದನ್ನು ಅರಿದಾತನೆ ಹದುಳ (ಸಂತೋಷ)ದಿಂದ ತನ್ನ ತಾನು (ಸರಿಯಾಗಿ) ತಿಳಿದಾತನು.

ಪುಸಿ ಕನಸಿನ ಬಂಧವದು ಪುಸಿ ಮೋಕ್ಷವಾ।
ಪುಸಿಯಾದ ಕಲ್ಪಿತ ಜೀವಂಗೆ ॥
ಪೆಸರಿಡಲಾವಾವ ತೆರನಾದೊಡೇನದು।
ಪುಸಿ ನಿಜಾತ್ಮನೆ ನಿತ್ಯ ಮುಕ್ತನು ॥ 9 ॥

ಕಲ್ಪಿತ ಜೀವನಿಗೆ ಪುಸಿಯಾದ ಬಂಧ ಮತ್ತು ಪುಸಿಯಾದ ಮೋಕ್ಷಗಳು ಕನಸಿನಂತೆ ತೋರುವವು. ಜೀವಂಗೆ ಬದ್ಧ ಅಥವಾ ಮುಕ್ತ ಎಂದು ಯಾವ ಹೆಸರಿಟ್ಟು ಕರೆದರೇನು? ಜೀವನೂ ಪುಸಿ ಮತ್ತು ಬಂಧ ಮೋಕ್ಷಗಳೂ ಪುಸಿ (ಎಂದರೆ ಅಧ್ಯಾಸರೂಪು) ನಿಜಾತ್ಮನು (ತಾನು) ಮಾತ್ರ ನಿತ್ಯಮುಕ್ತನು.

ವೇದವೀ ಮೂರು ಕಾಂಡದೊಳಾವ ತೆರದಿಂದ।
ಬೋಧಿಸಲೇನು ವಿಚಾರಿಸೆ ॥
ಭೇದರೂಪಿನ ಬಂಧ ಮೋಕ್ಷವೆಂಬವು ಪುಸಿ।
ವಾದವೇನದ್ವೈತ ಪದದಲ್ಲಿ ॥ 10 ॥

ಕರ್ಮ, ಉಪಾಸನಾ ಮತ್ತು ಜ್ಞಾನವೆಂಬ ಈ ಮೂರು ಕಾಂಡಗಳಲ್ಲಿ ವೇದವು ಯಾವುದೇ ರೀತಿಯಿಂದ ಬೋಧಿಸಿದರೂ ತನಗೆ ಹೊಸದಾಗಿ ಆಗಬೇಕಾದುದೇನಿದೆ? ಸರಿಯಾಗಿ ವಿಚಾರಿಸಲು ಭೇದಜ್ಞಾನದಿಂದ ತೋರುವ ಬಂಧ ಮೋಕ್ಷಗಳು ಕಾಲ್ಪನಿಕವಾಗಿವೆ. ಅಂದ ಬಳಿಕ ಅಭೇದಾತ್ಮ ಸ್ವರೂಪದಲ್ಲಿ ಬಂಧಮೋಕ್ಷ ಕುರಿತು ವಾದವೇನಿದೆ ? ತಾನು ನಿತ್ಯ ಮುಕ್ತನೆಂಬುದು ನಿರ್ವಿವಾದವು.

[ ಟಿಪ್ಪಣಿ :– ಬಂಧ ಮೋಕ್ಷವೆರಡೂ ಅಧ್ಯಾಸರೂಪೆಂದು ಎಲ್ಲ ಶಾಸ್ತ್ರಗಳು ಮತ್ತು ನಿಜಗುಣರು ಪ್ರತಿಪಾದಿಸುತ್ತಾರೆ. 'ಯದಾ ಅಹಂ ತದಾ ಬಂದಃ। ಯದಾನಾಹಂ ತದಾ ಮೋಕ್ಷಃ (ಯೋಗವಾಶಿಷ್ಠ) ]

– ಇತಿ ಆತ್ಮನಿಗೆ ಬಂಧಾದಿ ನಿರಾಕರಣ ನಿರೂಪಣೆ –

## 10ನೇ ಸೂತ್ರ

**ತಾನಾಗಿತೋರ್ಪುದು ಜಗವಿದು ದೇಹಾದಿ ।**
**ತಾನೆಂಬಧ್ಯಾಸದ ಬಲದಿಂದೆ ॥**

ದೇಹ, ಇಂದ್ರಿಯ, ಮನಸ್ಸು, ಅಹಂಕಾರ, ಮೊದಲಾದ ಜಡ ದೃಶ್ಯಗಳು ತಾನೆಂಬ ತಪ್ಪು ತಿಳುವಳಿಕೆ (ಅಧ್ಯಾಸ) ಬಲದಿಂದ ಈ ಜಗವು ಇಚ್ಛಾ ಪ್ರಯತ್ನವಿಲ್ಲದೆ (ತಾನಾಗಿ) ತೋರುವದು. (ಅಹಂ ಭ್ರಮೆ ಇಲ್ಲದಾಗ ಜಗತ್ತು ತೋರದು).

**ಕುಂದದೆ ದೇಹಿನಾನೆಂದು ಸಾವಯವ ನಾ ।**
**ನೆಂದು ತೋರುವ ತನ್ನ ಭ್ರಮೆಯಿಂದೆ ॥**
**ಪೊಂದಿಕಾಣಪುದು ಜಗತ್ರಯವ್ವೆದೆ ತ ।**
**ನ್ನಂದದಿಂದವೆ ನೋಡಿದವಿಚಾರ ॥ 1 ॥**

ಎಡಬಿಡದೆ "ನಾನು ದೇಹ" ಅದರ ಅವಯವಗಳು (ಕರಣಗಳು) ನಾನು ಎಂದು ತನ್ನ (ಅಹಂ) ಭ್ರಮೆಯಿಂದ ತನ್ನಲ್ಲಿ ಈ ತೋರ್ಕೆ (ಕಲ್ಪನೆ)ಗಳು ಹುಟ್ಟಿದ ಸಮಕಾಲದಲ್ಲಿಯೇ ಬಾಹ್ಯದಲ್ಲಿ ಮೂರು ಲೋಕಗಳು (1ನೇ ಸಂಧಿ 8 ನೇ ಸೂತ್ರ 12 ನೇ ಪದ ನೋಡಿರಿ) ತನ್ನ ಗೂಡಿ ತಾನು ಬಗೆದಂತೆ ಕಾಣುವವು. ಇದು ಅವಿಚಾರವೆಂದೇ ತಿಳಿ.

**ತನ್ನತದ್ಭ್ರಮೆಯಿಂದೆ ಮುನ್ನವೆ ಜಗವಿದು ।**
**ತನ್ನಂತೆ ತೋರ್ಪುದು ದಿಟವೆನೆ ॥**
**ತನ್ನನೆ ಪುಸಿಯೆಂದು ತಿಳಿದಾಕ್ಷಣದೊಳು ।**
**ನನ್ನಿ ಮಿಥ್ಯಾತ್ಮಕವೆನಿಪುದು ॥ 2 ॥**

ಮೊದಲು ತನ್ನಲ್ಲಿ ದೇಹವೆ ತಾನೆಂಬ ಭ್ರಮೆ (ಪ್ರಥಮಾಧ್ಯಾಸ) ಹುಟ್ಟುವದು. ಆ ಬಳಿಕ ಜಗವಿದು ತನ್ನಲ್ಲಿ ತಾನು ಬಗೆದಂತೆ ಸತ್ಯವೆಂಬಂತೆ ತೋರುವದು (ಆದರೆ ಗುರು, ಶಾಸ್ತ್ರ, ಸ್ವಾನುಭವದಿಂದ) ತನ್ನನ್ನೆ ಪುಸಿಯೆಂದು (ಅಸ್ತಿತ್ವವಿಲ್ಲದ ಸುಳ್ಳು ತೋರಕೆಯೆಂದು) ತಿಳಿದಾಕ್ಷಣದಲ್ಲಿ ಜಗವು ನಿಶ್ಚಯವಾಗಿ ಮಿಥ್ಯೆಯನಿಸುವದು.

**ಕನಸಿನ ನೇಣ ಹಾವಿನ ಕೊರಡಿನ ತಸ್ಕ ।**
**ರನ ಮರೀಚಿಕೆಯೊಲು ತ್ರಿಜಗವು ॥**
**ಅನುದಿನವರಿಯೆ ತನ್ನೊಳು ಮಿಥ್ಯೆಯೆಂದು ಕಂ ।**
**ಡನೆ ದಿವ್ಯಯೋಗಿ ಭುವನದೊಳು ॥ 3 ॥**

ಸುಖಸುಪ್ತನಲ್ಲಿ ಕನಸ್ಸು, ಹಗ್ಗದಲ್ಲಿ ಹಾವು, ವೋಟಮರದಲ್ಲಿ ಕಳ್ಳ, ಮರುಭೂಮಿಯಲ್ಲಿ ಮೃಗಜಲ, ಇವು ಇಲ್ಲದೆ ಇದ್ದಂತೆ ತೋರುವವು. ಅದೇ ರೀತಿ ತನ್ನಲ್ಲಿ

ಮೂರು ಜಗತ್ತು ದಿನದಿನವೂ ತೋರುವಾಗಲೇ (ಇವು) ಮಿಥ್ಯೆ (ಪುಸಿದೋರಿಕೆ) ಎಂದು ನಿಶ್ಚಯಿಸಿದವನೇ ಭೂಮಂಡಲದಲ್ಲಿ "ದಿವ್ಯಯೋಗಿ" ಎನಿಸುವುವನು.

ತನುವಿದು ತನ್ನೊಳು ಸತಿ ಮಿಥ್ಯಾಧ್ಯಾಸವೆಂ।
ದೆನಿಪುದು ರಜ್ಜುಸ್ಸರ್ಪನ ವೋಲು ॥
ತನುಧರ್ಮವದು ಪರೀಕ್ಷಿಸಲು ಸತ್ಯಾಧ್ಯಾಸ।
ವೆನಿಪುದು ದ್ವಿಜನ ದ್ವಿಜತೆಯಂತೆ ॥ 4 ॥

ಸತಿ ಮೈತ್ರಾ, ಕೇಳು, ಹಗ್ಗದಲ್ಲಿ ಹಾವಿನಂತೆ ತನ್ನಲ್ಲಿ (ಪ್ರತ್ಯಗಾತ್ಮನಲ್ಲಿ) ಈ ದೇಹದ ಪ್ರತೀತಿ ಮಿಥ್ಯಾಧ್ಯಾಸವೆನಿಸುವದು (ಟಿ.ಗೆ ಪುಟ 122 ನೋಡಿ) ಮತ್ತು ಬ್ರಾಹ್ಮಣನ ಬ್ರಾಹ್ಮಣ್ಯದಂತೆ ದೇಹ ಧರ್ಮವು ಪರೀಕ್ಷಿಸಿ ನೋಡಲು, ಸತ್ಯಾಧ್ಯಾಸ ವೆನಿಸುವದು. (ಟಿ–2)

ಇತರೇತರಾಧ್ಯಾಸವೆನಿಪುದು ತನ್ನೊಳ್ಪ್ರ।
ಕೃತಿಯಾ ಪ್ರಕೃತಿಯೊಳಿರಲು ತಾನು ॥
ರತಿಯಿಂದೆ ಕೇಳಿದು ಕಾಂತೆ ಚಂದ್ರಮನ ಸು।
ಪ್ರತಿಬಿಂಬವೆರಡರೊಂದಿಕೆಯಂತೆ ॥ 5 ॥)

ಇತರ+ಇತರ+ಅಧ್ಯಾಸ ಇತರೇತರಾಧ್ಯಾಸ ಅಥವಾ ಅನ್ಯೋನ್ಯ ಅಧ್ಯಾಸ (ಟಿ–3) ಅಂದರೇನು? ಮೈತ್ರೇಯಿ ಪ್ರೀತಿಯಿಂದ ಆಲಿಸು. ಚಂದ್ರಕಾಂತಶಿಲೆ ಮತ್ತು ಅದರಲ್ಲಿ ಪ್ರತಿಫಲಿಸಿದ ಚಂದ್ರಮನ ಬಿಂಬ, ಇವೆರಡು ಅನ್ಯೋನ್ಯವಾಗಿ ಹೊಂದಿರಲು ಒಂದರ ಧರ್ಮಗಳು ಇನ್ನೊಂದರಲ್ಲಿ ಅವಭಾಸವಾಗಿ ತೋರುವವು. ಇದೇ ರೀತಿ ತನ್ನಲ್ಲಿ (ಆತ್ಮನಲ್ಲಿ) ಪ್ರಕೃತಿಯು ಮತ್ತು ಆ ಪ್ರಕೃತಿಯಲ್ಲಿ ತಾನು, ಇಂತು ಅನ್ಯೋನ್ಯವಾಗಿ ಆಭಾಸ ರೂಪದಿಂದ ಇರುವುದೇ ಇತರೇತರಾಧ್ಯಾಸ ಅಥವಾ ಅನ್ಯೋನ್ಯ ಅಧ್ಯಾಸ ವೆನಿಸುವದು.

ಇತರಾಧ್ಯಾಸವೆನಿಪುದು ನೋಡೆ ತನ್ನೊಳ್ಪ್ರ।
ಕೃತಿ ತಾನೆ ಪೊಳೆದು ಕಾಣಿಸುವದು ॥
ಮತಿವಂತೆ ತಿಳಿ ಮಣಿಯೊಳು ವರ್ಣವೆಂತಂತೆ।
ಸತಿ ಮಿಥ್ಯಾಧ್ಯಾಸಮಿಂತಿವು ನಾಲ್ಕು ॥ 6 ॥

ಮಂಗಲ ಮತಿವಂತೆ, ಈಗ ನಾಲ್ಕನೆಯದಾದ ಇತರಾಧ್ಯಾಸವೆಂದರೇನು ? (ಟಿ–4) ವಿಚಾರಿಸಿ ತಿಳಿ. ತನ್ನಲ್ಲಿ (ಆತ್ಮನಲ್ಲಿ) ಪ್ರಕೃತಿಯ ಅಂಶವಾದ ಜ್ಞಾನೇಂದ್ರಿಯ, ಮತ್ತು ಕರ್ಮೇಂದ್ರಿಯಗಳು (ಹಾಗೂ ಅವುಗಳ ಧರ್ಮಗಳು) ಕಾಣಿಸುವವು. ಇದಕ್ಕೆ ದೃಷ್ಟಾಂತ ಕೇಳು. ಒಂದು ಸ್ಪಟಿಕಮಣಿಯ ಸನ್ನಿಧಿಯಲ್ಲಿ ದಾಸಾಳ ಹೂ ಇರಲು ಶುಭ್ರವಾದ ಸ್ಪಟಿಕವು ಕೆಂಪು ವರ್ಣವುಳ್ಳದ್ದಾಗಿ ತೋರುವದು. ಸ್ಪಟಿಕದಂತಿರುವ ಆತ್ಮನ ಸನ್ನಿಧಿಯಲ್ಲಿ ಆತ್ಮನಿಗೆ ವಿಲಕ್ಷಣವಾದ ದೇಹಾದಿ ಇಂದ್ರಿಯ ವರ್ಗದ ಸಂಬಂಧ ಮಾತ್ರದಿಂದ ನಿರ್ವಿಕಾರನಾದ ಆತ್ಮನಲ್ಲಿ ಸಂಸಾರ ಕಲ್ಪನೆಯೇ ಇತರಾಧ್ಯಾಸವು. ಇಂತು ಆರೋಪಿತವಾಗಿ ತೋರುವ

ಮೇಲೆ ಹೇಳಿದ ನಾಲ್ಕು ಪ್ರಕಾರದ ಅಧ್ಯಾಸಗಳು ಮಿಥ್ಯೆ (ಪುಸಿದೋರಿಕೆ) ಎಂದು ನಿಶ್ಚಯಿಸಬೇಕು.

ಟಿಪ್ಪಣಿ :- ಪ್ರಶ್ನೆ- ಅಧ್ಯಾಸ ಅಥವಾ ಭ್ರಾಂತಿ ಅಂದರೇನು ?

(1) ಅದು ಅಲ್ಲದ್ದರಲ್ಲಿ ಅದು ಹೌದು ಎಂಬ ಬುದ್ಧಿ(ಅತಸ್ಮಿನ್ ತದ್ಬುದ್ಧಿಃ) ಅಧ್ಯಾಸವೆನಿಸುವದು. ಅಧಿಷ್ಠಾನಕ್ಕಿಂತ ವಿಷಮ ಸತ್ತೆಯುಳ್ಳದ್ದಾಗಿ, ತಾನಿಲ್ಲದೆ ಇದ್ದರೂ ಇದ್ದ ಹಾಗೆ ತೋರುವದೇ ಅಧ್ಯಾಸವು (ಅಧಿಷ್ಠಾನವಾದ) ಹಗ್ಗದ ಜ್ಞಾನವಾದ ಕೂಡಲೇ ಹಗ್ಗದ ಮೇಲೆ ತೋರುವ ಹಾವು ಇಲ್ಲದಾಗುವದು. ಆದ್ದರಿಂದ ಈ ಅಧ್ಯಾಸವು ಮಿಥ್ಯಾಧ್ಯಾಸ.

(2) ಬ್ರಾಹ್ಮಣನು ಸತ್ತ ಬಳಿಕ ಅವನ ಬ್ರಾಹ್ಮಣ್ಯವು (ಜಾತಿಯ ಸಂಸ್ಕಾರಗಳು) ಬ್ರಾಹ್ಮಣ ಸಮಾಜದಲ್ಲಿ ಉಳಿಯುವಂತೆ, ದೇಹಾತ್ಮಬುದ್ಧಿ ಸಮ್ಯಗ್‌ಜ್ಞಾನದಿಂದ ನಾಶವಾದರೂ ತನ್ನಲ್ಲಿ ದೇಹದ ಷಡ್ಭಾವ ವಿಕಾರಗಳು ಪ್ರಾರಬ್ಧವಶದಿಂದ ತೋರುವವು. ಇದು ಸತ್ಯಾಧ್ಯಾಸ.

(3) ಅಹಂ ಮತ್ತು ಆತ್ಮ ಈರ್ವರಲ್ಲಿ ಅನ್ಯೋನ್ಯವಾಗಿ ಅಧ್ಯಾಸ ತೋರುವದು. ಇದುವೆ ಇತರೇತರ ಅಧ್ಯಾಸವು. ಇದಕ್ಕೆ ಬೇರೊಂದು ಹೆಸರು ಹೃದಯಗ್ರಂಥಿ. ಅಹಂಕಾರಕ್ಕೆ ಸ್ವತಂತ್ರ ಇರುವಿಕೆಯಿಲ್ಲ, ಮತ್ತು ಜಡವಿದೆ. ಆತ್ಮನ ಇರುವು (ಸತ್) ಮತ್ತು ಅರಿವು (ಚಿತ್) ಸ್ವರೂಪದಲ್ಲಿ ಅಹಂಕಾರವು ಆರೋಪವಾಗಿ "ನಾನು ಇದ್ದೇನೆ ನಾನು ಅರಿಯುತ್ತೇನೆ" ಎಂದು ವರ್ತಿಸುವದು ಮತ್ತು ತನ್ನ ಧರ್ಮವಾದ ದುಃಖ ಹಾಗೂ ದ್ವೈತ ಭಾವಗಳಿಂದ ಸುಖ ಹಾಗೂ ಅದ್ವಯ ರೂಪಾದ ಆತ್ಮನನ್ನು ಆವರಿಸಿ, 'ನಾನು ದುಃಖಿ, ನಾನು ಅನೇಕನು' ಎಂದು ಅವಭಾಸರೂಪದಲ್ಲಿ ವ್ಯವಹರಿಸುವದು. ಇದಕ್ಕೆ ಅನ್ಯೋನ್ಯ ಅಧ್ಯಾಸವೆಂದೂ ಕರೆಯುವರು.

(4) ನಿರ್ಮಲ ಆತ್ಮನಲ್ಲಿ ಪ್ರಕೃತಿಯ ಗುಣಧರ್ಮಗಳು ಅವಭಾಸವಾಗುವದಕ್ಕೆ ಇತರಾಧ್ಯಾಸವೆನ್ನುವರು. ಇದಕ್ಕೆ ದೃಷ್ಟಾಂತ ನಿರ್ಮಲವಾದ ಸ್ಪಟಿಕವು ದಾಸಾಳದ ಉಪಾಧಿಯಿಂದ ಕೆಂಪು ಕಾಣುವದು. ದಾಸಾಳ ಹೂ ದೂರವಾದರೆ ಸ್ಪಟಿಕವು ಮೊದಲಿದ್ದ ಹಾಗೆ ಇರುವದು. ಆತ್ಮನು ಸ್ಪಟಿಕದಂತೆ. ಆದರೆ ಅಧ್ಯಾಸದಿಂದ ನಿರ್ವಿಕಾರ ಆತ್ಮನಿಗೆ ಜಗದ (ಸಂಸಾರದ) ಕಲ್ಪನೆಯಕ್ಕು.

– ಇತಿ ಆತ್ಮನಿಗೆ ದೇಹಾದಿಗಳ ಅಧ್ಯಾಸ ನಿರೂಪಣೆ –

## 11ನೇ ಸೂತ್ರ

ಅಂತ್ಯಂತಾಭಾವವೀಜಗವೆಂತು ತನ್ನಲ್ಲಿ ।
ಮೃತ್ತಿಕೆಯೊಳುತೋರ್ಪಘಟದಂತೆ ॥

ಮಣ್ಣಲ್ಲಿ ಇಲ್ಲದ ಕೊಡವು ಪುಸಿಯಾಗಿ ತೋರುವಂತೆ, ತನ್ನಲ್ಲಿ ಈ ಜಗವು ಅತ್ಯಂತ ಅಭಾವವಾಗಿದೆ.

ಈ ವಿಶ್ವವನು ಪ್ರಾಗಭಾವವಾ ಪ್ರಧ್ವಂಸಾ।
ಭಾವವಿನ್ನಿತರೇತರಾಭಾವ॥
ಭಾವೆ ಕೇಳತ್ಯಂತಾಭಾವವೆಂಬೀ ನಾಲ್ಕ।
ಭಾವವನುಳ್ಳುದೆಂದರಿವುದು ॥ 1 ॥

ಸತಿ ಕೇಳು, ಈ ವಿಶ್ವವು ಪ್ರಾಗಭಾವ, ಪ್ರಧ್ವಂಸಾಭಾವ, ಇತರೇತರ (ಅನ್ಯೋನ್ಯ) ಅಭಾವ ಮತ್ತು ಅತ್ಯಂತಾಭಾವ, ಎಂದು ನಾಲ್ಕು ಅಭಾವಗಳಿಂದ ಕೂಡಿದೆ, ಎಂದು ಅರಿಯಬೇಕು.

ಘಟದಂತೆ ತೋರ್ಕೆಗೆ ಮೊದಲಿಲ್ಲ ಘಟವಿಂತು।
ಘಟವಾಗಿ ಕೆಟ್ಟಬಳಿಕದಿಲ್ಲ॥
ಘಟವಿಲ್ಲವದು ಮೃತ್ತಿಕೆಗೆ ಬೇರೆ ತಾನೊಂದು।
ಘಟವಿಲ್ಲವದರಿಂದ ಪುಸಿದೋರ್ಕೆ ॥ 2 ॥

ಮಣ್ಣಲ್ಲಿ (ಮಾಡಿದ ಬಳಿಕ) ತೋರುವ ಕೊಡವು ಮೊದಲು ಇರಲಿಲ್ಲ (1)ಈ ಕೊಡವು ಒಡೆದ ಬಳಿಕ ಅದಿಲ್ಲ(2) ಮಣ್ಣುಬಿಟ್ಟು ಕೊಡವೆಂಬುದು ಬೇರಿಲ್ಲ(3) ಆದ್ದರಿಂದ (ಕೊಡವು) ಪುಸಿರೂಪಿನ (ಮಿಥ್ಯಾ) ತೋರಿಕೆ. (4) ಈ ನಾಲ್ಕು ಅಭಾವಗಳು ಕ್ರಮವಾಗಿ ಪ್ರಾಗಭಾವ ಪ್ರಧ್ವಂಸಾಭಾವ, ಅನ್ಯೋನ್ಯಾಭಾವ ಮತ್ತು ಅತ್ಯಂತಾಭಾವ ಇವು ನಾಲ್ಕು ಪುಸದೋರಿಕೆಗಳು.

ತೋರುವಲ್ಲಿಯು ಮಿಂತು ತೋರದಲ್ಲಿಯು ಮಿನ್ನು।
ತೋರಿ ಕೆಟ್ಟಲ್ಲಿಯು ಘಟವಿದು ॥
ಬೇರಾಗಿ ಮೃತ್ತಿಕೆಯಿಂದೆ ತೋರದು।
ಸದಾ ತೋರುತಿರ್ಪುದು ಮೃದ್ವಿಷಯಮೊಂದೆ ॥ 3 ॥

ಇಂತು ಕೊಡವು ತೋರುವಾಗ, ತೋರದಿರುವಾಗ ಮತ್ತುತೋರಿ ಕೆಟ್ಟ ಬಳಿಕ, ಮಣ್ಣು ಬಿಟ್ಟು ಬೇರಾಗಿ ತೋರದು. ತ್ರಿಕಾಲದಲ್ಲಿ ಮಣ್ಣುಮಾತ್ರ ಒಂದೇ ಇರುವದು. ಸತ್ಯವಸ್ತು, ಕೊಡ (ಘಟ)ವು ತ್ರಿಕಾಲದಲ್ಲಿರುವದಿಲ್ಲ . ತೋರಿದರೂ ಅದಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ.

ಇಲ್ಲದುದಕ್ಕೆ ತಾನಿಲ್ಲವದುತ್ಪತ್ತಿ।
ಯುಳ್ಳುದುಂಟಾಗಿಯದಕೆ ಮತ್ತೆ ॥
ಇಲ್ಲವೆಂದೆಂದು ಜನನ ಹಾನಿಗಳು ಮೃದು।
ಪಲ್ಲವಪಾಣಿ ನಂಬಿದು ಸತ್ಯ ॥ 4 ॥

ಇಲ್ಲದುದಕ್ಕೆ ಉತ್ಪತ್ತಿ ಇಲ್ಲವು. ಉಳ್ಳದುದಕ್ಕೆ ಮತ್ತೆ ಜನನ ಮರಣಗಳೆಂದೂ ಇಲ್ಲವು. ಮೃದುಚಿಗುರೆಲೆಯಂತೆ ಕರಗಳುಳ್ಳ ಮೈತ್ರೇಯಿ ಇದು ಸತ್ಯವೆಂದು ನಂಬು (ಟಿ)

[ ಟಿಪ್ಪಣಿ :- ನಿಜಗುಣರ ಈ ಉಕ್ತಿಯು ಕೆಳಗೆ ಬರೆದ ಗೀತಾ ವಾಕ್ಯಕ್ಕೆ ಸಮಾನವಾದ ಅರ್ಥಕೊಡುವದು. ]

ನಾಸತೋವಿದ್ಯತೆ ಭಾವೋ ನಾಭಾವೋ ವಿದ್ಯತೆ ಸತಃ।

ಅಸತ್ಯಕ್ಕೆ ಎಂದೂ ಇರುವಿಕೆಯಿಲ್ಲ, ಇರುವ ಸತ್ಯವು ಎಂದೂ ನಾಶವಾಗುವದಿಲ್ಲ. ಈ ಉಭಯ ತತ್ತ್ವಗಳ ಸತ್ಯಾಂಶವನ್ನು ದಾರ್ಶನಿಕರೇ ಬಲ್ಲರು. (ಭ.ಗೀತೆ 2-16).

ಆದರಿಂದ ಮೃತ್ತಿಕೆಯೊಳು ತೋರ್ಪ ಘಟವಿಲ್ಲ।
ವದು ಗಗನಾರವಿಂದದವೋಲು ॥
ಅದು ಮತ್ತೆ ತೋರದೆಂದೆಂದುಮಿಂತರಿದಂಗೆ ।
ಸುದತಿ ಮೈತ್ರೇಯಿ ನೋಡಿದು ಸಿದ್ಧ॥ 5 ॥

ಗಗನಾರವಿಂದದ ಹಾಗೆ ಅಂದರೆ ಆಕಾಶ ನೀಲಿ ಹೂವಿನಂತೆ ತೋರುವದು. ಆದ್ದರಿಂದ ಮಣ್ಣಲ್ಲಿ ತೋರುವ ಕೊಡವು ಗಗನ ಪುಷ್ಪದಂತೆ ಅತ್ಯಂತಾಭಾವವು. ಚಲುವಾದ ಹಲ್ಲುಗಳುಳ್ಳ ಮೈತ್ರೇಯಿ, ಸರಿಯಾಗಿ ಅರಿದ ಬಳಿಕ ಕೊಡವು ಕೊಡದಂತೆ ತೋರದು (ಕೇವಲ ಮಣ್ಣೆ ಇರುವದೆಂಬ ಭಾವ) ಇದು ಸಿದ್ಧಾಂತ.

ಘಟವೆಂತು ಮೃತ್ತಿಕೆಯೊಳು ಘಟಿಸದವೋಲು ।
ದಿಟದಿಂದೆ ಜಗವಿದು ತನ್ನೊಳು ॥
ಘಟಿಸದತ್ಯಂತಾಭಾವವೆಯಾಗಿ ಕಾಂಚನ ।
ಘಟಕುಚೆ ತೋರುತಿರ್ಪುದು ಮಿಥ್ಯೆ ॥ 6 ॥

ಚಿನ್ನದಕೊಡದಂತೆ ಕುಚಗಳುಳ್ಳ ಮೈತ್ರೇಯಿ, ಮಣ್ಣಲ್ಲಿ ಕೊಡವು (ಸತ್ಯವಾಗಿ) ಸಂಭವಿಸಲಾರದಂತೆ, ತನ್ನಲ್ಲಿ ಜಗವಿದು ಅತ್ಯಂತಾಭಾವವೆಯಾಗಿ ಹುಟ್ಟಲಾರದು ತೋರುವ ಘಟ ಅಥವಾ ಜಗವು ಮಿಥ್ಯೆ, ಎಂದರಿ.

"ಉಳ್ಳಾತ್ಮದೊಳಗೆಂದು ಮಿಲ್ಲದ ತ್ರಿಜಗವಿ ।
ದುಳ್ಳವೋಲಿಹುದು ಚಿನ್ನದೊಳೆಂದು ॥
ಇಲ್ಲದ ಕಟಕ ಮುಕುಟ ಮುದ್ರಿಕಾದಿಗ ।
ಳುಳ್ಳಂತೆ ತೋರುವ ಬಗೆಯಿಂದ ॥ 7 ॥

(ಎಂದೆಂದೂ) ಇರುವ ಆತ್ಮನಲ್ಲಿ (ತನ್ನಲ್ಲಿ) ಎಂದೆಂದೂ ಇಲ್ಲದ ಈ ತ್ರಿಜಗವು. (ಟಿಪ್ಪಣಿ :– ಜಾಗರಣ, ಸ್ವಪ್ನ, ಸುಪ್ತಿ ಈ ಮುರವಸ್ಥೆಗಳೆ ಮೂರು ಲೋಕಗಳು... (ತ್ರಿಜಗ) ಮೂರು ಪುರಗಳೆಂದು ತಿಳಿಯಿರಿ.) ಬಂಗಾರದಲ್ಲಿ ಎಂದೂ ಇಲ್ಲದ ಕರ್ಣಕುಂಡಲ, ಕಿರೀಟ, ಉಂಗುರ ಮೊದಲಾದ ಆಭರಣಗಳು (ಪತ್ತಾರನ) ಕಲ್ಪನೆಯಿಂದ ಜನಿಸಿ ತೋರುವ ಹಾಗೆ ಮೂರು ಲೋಕವು ಇದ್ದಂತೆ ಭಾಸವಾಗುವದು. (ತನ್ನ ಬಗೆಯಿಂದ).

– ಇತಿ ಆತ್ಮನಲ್ಲಿ ಜಗದಭಾವ ನಿರೂಪಣೆ –

## 12ನೇ ಸೂತ್ರ

ಜಗವಿದುಪುಸಿಯಾಗಿ ಕಾಣ್ಬವನುರೆಪುಸಿ ।
ಬಗೆಯುದರಿಂದೆ ಸರ್ವವುಪುಸಿ ॥

ಜಡದೃಶ್ಯವಾದ ಜಗವಿದು ಪುಸಿ, ಅದನ್ನು ಕಾಣುವ ದೃಷ್ಟಾ ಅತ್ಯಂತ ಪುಸಿ. ಆದ್ದರಿಂದ ಲೋಕತ್ರಯ ಅಥವಾ ಜಾಗರಣಾದಿ ಮೂರವಸ್ಥೆಗಳು ಪುಸಿದೋರಿಕೆ. ಜಗವಿದು ತ್ರಿಕಾಲದಲ್ಲಿ ಇಲ್ಲದ್ದು, ನಿದ್ರೆಯಲ್ಲಿ ತಾನು ಇರುವ. ಆದರೆ ಜಗತ್ತು ಇರುವದಿಲ್ಲ, ಇದು ಸಾರ್ವತ್ರಿಕ ಅನುಭವ.

ಬ್ರಹ್ಮವಿವರ್ತವೆಂದೆನಿಸದು ಜಗವಿದು।
ಬ್ರಹ್ಮದ ಕಾರ್ಯವೆಂದೆನಲಿಲ್ಲ।
ಬ್ರಹ್ಮವಿಲಕ್ಷಣವೆನಲಿಲ್ಲವದು ತಾನೆ।
ಬ್ರಹ್ಮಸ್ಥವೆನಿಸದು ಪುಸಿದೋರ್ಕೆ ॥ 1 ॥

1. ಜಗವಿದು ಬ್ರಹ್ಮವಿವರ್ತವೆಂದೆನಿಸದು :- "ವಿಶ್ವಮಿಂದಂ ಸರ್ವಂ ಆತ್ಮೈವ ನಾನ್ಯದಸ್ತಿ। (ತೋರುವ ಜಗವಿದು ಆತ್ಮಸ್ವರೂಪವೇ ಇದೆ. ಆತ್ಮನಿಗೆ ಅನ್ಯವಾದುದು ಯಾವದೂ ಇಲ್ಲ) ಪರಿಪೂರ್ಣನು, ಅದ್ವಯನು, ಆದಿ ಮಧ್ಯ ಅಂತ್ಯವಿಲ್ಲದವನು ಆಗಿರುವ ಬ್ರಹ್ಮನಲ್ಲಿ ಅನ್ಯಾಕಾರ ಪ್ರತೀತಿಯಿಲ್ಲ ಮತ್ತು ಅನ್ಯ ವಸ್ತುವಿನ (ಜಗದ)ಕಲ್ಪನೆಯೂ ಇಲ್ಲ. ಪ್ರತೀತಿ ಸತ್ಯವಾದರೆ (ಆತ್ಮನಂತೆ ಇರುವದು, ಎಂದರೆ ದ್ವೈತಾಪತ್ತಿದೋಷ ಬರುವದು. ಬ್ರಹ್ಮ(ಆತ್ಮ)ನಿಗೆ ಅವಸ್ಥೆಗಳಿಲ್ಲ, ಆತ್ಮನು ಅವಸ್ಥಾಂತರ ಹೊಂದನು. ಪರಮಾತ್ಮನಲ್ಲಿ ಕಲ್ಪಿತಪುರುಷ (ಜೀವ)ನ ಉತ್ಪತ್ತಿ ಈ ಗ್ರಂಥಾರಂಭದಲ್ಲಿ (ಸಂಧಿ 1, ಸೂತ್ರ 5) ಅದನ್ನು ಅಧ್ಯಾರೋಪ ಮಾಡಿ ಹೇಳಿದ್ದಾರೆ. ಅನುಭವಸಾರದಲ್ಲಿ (1ನೇ ಸಂಧಿ, 4 ನೇ ಸೂತ್ರ ಇದೇ ಗ್ರಂಥಕಾರರು ವಿವರ್ತವಾದ ಅಂದರೆ ಚೇತನಕ್ಕೆ ಭಿನ್ನ ಸತ್ತಾ ಮತ್ತು ಅನ್ಯಥಾ ರೂಪು,ಚಿನ್ನದಲ್ಲಿ ಆಭರಣಗಳಂತೆ, ನಿರ್ವಿಕಾರ ಶುದ್ಧ ಚೈತನ್ಯದಲ್ಲಿ ಜಡದೃಶ್ಯ ಕಾಲ್ಪನಿಕ ಜಗದುತ್ಪತ್ತಿ ಹೇಳಿದ್ದಾರೆ. ಇದು ಮಂದ ಅಧಿಕಾರಿಗಳಿಗೆ ಹೇಳಿದೆ, ಎಂದು ತಿಳಿಯಬೇಕು. ಕಲ್ಪಿತ ವಸ್ತು (ಜಗತ್ತು) ಅಧಿಷ್ಠಾನಕ್ಕೆ ಅನ್ಯವಲ್ಲ ಎಂಬುದನ್ನು ತೋರಿಸಿ ಮಧ್ಯಮ ಅಧಿಕಾರಿ (ಸಾಧಕ) ಬುದ್ಧಿಯು ಅದ್ವಯ (ಅಖಂಡ) ಚೇತನದಲ್ಲಿ ನಿಲ್ಲಲಿ, ಎಂಬ ಹೇತುವಿನಿಂದ ಜಗತ್ತನ್ನು ಆತ್ಮನಲ್ಲಿ (ತನ್ನಲ್ಲಿ) ಆರೋಪ ಮಾಡಿ, ಆ ಬಳಿಕ ನಿಷೇಧಿಸು (ಅಥವಾ ಅಪವಾದ ಮಾಡು)ವದಕ್ಕಾಗಿ ಹೇಳಿದೆ. ಆದ್ದರಿಂದ ಜಗವಿದು ಬ್ರಹ್ಮವಿವರ್ತವಲ್ಲ.

2. ಜಗವಿದು ಬ್ರಹ್ಮದ ಕಾರ್ಯವೆನಲಿಲ್ಲ :- ಲೋಕದ ದೃಷ್ಟಿಯಲ್ಲಿ ಕಾರ್ಯಕಾರಣಗಳಿಗೆ ಅಭೇದವು ಸ್ಪಷ್ಟವಾಗಿ ತೋರುವದರಿಂದ ಮತ್ತು ಮಂದಾಧಿಕಾರಿಗಳ ಬುದ್ಧಿಯು ಆಧಾರನಾದ ಬ್ರಹ್ಮದಲ್ಲಿ ಪ್ರವೇಶವಾಗಲಿ, ಎಂಬ ಉದ್ದೇಶದಿಂದ,

ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನು, ಅಥವಾ (ಅನುಭವ ಸಾರ ಗ್ರಂಥದಲ್ಲಿ) ಆತ್ಮನು 'ಅಭಿನ್ನ ನಿಮಿತ್ತ ಉಪಾದಾನ ಕಾರಣನು (ಜೇಡರ ಹುಳದಿಂದ ಜೇಡರ ಬಲೆ ಸಿದ್ಧವಾದಂತೆ) ಎಂದೂ ಪ್ರತಿಪಾದಿಸಿದ್ದಾರೆ. ಆದಾಗ್ಯೂ ಜಗವು ಅತ್ಯಂತ ಅಭಾವ, ಎಂಬ ಅಜಾತವಾದವನ್ನು ನಿರೂಪಿಸಲು (ಮೇಲಿನ ಸೂತ್ರ ನೋಡಿರಿ) ಜಗವಿದು ಬ್ರಹ್ಮದ ಕಾರ್ಯವೆನಬಾರದು.

3. ಜಗವು ಬ್ರಹ್ಮನಿಗೆ ವಿಲಕ್ಷಣವೆನಲಿಲ್ಲ:- ಜಗವು ಬ್ರಹ್ಮನಿಗೆ ವಿಲಕ್ಷಣವಾಗಿದೆ, ಎಂದು ಹೇಳಿದರೆ ಅದು ಸ್ವಗತವೊ, ಸಜಾತೀಯವೊ ಅಥವಾ ವಿಜಾತೀಯವೊ, ಎಂಬ ಪ್ರಶ್ನೆ ಹುಟ್ಟುವದು. ಏಕಮೇವಾದ್ವಿತೀಯ ಆತ್ಮನಿಗೆ ಈ ಮೂರು ಭೇದಗಳನ್ನು ಶ್ರುತಿಗಳು ನಿರಾಕರಿಸಿವೆ. ಆದ್ದರಿಂದ ಜಗವು ಬ್ರಹ್ಮವಿಲಕ್ಷಣವಲ್ಲ, ತಾನುಂಟು ಜಗವುಂಟು. ಅಥವಾ ಜಗವನ್ನು ನೋಡುವವನಿದ್ದರೆ ಜಗಮುಂಟು. ಆದರೆ ತಾನಾರು ? ತನ್ನ ನಿಜವೇನು ? ಎಂದು ವಿಚಾರಿಸಿದರೆ ನಿಜದಲ್ಲಿ ತಾನೆಂಬುದಿಲ್ಲ ಅನ್ಯತೆಗಾಣಲ್ಲಿಲ್ಲ, ಆತ್ಮನು (ತಾನು) ಎಂದೆಂದು ಪರಿಪೂರ್ಣ, ಅನುಪಮನು ಜಗತ್ತಿಗೆ ವಿಲಕ್ಷಣನಾಗಿ ಇರುವನು.

4. ಜಗವಿದು ಬ್ರಹ್ಮಸ್ಥವೆನಿಸದು :- ಬ್ರಹ್ಮ(ಆತ್ಮ)ನು ಅವಿರಳನು, ಅದ್ವಯನು. ಆತ್ಮನಲ್ಲಿ ತೋರಿ ಅಡಗುವ ದೇಶಕಾಲ ವಸ್ತುಗಳು ಕಾಲ್ಪನಿಕವಾಗಿ, ಪುಸಿಯಾಗಿ (ಮಿಥ್ಯೆ) ಶಬ್ದಮಾತ್ರವಾಗಿ ತೋರುವವು. ಸಿದ್ಧಾಂತದಂತೆ (ಲೋಕದಲ್ಲಿ) ಕಂಡು ಬರುವದೇನೆಂದರೆ ಒಂದು ವಸ್ತು ಒಂದು ದೇಶದಲ್ಲಿರುವಾಗ, ಅದೇ ಕಾಲಕ್ಕೆ ಬೇರೊಂದು ವಸ್ತು ಅದೇ ದೇಶದಲ್ಲಿ (ಜಾಗೆಯಲ್ಲಿ) ಬರಲಾರದು. ಈ ನಿಯಮದಂತೆ ಜಗವು ಬ್ರಹ್ಮನಿರುವಲ್ಲಿ ಸತ್ಯವಾಗಿರಲು ಸಾಧ್ಯವಿಲ್ಲ, ಆದ್ದರಿಂದ ಕನ್ನಡಿಯಲ್ಲಿ ಒಂದು ವಸ್ತುವಿನ ಪ್ರತಿಬಿಂಬದಂತೆ, ಜಗವಿದು ಸುಳ್ಳುತೋರಿಕೆ ಎಂದು ನಿಶ್ಚಯಿಸು.

ಜಗದೊಳು ಸಾಕ್ಷಿ ದೃಷ್ಟಾಂತವನಾತ್ಮವಿ।
ದ್ಯಗೆ ಪೇಳಬಾರದೇಕೆಂದೊಡೆ॥
ಬಗೆಗೆ ಗೋಚರವಲ್ಲದನುಪಮಾದ್ವಯವದು।
ಜಗವಿದತ್ಯಂತಾಭಾವವೆಯಾಗಿ ॥ 2 ॥

ಜಗತ್ತಿನಲ್ಲಿ ಆತ್ಮವಿದ್ಯೆಗೆ ಸಾಕ್ಷಿಯನ್ನಾಗಲಿ ಮತ್ತು ದೃಷ್ಟಾಂತವನ್ನಾಗಲಿ ಹೇಳಬಾರದು. ಯಾಕೆಂದರೆ ಆತ್ಮನು ಅದ್ವಯನು ಅನುಪಮನು ಹಾಗೂ ಮಾತು ಮನಸ್ಸಿಗೆ ಅಗೋಚರನು ಮತ್ತು ಜಗತ್ತಾದರೊ ಅತ್ಯಂತಾಭಾವವಾಗಿದೆ (ಬಂಜೆಯ ಮಗನಂತೆ)

ಎಂದುಮಿಲ್ಲದ ಜಗವನು ನಿಜವೆಂದು ನೀ।
ನಿಂದು ಬಗೆದ ಬಗೆಯದು ತಾನು ॥
ಅಂದವಲ್ಲದೆ ಪುಸಿಯಾಗಿ ಪೋಪುದು ತಿಳಿ-।
ದಂದು ನೀನದಕೆ ಸಾಕ್ಷಿಕನಲ್ಲೆ ॥ 3 ॥

ಎಂದೆಂದೂ ಇಲ್ಲದ ಜಗವು ನಿಜವೆಂದು ನೀನಿಂದು ಭಾವಿಸಿದರೆ ಅದು ಕಲ್ಪನೆಯಲ್ಲದೆ ಸ್ವರೂಪತಃ ಇರಲಾರದು. ನೀನು (ಯಥಾರ್ಥವಾಗಿ) ತಿಳಿದಾಕ್ಷಣ ಜಗವು ಸುಳ್ಳಾಗಿ ಹೊರಟು ಹೋಗುವದು. ಅದರ ಅಭಾವ ತಿಳಿಯಲಿಕ್ಕೆ ಇರುವ ನೀನೆ ಸಾಕ್ಷಿಕನಲ್ಲವೇ ? (ನೀನು ಜಗತ್‌ಸಾಕ್ಷಿ ಎಂಬ ಭಾವ)

ಜಗವಿದು ದಿಟವೆಂಬ ಬಗೆಯದೆ ಜೀವಾತ್ಮ।
ಜಗವಿದೆಲ್ಲವು ನೋಡೆ ಪುಸಿಯೆಂಬ ॥
ಬಗೆಯಂತರಾತ್ಮನಾಬಗೆ ತನ್ನೊಳ್ಕೆಡೆ ತಾನೆ।
ಬಗೆಗಗೋಚರನಾದ ಪರಮಾತ್ಮ ॥ 4 ॥

ಜಗವಿದು ಸತ್ಯವೆಂಬ ಭಾವ, ಬಗೆ ಅಥವಾ ಕಲ್ಪನೆಯುಳ್ಳವನೆ ಜೀವಾತ್ಮನೆನಿಸುವನು. ಜಗವನ್ನು ಕಾಣುವ ದೃಷ್ಟಾ (ವಿಚಾರಿಸಲಾಗಿ) ಅಂದರೆ ಜಗವು ಪುಸಿಯೆಂದು ಬಗೆವವನೆ ಅಂತರಾತ್ಮನು. ಎಲ್ಲ ಕಲ್ಪನೆಗಳು ತನ್ನಲ್ಲಿ ಕೆಡಲು ತಾನೆ ಬಗೆಗೆ ಅಗೋಚರನಾದ ಕಲ್ಪನಾರಹಿತ, ಭ್ರಾಂತಿರಹಿತ ಭಾವಾತೀತ ಪರಮಾತ್ಮನು.

ಉಳ್ಳ ಮೃತ್ತಿಕೆಯೊಳಗಿಲ್ಲದ ದೇವತೆ।
ಯುಳ್ಳಂತೆ ಮುಚ್ಚಿ ಮೋಹಿಸುವಂತೆ ॥
ಇಲ್ಲದ ತ್ರಿಜಗವದ್ವೈತಾತ್ಮನೊಳು ತೋರ್ಪು।
ದುಳ್ಳಂತೆ ನೆರೆ ವಿಚಾರಿಸಲುಂಟೆ ॥ 5 ॥

ಇರುವ ಮಣ್ಣಲ್ಲಿ ಇಲ್ಲದ ದೇವತೆ (ಅಥವಾ ಗಣಪತಿ) ಇದ್ದ ಮಣ್ಣು ಮುಚ್ಚಿ (ಆವರಿಸಿ) ತಾನೆ ಇದ್ದ ಹಾಗೆ ಮೋಹಿಸುವಂತೆ ಇಲ್ಲದ ಮೂರುಲೋಕಗಳು ಅದ್ವೈತ (ಅಖಂಡ) ಆತ್ಮನಲ್ಲಿ ಉಳ್ಳಂತೆ ತೋರುವವು. ಸರಿಯಾಗಿ (ಶೃತಿ ಸದ್ಗುರುಗಳಿಂದ) ವಿಚಾರಿಸಲಾಗಿ ಮೂಲೋಕ ಇರಬಲ್ಲುದೇ ? (ಅವಿಚಾರದಿಂದ ರಂಜನಾತ್ಮಕವಾದ ಜಗವು ತೋರಿ ವಿಚಾರದಿಂದ ಬಾಧಿತವಾಗುವದೆಂಬ ಭಾವ)

ಜಗವಿಲ್ಲವದರಿಂದೆ ಜಗವ ಕಾಣ್ಬವನುಂಟೆ।
ಜಗವನು ಕಂಡವನುಳ್ಳೊಡೆ ॥
ಮೃಗನೇತ್ರೆ ಪುಸಿಯೆಂದು ಪೇಳಲಹುದು ಪೇಳ್ವ।
ಬಗೆದೋರದಾಗಿ ಕೇಳ್ವುದು ಮಿಥ್ಯೆ ॥ 6 ॥

ಹರಿಣಾಕ್ಷಿ (ಚಂಚಲ ದೃಷ್ಟಿಯುಳ್ಳವಳೆ), ಜಗವಿಲ್ಲವು. ಆದ್ದರಿಂದ ಜಗವ ಕಾಣುವವನೂ ಇಲ್ಲವು. ಜಗವನು ಕಂಡವನು ಇದ್ದರೆ 'ಜಗ ಪುಸಿ' ಎಂದು ಹೇಳಬಹುದು. ಹೇಳುವ ಬಗೆ ಸಿದ್ಧಿಸದಾಗಿ ನೀನು ಕೇಳುವುದು ಮಿಥ್ಯೆ.

ಉಳ್ಳಂಬುನಿಧಿಜಲವಿಲ್ಲದ ತೆರೆ ನೊರೆ।
ಗೆಲ್ಲಕ್ಕೆ ಮೂಲವೆನಿಸಿದಂತೆ ॥
ಇಲ್ಲದ ಸಕಲ ಜೀವರ ತೋರ್ಕೆಗಳಿಗೆ ತಾ।
ನುಳ್ಳ ಪರಾತ್ಮನೆ ನಿಜವಕ್ಕು ॥ 7 ॥

(ಉಳ್ಳ+ಅಂಬು+ನಿಧಿ) ಇರುವ ಸಮುದ್ರವು ಇಲ್ಲದ ತೆರೆ ನೊರೆಗಳಿಗೆಲ್ಲಕ್ಕೆ ಆಧಾರವಾಗಿರುವಂತೆ ಇಲ್ಲದ ಸಕಲ ಜೀವಾತ್ಮರ (ನಾಮ–ರೂಪ–ಕ್ರಿಯೆ ಎಂಬ) ಪ್ರತೀತಿಗಳಿಗೆ ತ್ರಿಕಾಲದಲ್ಲಿ ಅಧಿಷ್ಠಾನವಾಗಿರುವ ಪರಮಾತ್ಮನೆ ಸತ್ಯ.

– ಇತಿ ಆತ್ಮನಲ್ಲಿ ಜೀವಾತ್ಮನ ಅಭಾವ ನಿರೂಪಣೆ –

## 13ನೇ ಸೂತ್ರ

ಸದಾದಿಗಳಿಂದ ಪೇಳಬಾರದ ಜಗ ।
ವಿದುಮಿಥ್ಯೆ ರಜ್ಜುಸರ್ಪನವೋಲು ॥

ಅಸ್ತಿತ್ವವಿಲ್ಲದ ಜಗತ್ತಿಗೆ ಸತ್, ಚಿತ್, ಆನಂದ ಲಕ್ಷಣಗಳನ್ನು (ಆತ್ಮನಿಗೆ ಹೇಳುವಂತೆ) ಪೇಳಬಾರದು. ಇರುವ ಹಗ್ಗದಲ್ಲಿ ಇಲ್ಲದ ಹಾವು ಭ್ರಮೆಯಿಂದ (ಅಧಿಷ್ಠಾನದ ಅಜ್ಞಾನದಿಂದ) ತೋರುವಂತೆ, ಜಗವೆಂಬುದು ಪುಸಿದೋರಿಕೆ.

ಸತ್ತೆಂದು ಜಗವಿದಸತ್ತೆಂದು ಮೇಣ್ಸದ।
ಸತ್ತೆಂದು ವಚಿಸಲಿಕಳವಲ್ಲ॥
ಉತ್ತಮೆ ಕೇಳಿದು ಪುಸಿ ತನ್ನೊಳಿಂತು ತೋ।
ರಿತ್ತಹಿ ನೇಣನೊಳ್ಪೊಳೆವಂತೆ ॥ 1 ॥

(ಅಹಿ–ಹಾವು, ನೇಣು=ಹಗ್ಗ)

ಜಗವಿದು ಸತ್ತೆಂದು, ಅಸತ್ತೆಂದು ಮತ್ತು ಸದಸತ್ತೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಮತಿವಂತಳಾದ ಮೈತ್ರೇಯಿ, ಕೇಳು ಉತ್ತಮರ ಸಂಗದಿಂದ ಈ ಜಗವು ಹಗ್ಗದಲ್ಲಿ ಹಾವ ಹೊಳೆಯುವಂತೆ ನಿನ್ನಲ್ಲಿ ಪುಸಿಯಾಗಿ ತೋರುವದು.

ನೀನಖಂಡಿತನು ನಿನ್ನೊಳಗುದಿಸದು ತನ್ನ।
ತಾನೆ ತೋರದು ಜಡಜಗವಿದು॥
ಮಾನಿನಿರನ್ನೆ ಮಿಥ್ಯಾತ್ಮಕವಹು ದಿದ।
ನೇನೆಂದು ಪೇಳುವಡರಿದಾರ್ಗೆ ॥ 2 ॥

ನೀನು ಅಖಂಡಿತನು ಆದ್ದರಿಂದ ನಿನ್ನೊಳಗೆ ಜಗವಿದು ಹುಟ್ಟಲು ತೆರಹು ಇಲ್ಲ. ಜಡವಾದ ಜಗವು ತನ್ನಷ್ಟಕ್ಕೆ ತಾನು (ಚೇತನದ ಆಶ್ರಯವಿಲ್ಲದೆ) ಉದಿಸದು ಮತ್ತು ತೋರದು, ಸ್ತ್ರೀ ಕುಲದಲ್ಲಿ ರತ್ನಪ್ರಾಯಳೇ, ಜಗವು ಮಿಥ್ಯಾತ್ಮಕವಾಗಿದೆ. ಯಾರಿಗಾದರೂ ಜಗವಿದೇನು ಎಂದು ಹೇಳಲಿಕ್ಕಾಗದು.

ಅದರಿಂದ ತೋರಿದ ಜಗವಿದು ಕನಸಿನಂ।
ದದೊಳನಿರ್ವಚನೀಯವಲ್ಲದೆ॥
ಸುದತಿ ಕೇಳಿದನು ಸದಾದಿಗಳಿಂದಾವ।
ಚದುರನು ವಿಧಿಸಿ ನುಡಿಯಲಿಲ್ಲ॥ 3 ॥

ಸುಂದರವಾದ ದಂತಗಳುಳ್ಳ ಮೈತ್ರೇಯಿ, ಕೇಳು, ನಿನ್ನಲ್ಲಿ ತೋರಿದ ಜಗವಿದು ಕನಸಿನಂತೆ ಅನಿರ್ವಚನೀಯವಾಗಿದೆ. ಈ ಲಕ್ಷಣದ ಹೊರತು ಇದನ್ನು ಸದಾದಿ (ಲಕ್ಷಣ) ಗಳಿಂದ ಯಾವ ಜಾಣನೂ ನಿರ್ಣಯಿಸಿ ನುಡಿಯಲಿಲ್ಲ.

ಇದು ಸತ್ತಾದೊಡೆ ಮೇಣಂತಿದಸತ್ತಾದೊಡೆ ಮೇಣಂ।
ತಿದಮೆಂದು ತನಗೆ ತೋರ್ಪುದೆ ಬಂಧ॥
ಇದಮೆಂಬ ತೋರಿಕೆಯಳಿದುದೆ ಮೋಕ್ಷವೆಂ।
ಬಿದು ವಿವೇಕಿಗಳೆಲ್ಲರನುಮತ॥ 4 ॥

ಇದು (ಈ ಜಗವು) ಸತ್ತೆಂದಾಗಲಿ ಮತ್ತು ಅಸತ್ತೆಂದಾಗಲಿ ತನಗೆ (ದೃಶ್ಯವಾಗಿ) ತೋರುವದೇ ಬಂಧ. "ಇದಂ" ಎಂಬ ತೋರಿಕೆ ಅಳಿದು ಉಳಿದ ಇರವೇ ಮೋಕ್ಷ. ಜ್ಞಾನಿಗಳೆಲ್ಲರ ಅನುಮತವೇ ಇದು.

ಇದು ಚೋದ್ಯವಲ್ಲವೆ ಮಾಯೆ ನೋಡಿದೊಡೆ ತೋ।
ರ್ಪುದು ನೋಡದೊಡೆ ತೋರಲರಿಯದು॥
ಅದರಿಂದ ಮಿಥ್ಯೆ ನೋಡಿದು ಸತ್ಯವೆಲೆ ಮೂಢ।
ರಿದರಂದ ವರಿಯಲರಿವರೆಂತು॥ 5 ॥

ಇದು ಆಶ್ಚರ್ಯವಲ್ಲವೇ ? ನೀನು ನೋಡಿದರೆ ಮಾಯೆ ತೋರುವದು, ನೋಡದಿದ್ದರೆ ಮಾಯೆ ತೋರಲರಿಯದು. ಆದ್ದರಿಂದ ಮಾಯೆ (ಮತ್ತು ಅದರ ಕಾರ್ಯಜಗವು) ಮಿಥ್ಯೆ ಎಂಬುದೇ ಪರಮಾರ್ಥ. ಮೂರ್ಖರು ಇದರ ಅಂದವನ್ನು (ಮಾಯೆಯ ಸ್ವರೂಪ) ತಿಳಿಯಲು ಅಸಮರ್ಥರು.

ಮನುಜರಾ ಸ್ಥಾಣು ಚೋರನನೆಚ್ಚುಕೊಲುಗುಮೆ।
ಮುನಿದು ಗಂಧರ್ವರ ನಗರವ॥

ಅನಲನುರುಪಲರಿಗುಮೆ ತಿಳಿಯದೆ ಮಾ।
ನಿನಿ ಮಾಯೆಯನು ಬೇರೆ ಗೆಲಲುಂಟೆ ॥ 6 ॥

ಮೋಟಮರದಲ್ಲಿ(ಇಲ್ಲದ) ಕಳ್ಳನನ್ನು ಮನುಜರು ಬಾಣದಿಂದ ಎಸೆದು ಕೊಲ್ಲಬಲ್ಲರೇ ? (ಆಗಸದಲ್ಲಿ ಇಲ್ಲದೆ ತೋರುವ) ಗಂಧರ್ವನಗರವನ್ನು ಬೆಂಕಿಯಿಂದ ಸುಡಲು ಸಾಧ್ಯವಾಗಬಲ್ಲದೆ? ಮಾನಿನಿ(ಮೈತ್ರೇಯಿ) ಮಾಯೆಯು ಮಿಥ್ಯೆಯೆಂದು ತಿಳಿಯದೆ ಅದನ್ನು ಬೇರೆ ಉಪಾಯಗಳಿಂದ ಅಂದರೆ ಕರ್ಮೋಪಾಸನೆಗಳಿಂದ ಗೆಲ್ಲಲು ಸಾಧ್ಯವಿಲ್ಲ. (ಟಿ)

[ ಟಿಪ್ಪಣಿ :– (1) ತಾನಿಲ್ಲದ ಕಡೆ ತೋರುತ್ತಿರುವದೇ ಮಿಥ್ಯೆ "ಸ್ವಅಭಾವ ಅಧಿಕರಣೆ ಆಧ್ಯಾಸಃ "ಇದೆ ಇಲ್ಲವೆನಲು ಅಳವಲ್ಲದ್ದೇ ಮಿಥ್ಯೆ". ]

(2) ಅಂತು–ಇಂತೆಂದು ನುಡಿದು ಹೇಳಲಿಕ್ಕೆ ಬಾರದ್ದು ಅನಿರ್ವಚನೀಯ.

(3) ಸತ್‌ಖ್ಯಾತಿ–ಅಸತ್‌ಖ್ಯಾತಿ ಎಂದು ಎರಡು ರೀತಿಯಲ್ಲಿಇದಮಾಕಾರವಾದ ಜಗತ್ತಿನ ಪ್ರತೀತಿ.

(4) ವಿಚಾರ ಬಾಧ್ಯಮಪ್ಪುದರಿಂದ.

– ಜಗತ್ತಿಗೆ ಅನಿರ್ವಚನೀಯತ್ವ ನಿರೂಪಣೆ –

## 14ನೇ ಸೂತ್ರ

ನಿನ್ನಚಿದ್ಭ್ರಮೆ ನಿನ್ನಮರವೆಗರಿವಿಗೆ ಬೀ ।
ಜಂ ನೀನೆಪರಮಾತ್ಮನದರಿಂದ ॥

ಚಿದ್‌ಭ್ರಮೆ ತಿಳುವಳಿಕೆಯ=ವಿವೇಕವಿಲ್ಲದ ಭ್ರಾಂತಿ.

ಉಳ್ಳ ಚಿದ್ರೂಪದಲ್ಲಿ ಇಲ್ಲದ ಅಹಮಿನ ತೋರಿಕೆಯೆ ಚಿದ್ಭ್ರಮೆ. ಇದು ನಿನ್ನಲ್ಲಿ ಅನಿಮಿತ್ತವಾಗಿ ಆರೋಪವಾಗಿದೆ. ಮರವೆಗೆ ಮತ್ತು ಅರುವಿಗೆ ಬುದ್ಧಿ ಭ್ರಾಂತಿಯೆ ಕಾರಣವಾಗಿದೆ. ನಿನ್ನ ನೀನರಿಯಲು ಕಲ್ಪಿತ ಅಥವಾ ಆಭಾಸವಾದ ಅಹಂಭ್ರಮೆ ಅಳಿವುದು. ಅದರಿಂದ ನೀನೆ ಪರಮಾತ್ಮನು. (ಟಿ.)

ತನ್ನೊಳಿಲ್ಲದ ಬಗೆಯನು ತಾನೆ ಕಲ್ಪಿಸಿ।
ತನ್ನನುಳಿದು ತಾನೆ ಶೋಕಿಸಿ ॥
ತನ್ನ ತಾನರಿದು ತಾನುಳಿವ ದಶಮನಂತೆ ॥
ನಿನ್ನೊಳು ತೋರ್ಪುದೆಲ್ಲವು ಮಿಥ್ಯೆ ॥ 1 ॥

[ ಟಿಪ್ಪಣಿ :– ನಿನ್ನ ಅಧಿಕರಣ ಬಿಟ್ಟು ಕಲ್ಪಿತ ಅಹಂಕಾರ ತೋರದುದರಿಂದ "ಭ್ರಾಂತಿರ ಭ್ರಾಂತ ಪೂರ್ವಕವೆಂಬ ವಚನದಿಂದ" ಭ್ರಮೆಗೆ ಮುನ್ನವೆ ನೀನಾಧಾರನಾಗಿರುವಿ. ಆದುದರಿಂದ ನೀನೆ ಪರಮಾತ್ಮ ]

ತನ್ನಲ್ಲಿ ಇಲ್ಲದ ಭ್ರಾಂತಿಯನ್ನು (ಟಿ–1) ತಾನೆ ಕಲ್ಪಿಸಿ, ತನ್ನ ಬಿಟ್ಟು ಎಣಿಸಿ ನೋಡುವದರಿಂದ ತಾನೆ ಇಲ್ಲದಾಗಿ, ತಾನೆ ಶೋಕಿಸಿ ತನ್ನ ತಾನರಿದು (ಟಿ–2) ತಾನು

(ಮೊದಲಿನಂತೆ, ಯಥಾ ತಥಾ) ಉಳಿದ ದಶಮ ಪುರುಷನ ಕಥೆಯಂತೆ, ನಿನ್ನಲ್ಲಿ ತೋರುವದೆಲ್ಲವೂ ಮಿಥ್ಯೆ (ಟಿ–3)

ಆದರಿಂದ ಸತ್ಯನೀನದರಿಂ ಸ್ವಯಂಜ್ಯೋತಿ।
ಯದರಿಂದೆ ನಿತ್ಯಾಪರೋಕ್ಷನು ॥
ಆದರಿಂದರಿಯೆನು ನಾನಾರೊ ಸೋಹಮೆನಿಪು।
ದಿದು ನಿನ್ನೊಳೌಪಚಾರಿಕ ವ್ಯಸೆ ॥ 2 ॥

ಆದರಿಂದ (ಟಿ–1) ನೀನು ಸತ್ಯ ಸ್ವರೂಪನು. ಆದರಿಂದ ನೀನು ಸ್ವಯಂಜ್ಯೋತಿ ಅದರಿಂದ (ಟಿ–2) ನಿತ್ಯನು (ಟಿ–3) ಅಪರೋಕ್ಷನು (ಟಿ–4) ಆದ್ದರಿಂದ ನಾನಾರು? (ಕೋऽಹಂ) ಎಂದು ಅರಿಯದಾಗ ಮತ್ತು (ಸೋಽಹಂ) ಪರಮನೇ ನಾನು ಎಂದು ಅರಿತ ಬಳಿಕ ಇವೆಲ್ಲ ಭಾವಗಳು ನಿನ್ನಲ್ಲಿ ಔಪಚಾರಿಕವಷ್ಟೆ (ಆರೋಪಿತವೆಂಬ ಭಾವ)

ತನುವಿನೊಳ್ವಿಷಯವನನುಭವಿಸುವನಾರೆಂ।
ದನಿಮಿತ್ತವಹ ನಿನ್ನ ಭ್ರಮೆಯಿಂದೆ ॥
ಜನಿಸಿತಾತ್ಮವಿಚಾರವದರಿಂದ ನಿನಗೆ ಕೇಳ್।
ಘನತರ ಪದವಳವಟ್ಟುದು ॥ 3 ॥

ತನುವಿನಲ್ಲಿ (ಇಂದ್ರಿಯ ಮುಖಾಂತರ) ವಿಷಯಗಳನ್ನು ಅನುಭವಿಸುವವರು ಯಾರು? ಈ ಪ್ರಶ್ನೆ ನಿಮಿತ್ತವಿಲ್ಲದೆ ನಿನ್ನ ಭ್ರಮೆಯಿಂದ ಜನಿಸಿತು. ಇದೇ ನಿನ್ನ ಆತ್ಮವಿಚಾರಕ್ಕೆ ಬೀಜವಾಯಿತು. ಆದರಿಂದ ನಿನಗೆ ಘನತರವಾದ ಬ್ರಹ್ಮಪದವು ಅಳವಟ್ಟಿತು.

ತನುವೊ ಬುದ್ಧೀಂದ್ರಿಯ ನಿಚಯವೊ ಬಳಕಲಾ।
ಮನವೊ ಮೇಣರಿವ ಚಿದಾತ್ಮನೊ ॥
ವನಿತೆ ಕೇಳ್ ಕೋಹಮೆನಿಪ ಬಗೆವಿಡಿದು ನೀ।
ನನಿತು ಚಿದ್ಭ್ರಮೆಯ್ಯೆಸೆ ನಿಜವಲ್ಲ ॥ 4 ॥

[ ಟಿಪ್ಪಣಿ–1 :– ಹತ್ತನೆಯ ಪುರುಷನಿಲ್ಲ ಅವನು ನದಿಯಲ್ಲಿ ಮುಳುಗಿದನೆಂಬ ಕಲ್ಪನೆ.) [ ಟಿಪ್ಪಣಿ–2:– ದಶಮನ ಕಥಾ ಪ್ರಸಂಗದಲ್ಲಿ ಪಾಂಥಸ್ಥನಿಂದ, ತಾನೆ ದಶಮನೆಂದು, ತಿಳಿದು. ] [ ಟಿಪ್ಪಣಿ–3 :– ಅನಿಮಿತ್ತವಾಗಿ ತನ್ನಲ್ಲಿ ಅಧ್ಯಾರೋಪವಾದ ಅಧ್ಯಾಸವು. ವಿಚಾರದಿಂದ ಬಾಧವಾಗುವದರಿಂದ ದಶಮನಂತೆ ಚಿದಾಭಾಸ ಜೀವನ ಸಪ್ತಾವಸ್ಥೆಗಳು. (ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ ಅಪರೋಕ್ಷಜ್ಞಾನ, ಶೋಕನಿವೃತ್ತಿ ಮತ್ತು ಪರಮಾನಂದ ಪ್ರಾಪ್ತಿ (ನಿರಂಕುಶ ತೃಪ್ತಿ) ವಿವೇಕ ಚಿಂತಾಮಣಿ 135 ನೋಡಿರಿ. ]

1. [ ಟಿಪ್ಪಣಿ :– ತೋರಿದ ಭಾವಗಳೆಲ್ಲ ಪುಸಿಯಾಗುವದರಿಂದ. ] 2. [ ಟಿಪ್ಪಣಿ :– ಜಡವಾದ ತೋರಿಕೆಗಳೆಲ್ಲ ನಿನ್ನಿಂದಲೇ ಪ್ರಕಾಶಗೊಳ್ಳುವದಂದ. ] 3. [ ಟಿಪ್ಪಣಿ :– ಅನಿತ್ಯವನರಿಯುವದರಿಂದ ನೀನೆ ನಿತ್ಯನು. ] 4. [ ಟಿಪ್ಪಣಿ :–ಇಂದ್ರಿಯಗಳ ಸಹಾಯವಿಲ್ಲದೆ ತನ್ನೊಳಗೆ ಸಹಜಸಿದ್ಧವಾದ ಅರಿವು ]

ವನಿತೆ ಕೇಳು (ನಾನು) ದೇಹವೋ (ಟಿ–1) ಜ್ಞಾನೇಂದ್ರಿಯ ಸಮೂಹವೋ

(ಟಿ–2) ಮನವೊ (ಟಿ–3) ಅಥವಾ (ವಿಷಯಗಳನ್ನು) ಅರಿವ ಚಿದಾತ್ಮನೋ (ಜ್ಞಾತೃ) ''ಕೋಽಹಂ'' (ನಾನಾರು?) ಎಂದು ನಿನ್ನ ಈ ಕಲ್ಪನೆಗಳನ್ನು ಅನುಸರಿಸಿ ಅನುಸಂಧಾನ ಮಾಡು. ಆಗ ನಿನಗೆ ಇನಿತೆಲ್ಲ ನಿನ್ನ ಚಿದ್ಭ್ರಮೆಯಲ್ಲದೆ ನಿಜವಲ್ಲವೆಂದು ಗೊತ್ತಾಗುವದು.

ಪೊರೆಯೆ ನೀನವರೊಡನನುದಿನವೆಲ್ಲಿಯು ।
ನಿರಹಂಕಾರನು ನಿರ್ವಿಷಯಿ ನೀನು ॥
ಪರಮವಿರಕ್ತನತ್ಯಂತ ಶುದ್ಧನು ಪರಾ ।
ತ್ಪರ ಬೊಮ್ಮ ಬೋಧಸ್ವರೂಪನು ॥ 5 ॥

ನೀನು ಎಲ್ಲಿಯೂ, ಎಂದೂ (ಮೇಲೆ ಹೇಳಿದ ದೇಹಾದಿ) (ಟಿ–4) ವಿಷಯಗಳಿಂದ ರಕ್ಷಣೆ (ಟಿ–5) ಹೊಂದಲಾರಿ. (ಏಕೆಂದರೆ) ನೀನು ನಿರಹಂಕಾರನು, ನಿರ್ವಿಷಯಿ (ಟಿ–6) (ಆದ್ದರಿಂದ) ನೀನು ಪರಮ ವಿರಕ್ತನು. ಅತ್ಯಂತ ಶುದ್ಧನು ಪರಕೆ ಪರತರವಾದ ಬ್ರಹ್ಮನು. ಬೋಧಸ್ವರೂಪ ಅರಿವು ನೀನಿರುವಿ.

ಮರದವೋಲ್ ತೋರಿತಾ ಮರವೆ ನಿನ್ನೊಳು ಮಿಥ್ಯೆ ।
ಯರಿವು ನಿನ್ನೊಡಲಾದ ಕತದಿಂದ ॥
ಬರಿದೆ ಕಲ್ಪಿತವ್ಯೆಸೆ ನಿಖಿಳವೆಲ್ಲವು ನೀನು ।
ಮರೆಯೆ ನಿನ್ನನು ಸದಾದೃಶಿ ಮಾತ್ರ ॥ 6 ॥

ನಿನ್ನಲ್ಲಿ ಮರವೆ ಮರತಂತೆ ತೋರಿತು. ಅದು ಮಿಥ್ಯೆ (ಯಾಕೆಂದರೆ) ನೀನು ಅರುವಿನೊಡಲು (ಟಿ–7) ಆಗಿರುವುದರಿಂದ ಸರ್ವವೆಲ್ಲವನ್ನು ವ್ಯರ್ಥವಾಗಿ ಕಲ್ಪಿಸುವಿ. ನಿನ್ನನು ನೀನೆಂದೂ ಮರೆಯಲಾರಿ. ನೀನು ಸದಾ ದೃಶಿಮಾತ್ರನು. (ಟಿ–8)

ನಿರುಪಾಧಿಕನು ನಿಷ್ಕ್ರಿಯನು, ನಿರ್ವಿಕಲ್ಪನು ।
ನಿರುಪಮನಜ್ಞಾನ ರಹಿತನು ।
ಪರಿಪೂರ್ಣನದ್ವಯನ ಚಲಿತಾತ್ಮನು ಸುಖ ।
ಭರಿತನು ನೀನೆ ಕೇಳ್ಪರಮಾತ್ಮ ॥ 7 ॥

ಮೈತ್ರೇಯಿ ಕೇಳು, ನಿನಗೆ ದೇಹ ಮನಾದಿ ಉಪಾಧಿಗಳಿಲ್ಲ, ನೀನು ನಿಷ್ಕ್ರಿಯನು, ನಿರುಪಮನು, ಅಜ್ಞಾನ ರಹಿತನು, ಪರಿಪೂರ್ಣನು ಅದ್ವಯನು

1. [ಟಿಪ್ಪಣಿ :– ದೇಹನಾನೆಂಬವನು ಚಾರ್ವಾಕನು.] 2. [ಟಿಪ್ಪಣಿ :– ಇಂದ್ರಿಯಗಳೇ ಆತ್ಮಬವರು ಚಾರ್ವಾಕ ಏಕದೇಶಿಗಳು.] 3. [ಟಿಪ್ಪಣಿ :– ಮನವೇ ಆತ್ಮನೆಂಬರು ಉಪಾಸಕರು (ಭಾವಿಕರು).] 4. [ಟಿಪ್ಪಣಿ :–ಅರಿವ ಪುರುಷನಾನೆನ್ನವವರು.] 5. [ಟಿಪ್ಪಣಿ :– ವಿಷಯಗಳ ಸಂಬಂಧವಿಲ್ಲ ಯಾಕೆಂದರೆ ನೀನೆ ಸರ್ವಾಶ್ರಯನು. ಕಾಮಾದಿ ಅರಿಗಳ ಹೊಲಬಿಲ್ಲ ನಿನಗೆ.] 6. [ಟಿಪ್ಪಣಿ:– ವಿಷಯಾತೀತನು.] 7. [ಟಿಪ್ಪಣಿ :–ಅರಿವು ಮರವೆಗಳೆಂಬ ಬಗೆಗಳಿಲ್ಲದ, ಕಲ್ಪನೆಗಳಿಲ್ಲದ ಶುದ್ಧ ಅರಿವು ನೀನು.] 8. [ಟಿಪ್ಪಣಿ :– ಸ್ವಗತಾದಿ ಭೇದ ರಹಿತನು.] (ಅಖಂಡನು) ಅಚಲಿತಾತ್ಮನು (ಕೂಟಸ್ಥನು) ಸುಖಭರಿತನು (ವಿಷಯಾತೀತನು) (ಆದ್ದರಿಂದ) (ಟಿ–1) ನೀನೇ ಪರಮಾತ್ಮನು. (ಟಿ–2)

ಆದರಿಂದೆ ತತ್ತ್ವಮಸೀತಿಯೆಂಬುದು ಸತ್ಯ।
ಪದವೆನಿಪುದು ಪೂರ್ವ ಪಕ್ಷಕ್ಕೆ ॥
ಪುದಿದುನೀನಾನೆಂಬುದುಂಟೆ ಪರೀಕ್ಷಿಸೆ।
ಪದಪಿಂದೆ ವಾಕ್ಯಾರ್ಥಬೋಧಕ್ಕೆ ॥ 8 ॥

ಆದ್ದರಿಂದ ತತ್ತ್ವಮಸಿ (ಟಿ–3) ಎಂಬುದು ಪೂರ್ವ ಪಕ್ಷಕ್ಕೆ ''ನೀನೆ ಪರಮಾತ್ಮನು'' ಎಂಬುದು (ಟಿ–4) ಸತ್ಯ ಪದವೆನಿಸುವುದು. ಆದರೆ ವಿಚಾರಿಸಲಾಗಿ ನೀನು ನಾನೆಂಬುದು ಎಂದಾದರೂ ಭೇದ ಇರುವದೇ? (ಇಲ್ಲವೆಂಬರ್ಥ) ಆದುದರಿಂದ ಮಹಾವಾಕ್ಯ ಬೋಧವು ಉತ್ತರ ಪಕ್ಷದಲ್ಲಿ ಔಪಚಾರಿಕವೆನಿಸುವದು.

ಅರಿವ ನಿನ್ನನು ನೀನೆ ಮರೆದೆನೆಂಬುದು ಭ್ರಾಂತಿ।
ಪೊರಗೆ ಸದ್ಗುರು ಬೋಧೆಯೊಳು ತೋರೆ॥
ಮರೆಯದರಿವ ನಿನ್ನ ನೀನರಿದಾಗಳೆ।
ಮರವೆ ಲಯಿಪುದು ನೀನು ಸುಖಮಿರ್ಪೆ ॥ 9 ॥

ಅರಿವ ಸ್ವರೂಪಾಗಿರುವ (ಅರಿಕೆಯಾಗಿರದ) ನಿನ್ನನ್ನು ನೀನು ಮರೆತೆನೆಂಬುದು ಭ್ರಾಂತಿ. ಸಾಧಕನಾಗಿ ಸದ್ಗುರುವಿನ ಬೋಧೆಯಿಂದ ತನ್ನ ತಾನರಿದ ಬಳಿಕ ಮರವೆ ನಾಶವಾಗುವದು. ಮರೆಯದೆ ಅರಿವ ನಿನ್ನನು ನೀನು ಅರಿದಾಕ್ಷಣ ಮರವೆ ಲಯವಾಗುವದು (ಟಿ–5) ಮತ್ತು ನೀನು ಸುಖಮಯವಾಗಿರುವೆ. (ಟಿ–6) ಬೆಳಕಿನಲ್ಲಿ ಕತ್ತಲೆಯಂತೆ ಅರಿವಿನಲ್ಲಿ ಮರವೆ ಸಿದ್ಧಿಸದು. ಅರಿಯುವ ಮರೆಯುವ ವಿಷಯಗಳಿಲ್ಲದ್ದರಿಂದ ನೀನೆ ಸುಖರೂಪನು.

ರವಿಯಿಂದೆ ರವಿಯನಿಂದುವಿನಿಂದ ಇಂದು ವನ-।
ರಿವವೊಲು ತನ್ನನ್ನು ತನ್ನ ಬೆಳಗಿಂದ ॥
ಯುವತಿ ತಾನರಿವುದಿಂತಹುದು ತನಗೆ ತಾನೆ।
ವಿವರಿಸೆ ಗೋಚರನೆನಿಪನು ॥ 10 ॥

ಯುವತಿ ಮೈತ್ರೇಯಿ, ಸೂರ್ಯನನ್ನು ಸೂರ್ಯನಿಂದ ಮತ್ತು ಚಂದ್ರನನ್ನು ಚಂದ್ರನಿಂದಲೆ ಅರಿಯುವಂತೆ ತನ್ನನ್ನು ತನ್ನ ಬೆಳಕಿನಿಂದ ತಾನು ತಿಳಿಯಲು ಸಾಧ್ಯವಿದೆ. ತನ್ನ ಶುದ್ಧ ಬುದ್ಧಿಗೆ ತಾನು ಗೋಚರನಾಗುವನು.

1. [ಟಿಪ್ಪಣಿ:– ಅಜ್ಞಾನವನ್ನು ಅರಿಯುವದರಿಂದ] 2. [ಟಿಪ್ಪಣಿ:– ಕೂಟಸ್ಥನು, ಚಿದ್ಭ್ರಮೆಯಿಂದ ವಿಚಲಿತನಲ್ಲವು.] 3. [ಟಿಪ್ಪಣಿ :–ನೀನೆ ಆ ಪರಮಾತ್ಮನಿರುವಿ. ಎಂಬ ಸಾಮವೇದ ವಾಕ್ಯವು.] 4. [ಟಿಪ್ಪಣಿ :– ಆದರೆ ಉತ್ತರ ಮಿಮಾಂಸೆಯಲ್ಲಿ ಈ ಮಹಾವಾಕ್ಯ ಬೋಧವು. ಔಪಚಾರಿಕವೆನಿಸುವದು ಜೀವನು ಸಂಸಾರಿ ಎಂಬ, ಶಿವನು ಸೃಷ್ಟಿಕರ್ತನೆಂಬ ತೋರುವ ಭ್ರಮೆಯನ್ನು ತೊಲಗಿಸುವದೆ ವಾಕ್ಯಾರ್ಥ ಪ್ರಯೋಜನವು.] 5. [ಟಿಪ್ಪಣಿ :– ಇಲ್ಲದ ಮರವೆ ಇಲ್ಲದಾಗುವದು. ಇಲ್ಲವೆಂಬುದನು ಅರಿದಿರ್ದ ಅರಿವು (ಜ್ಞಾನವು) ನಿಜ ಅರುವಿನೊಡನೆ ಹಾಲು ಹಾಲಿನಲ್ಲಿ ಬೆರೆದಂತೆ, ಏಕವಾಗುವದು.] 6. [ಟಿಪ್ಪಣಿ :– ಅರಿವು–ಮರವೆಗಳ ಕ್ರಿಯೆ ಪ್ರತಿಕ್ರಿಯೆ ಇಲ್ಲದ್ದರಿಂದ ಆನಂದವಿದೆ.]

ತನಗೆ ತೋರುವವೆನಿತನಿತು ಜಡಂಗಳಾ ।
ತ್ಮನನವು ಕಾಣಲರಿಯವೆಂತು ॥
ಇನಿತನಾರೈದು ನೋಡಲು ಕಾಂತೆ ಮೈತ್ರೇಯಿ ।
ನಿನಗಿಲ್ಲಿ ಸ್ವಪ್ರಕಾಶತೆಯೈಸೆ ॥ 11 ॥

ತನಗೆ ಎದಿರಿಟ್ಟು ತೋರುವ ಜಡ (ಟಿ)ವಿಷಯಗಳೆಲ್ಲ ತನ್ನನ್ನು (ಆತ್ಮನನ್ನು) ತಿಳಿಯಲಾರವು. ಕಾಂತೆ ಮೈತ್ರೇಯಿ, ಇನಿತೆಲ್ಲವನು ವಿಚಾರಿಸಿ ನೋಡಿದರೆ ನಿನಗೆ ಸ್ವಯಂ ಪ್ರಕಾಶವು ಸಿದ್ಧವಾಗುವದು.

ಅರಿಯಲು ಮರೆಯಲುಮರಿಗುಮೆ ಜಡವರ್ಗ ।
ವರಿಯಲು ಮರೆಯಲು ಬಲ್ಲುದು ॥
ಅರಿವಲ್ಲದನ್ಯಮಿಲ್ಲಾಗ್ಗಿ ತಾನರಿವಪ್ಪ॥
ನರಿವಪ್ಪನಾಗಿ ಬೊಮ್ಮವು ತಾನೆ ॥ 12 ॥

ಜಡವರ್ಗವು ತನ್ನತಾನರಿಯಲು ಮತ್ತು ಮರೆಯಲು ಅಸಮರ್ಥವು. ತನ್ನ ತಾನರಿಯಲು ಮತ್ತು ಮರೆಯಲು ಸಮರ್ಥವಾದುದು ಅರಿವಲ್ಲದೆ (ತಾನಲ್ಲದೆ) ಅನ್ಯವಿಲ್ಲವು. ಆದ್ದರಿಂದ ಅರಿದೆನು ಮತ್ತೆ ಮರೆದೆನು ಎಂಬೆರಡನ್ನೂ ತಿಳಿಯುವ ಉಳಿಮೆಯೇ ತಾನು. ತಾನೇ ಬ್ರಹ್ಮ (ಚಿದ್ರೂಪ)ನು.

ಅದರಿಂದೆ ಸಿದ್ಧನೆನಿಪನು ತನಗೆ ತಾನಿಂ ।
ತುದಿಸಿದವೆಲ್ಲವು ಜಡ ಮಿಥ್ಯೆ ॥
ಅದನು ನೀನರಿವೆ ಸಮ್ಯಗ್ಬೋಧಾಗತಿಯಿಂದೆ ।
ಸುದತಿ ಬೇರಿಲ್ಲಿ ಸಾಕ್ಷಿಗಳುಂಟೆ ॥ 13 ॥

ತಾನು ಇಂತು ಎಂದೆಂದು ಅರಿಯುವವನೇ ಇರುವದರಿಂದ ತನಗೆ ತಾನು ಸ್ವಯಂ ಸಿದ್ಧನು. ನಿತ್ಯ ಬೋಧಸ್ವರೂಪ. ತನ್ನಲ್ಲಿಹುಟ್ಟಿದುದೆಲ್ಲ ಜಡವಾದುದು. ಮಿಥ್ಯೆ. ನಿನ್ನಲ್ಲಿಹುಟ್ಟಿ, ಹೊಂದಿ ಅಡಗುವ ಜಡದೃಶ್ಯಗಳನ್ನು ಸಮ್ಯಗ್ ಜ್ಞಾನ ದೃಷ್ಟಿಯಿಂದ ನೀನರಿವೆ. ಲೇಸಾದ ದಂತಗಳುಳ್ಳ ಮೈತ್ರೇಯಿ ನಿನ್ನ ಹೊರತು ಬೇರೆ ಸಾಕ್ಷಿಗಳುಂಟೆ ? (ಇಲ್ಲವೆಂಬ ತಾತ್ಪರ್ಯ)

ಮನಕೆ ವಾಕ್ಕಿಂಗೆ ಗೋಚರ ಮಾಗದನುಪಮ ।
ನನಘನಾನಂದೈಕರಸ ಪೂರ್ಣ ॥
ಘನಚಿದಾತ್ಮಕನೆ ತಾನೆಂಬುದೆ ನಿಜವಿದು ।
ಮನುಮುನಿ ರುದ್ರಾದ್ಯರನುಭೂತಿ ॥ 14 ॥

[ ಟಿಪ್ಪಣಿ :— ಸ್ವ ಮತ್ತು ಇತರ ಜ್ಞಪ್ತಿ ಶೂನ್ಯವಾಗಿರುವುದೆ ಜಡವು. ನಾನು ಇದ್ದೇನೆ ಎಂಬ ಜ್ಞಾನವು ಜಡಕೆ ಇಲ್ಲವಾದ್ದರಿಂದ ಅದಕ್ಕೆ ಸ್ವಯಂ ಪ್ರಕಾಶವಿಲ್ಲ ]

ಮನಸ್ಸಿಗೆ ಮಾತಿಗೆ ನಿಲುಕದ, ಅನುಪಮ ಅನಘ (ವಿಷಯಾತೀತ) ಆನಂದೈಕ ಸ್ವರೂಪನು ರಸಪೂರ್ಣನು, ಘನಚಿದಾತ್ಮಕ ತಾನು ಎಂಬುದೇ ನಿಜವಾದ ಸ್ವರೂಪು. ಇದು ಮನು, ಮುನಿ, ರುದ್ರಾದ್ಯರ ಅನುಭವವು. ಇದುವೆ ಸಂವಿದಾತ್ಮ ತಾನಾದ ತನ್ನ ನಿಜಾನುಭೂತಿ (ಮುಮುಕ್ಷುಗಳು ಈ ಸೂತ್ರವನ್ನು ಪುನಃ ಪುನಃ ಓದಬೇಕು. ಮನನ ಮಾಡುವ ಸೂತ್ರವಿದು.)

– ಇತಿ ನಿರೂಪಣೆ –

## 15ನೇ ಸೂತ್ರ

ತರ್ಕವನುಡಿವನೆ ತತ್ತ್ವವಿದನು ಜಡ ।
ತರ್ಕಿಗಳಾದ ಮಾನವರಂತೆ ॥

ಜಡಬುದ್ಧಿಯಿಂದ ತರ್ಕವಮಾಡುವ ಮಾನವರಂತೆ, ಆತ್ಮಜ್ಞಾನಿಯು ವಾದವಿವಾದ ಮಾಡಲಾರನು.

ನುಡಿಗೆ ಗೋಚರವೆನಿಪೊಡೆ ತರ್ಕವೈಸಲೆ।
ನುಡಿಗೆ ಗೋಚರವಲ್ಲದೆಡೆಯಲ್ಲಿ॥
ನುಡಿದು ತರ್ಕಿಪುದು ಕುತರ್ಕವಾದುದರಿಂದೆ।
ನುಡಿದು ತರ್ಕಿಪನತಿಮೂಢನು ॥ 1 ॥

ನುಡಿಗೆ ಗೋಚರವಾದ ಜಡ ವಿಷಯ ಕುರಿತು ತರ್ಕ ಮಾಡಬಹುದು (ಆದರೆ) ನುಡಿಗೆ ಗೋಚರವಲ್ಲದ (ಅನುಪಮ) ವಸ್ತುವಿನ ಬಗ್ಗೆ ವಾದ–ವಿವಾದ ಮಾಡುವದು ಕುತರ್ಕವೆನಿಸುವದು. ಆದ್ದರಿಂದ ನಿಜತತ್ವ (ಆತ್ಮತತ್ವ) ಕುರಿತು ತರ್ಕ ಮಾಡುವವನು ಅತಿ ಮೂರ್ಖನು.

ಅರುಹಿಸಲ್ಮರಹಿಸಲ್ತೆರಹುಂಟೆ ಪೂರ್ಣನಿ।
ಗರಿದೆನು ಮರೆದೆನೆಂಬರುಗಳು ।
ನೆರೆಮರುಳಾಗಿ ಪೋದರುಮೆಂದೊಡಿನ್ನಾವ।
ತೆರದಿಂದೆ ತರ್ಕಿ ವಾದಿಸುವನು ॥ 2 ॥

ಪರಿಪೂರ್ಣತ್ಮನಲ್ಲಿ(ತನ್ನಲ್ಲಿ) ಅರಿಯಲು–ಮರೆಯಲು ತೆರಹು (ಇಂಬು) ಇಲ್ಲ. (ಅರುವಿಗೆ ಅರುವಾಗಿ–ಮರವೆಗೆ ದೂರಾಗಿರುವ) ಅದ್ವಯ ಆತ್ಮನನ್ನು ಅರಿದೆನು ಮರೆದೆನು. ಎನ್ನುವವರು ಮೂರ್ಖರಾಗಿ ಹೋದರು. ಅಂದ ಮೇಲೆ ತರ್ಕಿಯು ಯಾವ ರೀತಿಯಿಂದ ವಾದ ಮಾಡಬಲ್ಲನು ?

ಅರಿಯದ ಮೂಢನ ಪರಿಯೊಳಿರ್ಪನು ನಿಜ।
ವರಿದ ಮಹಾಪುರುಷನು ತನ್ನ॥
ಕುರುಹು ದೋರದೆ ತರ್ಕಿಸದೆ ಸುಮ್ಮನೆಲ್ಲರ।
ತೆರದೊಳುಂಡುಟ್ಟು ಸಂಚರಿಪನು ॥ 3 ॥

ನಿಜವರಿದ ಮಹಾಪುರುಷನು ಏನೂ ಅರಿಯದ ಮೂಢನ ರೀತಿಯಲ್ಲಿರುವನು. ತನ್ನ ಕುರುಹು ತೋರದೆ (ಟಿ–1) ತರ್ಕ ಮಾಡದೆ, ಸುಮ್ಮನೆ ಎಲ್ಲರಿರುವಂತೆ ತಾನುಂಡುಟ್ಟು (ಸುಖವಾಗಿ) ಸಂಚರಿಸುವನು.

ಪುಸಿ ಜಗತ್ರಯದೊಳು ಪುಸಿ ತರ್ಕದಿಂದಾದ।
ಪುಸಿ ಪರಾಜಯ ವಪಜಯಮಿವು॥
ಪುಸಿ ಯಹುದದರಿಂದೆ ಪುರುಳುಂಟೆ ತಿಳಿದಂದು।
ಸಸಿನೆ ಕೇಳಾನಂದಮಯಗಾತ್ರೆ ॥ 4 ॥

ಆನಂದಮಯ ಒಡಲುಳ್ಳ ಮೈತ್ರೇಯಿ, ಚನ್ನಾಗಿ ಆಲಿಸು. ಪುಸಿ (ಮಿಥ್ಯಾರೂಪಿನ) ಜಗತ್ರಯದಲ್ಲಿ ಪುಸಿತರ್ಕದಿಂದಾದ ಜಯಾಪಜಯಗಳು ಪುಸಿಯಾದುದರಿಂದ ನಿಜವನು ತಿಳಿದ ಬಳಿಕ (ಜಡವಾದ) ತರ್ಕದಲ್ಲಿ ಹುರುಳುಂಟೇ ? (ವ್ಯರ್ಥವೆಂಬ ಭಾವ).

ಇದು ತತ್ತ್ವವೆಂದೋರ್ವ ನದನುಮಲ್ಲೆಂದೋರ್ವ।
ನದನುಮಲ್ಲೆಂದು ಬಳಿಕಲೋರ್ವ॥
ವಿದಿತವಿದೆಂದೋರ್ವನೊದವಿ ಸಾಧಿಸುತಿರ್ಪ।
ರದರಿಂದೆ ತರ್ಕದೊಳ್ನಿಜಮುಂಟೆ ॥ 5 ॥

ನಾನು ನುಡಿದುದೇ ನಿಜತತ್ತ್ವ ಎಂದು ಒಬ್ಬನು ಮಂಡಿಸಿದರೆ ಅದು ನಿಜವಲ್ಲ ಎಂದು ಅದನ್ನು ಇನ್ನೊಬ್ಬ ಖಂಡಿಸುವನು. ನಾನು ತಿಳಿದುದೇ ಸರಿ ಎಂದು ಮಗುದೊಬ್ಬನು ತರ್ಕ ಅನುಮಾನಾದಿ ಪ್ರಮಾಣಗಳಿಂದ ಸಿದ್ಧಮಾಡಲೆತ್ನಿಸುವನು. (ಟಿ–2) (ಆದರೆ) ಈ ತೆರನಾದ ವಾದ ತರ್ಕಗಳಲ್ಲಿ ನಿಜತತ್ತ್ವ ಇರಲಾರದು. ಪುಸಿ ತರ್ಕದಿಂದ ಸತ್ಯವಾದ ಆತ್ಮತತ್ತ್ವವನ್ನು ಸಾಧಿಸುವದು. ಅಸಾಧ್ಯವು ಎಂಬ ತಾತ್ಪರ್ಯ.

ತಿಳುಪ ಪೇಳ್ವುದು ತನ್ನನೊಲವಿಂದೆ ತಿಳಿಯಲ್ಕೆ।
ನಳನಾಕ್ಷಿಬೆಸಗೊಂಬುದಲ್ಲದೆ॥
ಉಳಿದಂತದ್ವೈತ ವಿಷಯವನು ಗುರುಶಿಷ್ಯ।
ರೆಳಸಿ ತಿಳಿಯೆ ಮಂದಮತಿಗಳು ॥ 6 ॥

1. [ ಟಿಪ್ಪಣಿ :– ಆತ್ಮನಿಜನಿಷ್ಠನು, ಬ್ರಹ್ಮನಿಷ್ಠನು. ] [ ಟಿಪ್ಪಣಿ :– ಅರುವಿನಲ್ಲಿ ಜ್ಞಾನಾಜ್ಞಾನಗಳ ಕುರುಹು (ವೃತ್ತಿಯ ಕುಸುರು) ಇಲ್ಲವಾದುದರಿಂದ. ]

2. [ ಟಿಪ್ಪಣಿ:– ನೈಯಾಯಿಕ, ವೈಶೇಷಿಕ, ಮೊದಲಾದ ವಾದಿಗಳ ತರ್ಕವು. ಶೃತಿ ಯುಕ್ತಿ ಅನುಭವಕ್ಕೆ ವಿರೋಧವಾದುದರಿಂದ ಅದು ಪುಸಿ. ಪುರುಳಿಲ್ಲದುದು. ] [ ಟಿಪ್ಪಣಿ :– ಏಕೆಂದರೆ ಆತ್ಮನ ಇರುವು ಅರಿವು ವಸ್ತುತಂತ್ರವಾಗಿದೆ ತರ್ಕವು ಕರ್ತೃತಂತ್ರವಾದುದರಿಂದ ತರ್ಕದಲ್ಲ ನಿಜವಿರದೆ ಮೋಸವಿದೆ. ]

ಕಮಲಾಕ್ಷಿ ಮೈತ್ರೇಯಿ, ತನ್ನ ನಿಜವನ್ನು ತಿಳಿದುಕೊಳ್ಳಬೇಕೆಂದು ಕೇಳುವವಗೆ (ಮುಮುಕ್ಷುವಿಗೆ) ಕಳಕಳಿಯಿಂದ ಅದನ್ನು ಪ್ರೀತಿಯಿಂದ ಗುರುಗಳು ತಿಳಿಸಿ ಹೇಳಬೇಕು. ಉಳಿದಂತೆ (ಟಿ–1) ಅದ್ವೈತ (ಟಿ–2) ವಿಷಯವನ್ನು ಗುರುಶಿಷ್ಯರು, ಲಾಭ ಹೊಂದಬೇಕೆಂಬ ಕಾಮನೆಯಿಂದ ತಿಳಿಯಲುದ್ಯುಕ್ತರಾದರೆ ಅವರೀರ್ವರೂ ಮಂದಮತಿಗಳು (ಬುದ್ಧಿಗೇಡಿಗಳೇ) ಸರಿ.

1. [ ಟಿಪ್ಪಣಿ:– ಜ್ಞಾತ್ರಾದಿ ತ್ರಿಪುಟಿಗಳಿಗೊಳಪಟ್ಟ ವಿಷಯಗಳಂತೆ. ] 2. [ ಟಿಪ್ಪಣಿ:– ಅದ್ವಯವಾದ ಆತ್ಮತತ್ವವು ಅದು ಇದೆಲ್ಲವನೊಳಕೊಂಡು ಓಂಕಾರ ಸ್ವರೂಪದಿಂದ ಅಖಂಡವಾಗಿ ಜ್ಞಾತೃ ಆದಿ ತ್ರಿಪುಟಿರಹಿತವಾಗಿದೆ. "ತತ್–ಏತತ್ ಓಮ ಏಕಮೇವ ಜ್ಞಾತ್ರಾದಿವರ್ಜಿತಂ ॥) ]

– ಇತಿ ತರ್ಕನಿರಾಕರಣ ನಿರೂಪಣೆ –

## 16ನೇ ಸೂತ್ರ

ಇದು ಸತ್ಯಾನುಭವವಿದು ಮಿಥ್ಯಾನುಭವವೆಂ।
ದೊದವಿ ಬೋಧಿಪನೆ ಸದ್ಗುರುವಕ್ಕು ॥

ಇದು ಸತ್ಯವಾದ ಅನುಭವ, (ಟಿ–1) ಇದು ಮಿಥ್ಯವಾದ ಅನುಭವ (ಟಿ–2) ಎಂದು ವಿವೇಕದಿಂದ ಸರಿಯಾಗಿ ಬೋಧಿಸುವವನೆ ಸದ್ಗುರು.

ಅಂತರಾತ್ಮಾವಸ್ಥೆಯೊಳು ಗುರು ಜೀವಾತ್ಮ।
ಕಂ ತಾನೆ ವಿರತಿಯಿಂದವೆ ಶಿಷ್ಯ ॥
ಕಾಂತೆ ಕೇಳಿಂತಾಗೆ ಗುರುಶಿಷ್ಯ ಸಂಬೋಧೆ।
ಯಂತವರೊಳು ಸವನಿಸುತಿರ್ಕು ॥ 1 ॥

ಅಂತರಾತ್ಮ ಅವಸ್ಥೆ (ಟಿ–3) ಯಲ್ಲಿರುವವ ಶ್ರೀ ಗುರು, ಮತ್ತು ವಿರತಿಯನ್ನು ಸಾಧಿಸಿದ ಜೀವಾತ್ಮನೇ ಶಿಷ್ಯನು, ಕಾಂತೆ ಮೈತ್ರೇಯಿ ಕೇಳು, ಇವರೀರ್ವರ ಕೂಟದಲ್ಲಿ ಗುರು ಶಿಷ್ಯ ಸಂಬೋಧೆ ಸಂಭವಿಸುವದು.

ನಿಜವರಿಯದ ರಘುಜನಿಗಾ ಭೃಗುಜನೆಂತು।
ನಿಜವ ಬೋಧಿಸಿದನಾ ಪರಿಯಿಂದ ॥
ನಿಜವನು ಶಿಷ್ಯಂಗೆ ಗುರುಬೋಧಿಪುದು ತನ್ನ।
ನಿಜದೈಕ್ಯವನು ಪರಮಾತ್ಮಕನೆಂದು ॥ 2 ॥

1. [ ಟಿಪ್ಪಣಿ :– ಇದೇ ಆತ್ಮದರ್ಶನಕ್ಕೆ ಸಮ್ಯಗ್ ಜ್ಞಾನದ ಸುಖಾನುಭವ. ] 2. [ ಟಿಪ್ಪಣಿ:– ಪ್ರಪಂಚ ಪ್ರತೀತಿಗೆ ಕಾರಣವಾದ ಅನುಭವ. ] 3. [ ಟಿಪ್ಪಣಿ :– ಅರಿವು ಮರವೆಗಳೆಂಬೆರಡನು ನೆರೆಕೂಡಲಂತರಾತ್ಮಾವಸ್ಥೆ ಅಥವಾ (ದೇಹಸ್ಥಿತೋಽಪ್ಯಯಂ ಜೀವೋ ದೇಹಸಂಗ ವಿವರ್ಜಿತ ಅಂತರಾತ್ಮೇತಿ ಕೀರ್ತಿತಃ) ದೇಹದಲ್ಲಿದ್ದರೂ ದೇಹಸಂಗರಹಿತನಾದ ಜೀವನು ಸ್ವರೂಪ ಜ್ಞಾನದಿಂದ ಅಂತರಾತ್ಮನೆಂದು ಹೇಳಲ್ಪಡುತ್ತಾನೆ. ]

ತನ್ನ ಮೂಲಸ್ವರೂಪ ತಿಳಿಯದ ಶ್ರೀರಾಮನಿಗೆ ಪರಶುರಾಮನು 'ನೀನಾದರೂ ವಿಷ್ಣುವೆ ಇರುವಿ' ಎಂದು ಉಪದೇಶಿಸಿದಂತೆ (ಟಿ–1) ಶಿಷ್ಯನಿಗೆ ಆತನ ನಿಜವು ಪರಮಾತ್ಮನ ಸ್ವರೂಪಕ್ಕೆ ಅನನ್ಯ (ಏಕ)ವಾಗಿರುವದೆಂದೇ ಶ್ರೀಗುರು ಬೋಧಿಸತಕ್ಕದ್ದು.

ಗುರು ಸತ್ಯಾನುಭವಗೋಚರವೆನೆ ಪೇಳ್ದುದ।
ನುರುಭಕ್ತಿಯೊಳು ನಂಬು ಬಳಿಕೊಂದು ॥
ಪರಿಯ ಮಿಥ್ಯಾನುಭವಕ್ಕೆ ಗೋಚರವನು ನೀ।
ನಿರದರಿ ಪುಸಿಯೆಂದು ಶಶಿಮುಖಿ ॥ 3 ॥

ಚಂದ್ರಮುಖಿ, ನಿನ್ನ ಅನುಭವಕ್ಕೆ ಗೋಚರಿಸುವಂತೆ ಶ್ರೀ ಗುರು ಹೇಳುವ ಯಥಾರ್ಥ (ಸತ್ಯ) ಅನುಭವವನ್ನು ಅನನ್ಯ ಭಕ್ತಿಯಿಂದ ನಂಬು, ಇದರ ಹೊರತು ಯಾವುದೇ ಬಗೆಯ ಮಿಥ್ಯಾನುಭವಕ್ಕೆ (ಟಿ–2) ಗೋಚರಿಸುವ ಪ್ರಪಂಚವು ಪುಸಿ ಎಂದು ನೀನೆಡೆ ಬಿಡದೆ ತಿಳಿ.

ದ್ವೈತವೆ ಮಿಥ್ಯಾನುಭೂತಿಯೆಂದೊಲವಿನ-।
ದ್ವೈತವೆ ಸತ್ಯಾನುಭವವೆಂದು ॥
ಶ್ರೌತಾನುಗುಣ ಯುಕ್ತಿಯೊಡಗೂಡಿ ಪೇಳುವ।
ರಾ ತತ್ವವನು ಬಲ್ಲ ಸುಖಿಗಳು ॥ 4 ॥

ಭೇದರೂಪ ದ್ವೈತವೆ ಮಿಥ್ಯಾನುಭೂತಿ (ಮತ್ತು) ಅಭೇದ ಸಾಧಿಸುವ ಪ್ರೀತಿಯ ಅದ್ವೈತವೇ ಸತ್ಯಾನುಭೂತಿ ಎಂದು ಆತ್ಮತತ್ತ್ವಬಲ್ಲ ಸುಖಿಗಳು ಶೃತಿಗನುಸಾರವಾದ ಯುಕ್ತಿಯಿಂದ ಬೋಧಿಸುವರು.

ತಾನಿದಿರೆಂದೆಂಬ ಭಾವನೆ ದ್ವೈತಮ।
ದಾನಿದಿರೆಂಬೆರಡಳಿದಿರ್ದ ॥
ನ್ಯೂನವಿಲ್ಲೆನಿತಲ್ಲದೆಸೆವ ನೈರ್ಮಲ್ಯವಿ।
ಜ್ಞಾನವದ್ವೈತವೆಂದೆನಿಪುದು ॥ 5 ॥

ತಾನು ಇದಿರು ಎಂಬ ಭೇದ ಭಾವವೆ ದ್ವೈತವು (ಮತ್ತು) ನಾನು ಇದಿರು ಎಂಬ ಎರಡೂ ಭಾವಗಳು ನಾಶವಾಗಿ ಏನೊಂದು ಕೊರತೆ ಇಲ್ಲದೆ ಶೋಭಿಸುವ ಮತ್ತು ನಿರ್ಮಲವಾದ (ಟಿ–3) ವಿಜ್ಞಾನವೇ (ಟಿ–4) ಅದ್ವೈತವೆಂದು ನಿಶ್ಚಯಿಸಬೇಕು.

1. [ ಟಿಪ್ಪಣಿ :– ರಾಮ ಮತ್ತು ಪರಶುರಾಮ (ಜಮದಗ್ನಿಋಷಿಯ ಪುತ್ರ) ಈರ್ವರ ಅವತಾರ ಭಿನ್ನವಾದರೂ ವಿಷ್ಣುತ್ವವು ಇಬ್ಬರಲ್ಲಿ ಒಂದೇ ಇದೆ. ಈ ಸತ್ಯವನ್ನರಿಯದೆ ರಾಮನು ಶಿವಧನುಸ್ಸು ಹಿಡಿದು ಯುದ್ಧಕ್ಕೆ ಸನ್ನದ್ಧನಾದಾಗ ಪರಶುರಾಮನಿಗೆ ನಾರದನು ಅವನ ಪೂರ್ವ ಜನ್ಮದ ವೃತ್ತಾಂತ (ವಿಷ್ಣುತ್ವ)ವನ್ನೆ ಸ್ಮರಣೆಗೆ ತಂದುಕೊಡುತ್ತಾನೆ.] 2. [ ಟಿಪ್ಪಣಿ :– ಅಜ್ಞಾನವೃತ್ತಿಯಿಂದ ಅನ್ಯಥಾ ಗ್ರಹಣಕ್ಕೆ ಕಾರಣವಾದುದು.] 3. [ ಟಿಪ್ಪಣಿ :–ಅಹಂಭಾವ ಮತ್ತು ಇದಂ ಭಾವ.] [ ಟಿಪ್ಪಣಿ :– ಯಾವನು ಆಕಾಮನೋ–ಅಪ್ತಕಾಮನೋ ಅವನಿಗೆ ಕೊರತೆಯಿಲ್ಲ.] [ ಟಿಪ್ಪಣಿ :– ಅವಿದ್ಯಾ ಸಂಗವಿಲ್ಲದ.] 4. [ ಟಿಪ್ಪಣಿ:– ಜ್ಞಾನ, ಅಜ್ಞಾನ ಮತ್ತು ಜ್ಞಾನಾಜ್ಞಾನ ವೃತ್ತಿಗಳ ಕುಸುರಿಲ್ಲದ.]

ದ್ವೈತವೆ ಜೀವನದ್ವೈತನಂತರನುಮಾ।
ದ್ವೈತಾದ್ವೈತಂಗಳೆಂಬೆರಡನು॥
ನೇತಿಗಳೆದು ಮೇಣವರತೋರ್ಕೆಯುಡಗಿ ನಿಂ।
ದಾತನೆ ಪೂರ್ಣಪರಾತ್ಮನು ॥ 6 ॥

ದ್ವೈತಭಾವ ಉಳ್ಳವನೆ ಜೀವಾತ್ಮನು. ಅದ್ವೈತ ನಿಶ್ಚಯವುಳ್ಳವನೆ ಅಂತರಾತ್ಮನು. ದ್ವೈತಾದ್ವೈತಗಳೆಂಬ ಎರಡೂ ಜ್ಞಾನಗಳನ್ನು ಅಲ್ಲಗೆಳೆದು ಬಳಿಕ ಅವರ ತೋರಿಕೆ (ಟಿ–1) ಉಡುಗಿ ನಿಂದಾತನೇ ಪೂರ್ಣಪರಾತ್ಮನು. (ಟಿ–2)

ಭ್ರಮೆಯಿಂದೆ ಜೀವನಾಭ್ರಮೆ ಮಿಥ್ಯೆಯೆಂದು ಕೇಳ್।
ಭ್ರಮೆಯಿಂದೆ ತಿಳಿದಂತರಾತ್ಮನ॥
ಭ್ರಮೆ ತನ್ನೊಳ್ಕಿಡೆ ತಾನೆ ಪರಮಾತ್ಮನೆಂದಿಂತು।
ಸುಮತಿ ಮೈತ್ರೇಯಿ ನೀನರಿವುದು ॥ 7 ॥

ಮಂಗಲಮತಿ ಮೈತ್ರೇಯಿ, ಭ್ರಮೆಯಿಂದ ಜೀವನಾನೆಂದು ತಿಳಿದುದು ಪೂರ್ವಾಧ್ಯಾಸ. ಈ ಭ್ರಮೆ ಮಿಥ್ಯೆ ಎಂದು ಅಂತರಾತ್ಮ ಅವಸ್ಥೆಯಲ್ಲಿ ಗುರು ಬೋಧಿಸುವುದು ಉತ್ತರಾಧ್ಯಾಸ ಈ ಉಭಯ ಅಧ್ಯಾಸ (ಭ್ರಮೆ)ಗಳು ತನ್ನ ಪರಾತ್ಪರ ಸ್ವರೂಪ ಜ್ಞಾನದಿಂದ ಕೆಡಲು ತಾನು ಎಂದಿನಂತೆ ಪರಮಾತ್ಮನೇ ಇರುವನೆಂದು ಅರಿಯಬೇಕು.

ಗುರುಶಿಷ್ಯಬೋಧೆ ಜಾಗರಣದ ತೋರ್ಕೆ ಜಾ।
ಗರಣಾದಿ ಮಿಥ್ಯೆಯೆಂದೆನೆ ಮತ್ತೆ॥
ಗುರುಶಿಷ್ಯ ಬೋಧೆಗಳಿವು ನಿಜವಪ್ಪವೆ।
ಸರಸಿಜಾನನೆ ಕಲ್ಪಿತವೆ ನೋಡು ॥ 8 ॥

ಕಮಲ ಮುಖಿಯೇ, ಗುರು, ಶಿಷ್ಯರ ಬೋಧೆಗಳು ಜಾಗ್ರದವಸ್ಥೆಯ ತೋರಿಕೆಗಳು

1. [ಟಿಪ್ಪಣಿ :- ಶಿಷ್ಯನ ಅಜ್ಞಾನದ ಭ್ರಮೆಯು ಅದೇ ಮಟ್ಟದಲ್ಲಿರುವ ಗುರುವಿನ ಭ್ರಮಾತ್ಮಕ ಬೋಧೆಯಿಂದ ನಾಶವಾಗುವದು, ಎಂಬುದಕ್ಕೆ ದೃಷ್ಟಾಂತ ಹೊಟ್ಟೆ ತುಂಬ ಊಟ ಮಾಡಿ ನಿದ್ರಿಸುವವಗೆ ಒಂದು ಕನಸು ಬಿತ್ತು, ಕನಸಿನಲ್ಲಿ ಹಸಿವೆಯಿಂದ ಬಳಲುತ್ತಾನೆ. ಅವನ ಹೊಟ್ಟೆಯಲ್ಲಿ ಜಾಗ್ರದ ಆಹಾರವಿದ್ದರೂ ಅದರಿಂದವನ ಹಸಿವು ಹಿಂಗದು. ಕನಸಿನ ಆಹಾರ ಸೇವಿಸಿ, ಕನಸಿನ ಹಸಿವು ನೀಗಿ ಆನಂದ ಪಡುತ್ತಾನೆ.] 2. [ಟಿಪ್ಪಣಿ :– ಜಾಗರಣಾದಿ ಅವಸ್ಥೆಗಳು ಪರಸ್ಪರ ವ್ಯತಿರೇಕವಾಗಿ ಅಥವಾ ವ್ಯಭಿಚರಿಸಿ ಇರುವದರಿಂದ ಇವು ಮಿಥ್ಯೆ.] (ವಿಷಯಗಳು) ಜಾಗರಣವೇ ಮಿಥ್ಯೆ (ಟಿಪ್ಪಣಿ ಮುಂದಿನ ಪುಟ ನೋಡಿ) ಎಂದು ತಿಳಿದ ಬಳಿಕ ಗುರುಶಿಷ್ಯರ ಬೋಧೆಗಳಿವು ಸತ್ಯವಾಗಿರಬಲ್ಲವೇ ? ಇದೆಲ್ಲ ಕಲ್ಪಿತವೆಂದೇ ನಿಶ್ಚಯಿಸಬೇಕು.

ಕನಸಿನಂಗನೆಯ ಸಂಗತಿಯಿಂದೆ ತಥ್ಯವೆಂ-।
ದೆನೆ ವೀರ್ಯಪತನಾದಿಯಹುದಂತೆ॥
ವನಿತೆ ಕೇಳ್ ಗುರುಶಿಷ್ಯಬೋಧೆ ಕಲ್ಪಿತಮಾಗೆ।
ಜನಿಸುವ ನಿಜಮುಕ್ತಿಯದು ಸತ್ಯ ॥ 9 ॥

ವನಿತೆ ಮೈತ್ರೇಯಿ ಕೇಳು; ಕನಸಿನ ಸ್ತ್ರೀಸಂಗವು ಮಿಥ್ಯೆ ಯಾದರೂ (ಪುರುಷನ) ವೀರ್ಯ ಪತನವು ಸತ್ಯವಾಗಿರುವಂತೆ, ಗುರು ಶಿಷ್ಯರ ಬೋಧೆ ಕಲ್ಪಿತವಾದರೂ ಗುರು ಬೋಧೆಯಿಂದ ಫಲಿಸುವ ನಿಜಮುಕ್ತಿಸತ್ಯವಾಗಿರುವದು.

– ಇತಿ ಸತ್ಯಾನುಭವ ನಿರೂಪಣೆ –

## 17ನೇ ಸೂತ್ರ

ಮಾತೃಮಾನಾದಿತ್ರಿಪುಟಿದೋರದಾಗಿಯ ।
ದ್ವೈತಕ್ಕೆ ಪವಣವಿಲ್ಲಿದುಸಿದ್ಧ ॥

ಮಾತೃ, ಮಾನ, ಮೇಯ ಅಂದರೆ ಅರಿವುದು, ಅರಿವಕರಣಗಳು ಮತ್ತು ಅರಿಸಿಕೊಂಬ ವಿಷಯ ಈ ಮೂರರ ಗುಂಪಿಗೆ ತ್ರಿಪುಟಿಯೆನ್ನುವರು. ಇವು ಏಕಕಾಲಕ್ಕೆ ಕಾರ್ಯವೆಸಗುವವು. ಈ ಮೂರರಲ್ಲಿ ಒಂದು ಇಲ್ಲದಿರಲು ತ್ರಿಪುಟಿ ಕಾರ್ಯ ಮಾಡದು. ದ್ವೈತರೂಪ ಪ್ರಪಂಚದಲ್ಲಿ ತ್ರಿಪುಟಿಯ ಕಾರ್ಯವಿದೆ. ಆದರೆ ಅದ್ವೈತ ರೂಪ ಆತ್ಮಾನುಭವಕ್ಕೆ ಈ ತ್ರಿಪುಟಿಗಳ ಅಥವಾ (ಮುಂದೆ ಹೇಳುವ) ಪ್ರತ್ಯಕ್ಷಾದಿ ಪ್ರಮಾಣಗಳ ಹಂಗು ಬೇಡ.

ಭೇದ ಜನ್ಯಂಗಳೆನಿಸುವ ಪ್ರತ್ಯಕ್ಷಾದಿ।
ಯಾದ ಪವಣವೆಂಬಿವೆಲ್ಲವು॥
ಭೇದಬೋಧಕ್ಕೆ ಪವಣವೈಸೆ ನಿಜವನು।
ಬೋಧಿಸುವಲ್ಲಿ ಪವಣವಲ್ಲ॥ 1 ॥

ಭೇದವುಳ್ಳ ಬುದ್ಧಿಯಲ್ಲಿ ಪ್ರತ್ಯಕ್ಷ ಆದಿ ಆರು ಪ್ರಮಾಣ (ಪವಣ)ಗಳು ಜನಿಸುವವು. ಇವು ಭೇದ ರೂಪಿನ ವ್ಯವಹಾರಕ್ಕೆ ಮಾತ್ರ ಉಪಯೋಗವಲ್ಲದೆ, ಅಭೇದ (ಅದ್ವಯ) ವಾದ ನಿಜತತ್ತ್ವ ಬೋಧನೆಗೆ ಪ್ರಮಾಣವಾಗಲರಿಯವು.

[ ಟಿಪ್ಪಣಿ:– ಮಿಥ್ಯ ಅರಿತರೆ ಸತ್ಯಸಿದ್ಧಿ ಇದರ ವಿವರಣೆಯನ್ನು ವಿವೇಕ ಚಿಂತಾಮಣಿ, 1ನೇ ಪ್ರಕರಣ ಪುಟ 150 ನೋಡಿರಿ. ಇಲ್ಲಿ ಹೇಳಿದ 'ಪುಸಿಯ ಸಾಧನೆಯಿಂದ ದಿಟಮುಂಟು' ಎಂಬುದಕ್ಕೆ ಕೆಳಗೆ ಹೇಳಿದ ಎರಡು ದೃಷ್ಟಾಂತಗಳಲ್ಲಿ 1ನೆಯ ದು ಪ್ರತ್ಯೇಕವಾಗಿ ಸ್ತ್ರೀಯರಿಗಾಗಿ ಇದೆ. (1) ಕನ್ನಡಿಯಲ್ಲಿ ತೋರುವ ಪ್ರತಿಬಿಂಬ ಪುಸಿಯಾದರೂ ನಿಜ ಮುಖದ ಸೌಂದರ್ಯ ಪ್ರಕಟಿಸಲು ಸಾಧನವಾಗಿದೆ. (2) ಮುಂದೆ ಪದ್ಯದಲ್ಲಿ ಹೇಳಿದ ದೃಷ್ಟಾಂತ ಪುರುಷರಿಗೆ ಮಾತ್ರ ಸಂಬಂಧವಿದೆ. 1ನೇ ದೃಷ್ಟಾಂತವು ಸ್ತ್ರೀಪುರುಷ ಈರ್ವರಿಗೂ ಅನ್ವಯಿಸುವದು. ]

ತನಗೆ ಪ್ರತ್ಯಕ್ಷಾನುಮಾನೋಪಮಾನ ಸಂ -
ಜನಿಸುವಭಾವವರ್ಥಾಪತ್ತಿ ॥
ಘನ ಶಬ್ದವೆಂಬಿವು ತಾವಾರು ಪವಣಂಗ-
ಳೆನಿಪವನ್ಯವನು ಸಾಧಿಸುವಲ್ಲಿ ॥ 2 ॥
ಇವು ನೇತ್ರ ಧೂಮಸಾದೃಶ್ಯ ನಿಷೇಧಾವ-
ಯವಪುಷ್ಟಿಯಾಪ್ತೋಕ್ತಿಗಳು ಗೂಡಿ ॥
ಹವಣಿಸಿ ಘಟ ವಹ್ನಿಮರೆಯಭಾವ ರಾತ್ರಿ
ಸವಿವನ್ನ ಸ್ವರ್ಗಂಗಳಿರವಕ್ಕು ॥ 3 ॥

ಪ್ರಮೇಯವೆಂಬ ವಿಷಯ ಜ್ಞಾನಕ್ಕೆ ಕಾರಣವಾದ ಮತ್ತು ಲೌಕಿಕ ವ್ಯಾಪಾರಗಳಿಗೆ ಆಶ್ರಯವಾಗಿ ಅಸಾಧಾರಣ ಹೇತುವುಳ್ಳ ಪ್ರಮಾಣಗಳು ಆರು, ಇವು ಕಲ್ಪಿತ ಪುರುಷನಿಗೆ ಸಾಧನೆಗಳಾಗಿವೆ. ಅವು ಯಾವವೆಂದರೆ ಪ್ರತ್ಯಕ್ಷ, ಅನುಮಾನ, ಉಪಮಾನ, ಅಭಾವ (ಅಥವಾ ಅನುಪಲಬ್ಧಿ), ಅರ್ಥಾಪತ್ತಿ, ಶಬ್ದ (ಅಥವಾ ಆಗಮ ಪ್ರಮಾಣ). ಈ ಪ್ರಮಾಣಗಳು ತನಗೆ ಅನ್ಯವಾದ (ದೈಹಿಕ ಮತ್ತು ಲೌಕಿಕ) ವಿಷಯಗಳನ್ನು ಸಾಧಿಸುವಾಗ ಉಪಯುಕ್ತವಾಗಿವೆ. (ಇವುಗಳ ಕರಣ (ಸಾಧನ) ಗಳನ್ನು ದೃಷ್ಟಾಂತ ಮುಖದಿಂದ ಮುಂದೆ ಕ್ರಮವಾಗಿ ಹೇಳುವರು.)

ಘಟಪಟಗಳ ವಿಷಯಜ್ಞಾನಕ್ಕೆ ನೇತ್ರವು ಮುಖ್ಯಕರಣ. ಹೊಗೆಯನ್ನು ಕಂಡ ಜಾಗೆಯಲ್ಲಿ ಬೆಂಕಿಯಿದೆ, ಎಂದು ಊಹಿಸುವದು ಅನುಮಾನ ಪ್ರಮಾಣಕ್ಕೆ ದೃಷ್ಟಾಂತವು. ಕಾಡಾಕಳು ಹೇಗಿರುವದು ಎಂಬುದನು ಅರಿಯದವನಿಗೆ ಆಕಳಂತೆ ಆದಕ್ಕೆ ಗಂಗೆ ದೊಗಲು ಎರಡು ಕೋಡುಗಳು, ನಾಲ್ಕು ಮೊಲೆಗಳು ಮೊದಲಾದ ಲಕ್ಷಣಗಳನ್ನು ಹೇಳುವರು. ಆತನು ಅಡವಿಗೆ ಹೋಗಿ, ಮೇಲೆ ಹೇಳಿದ ಲಕ್ಷಣಗಳಿಗೆ ಸದೃಶವಾದ ಆಕಳನ್ನು ಗುರ್ತಿಸುವನು. ಈ ತೆರನಾದ ಜ್ಞಾನಸಿದ್ಧಿಗೆ ಉಪಮಾನ ಪ್ರಮಾಣವೆನ್ನುವರು. ಒಂದು ಸ್ಥಳದಲ್ಲಿರುವ ಕೊಡವನ್ನು ನೀರುತರಲು ಒಯ್ದಿರಲು ಅದಿರುವ ಸ್ಥಳದಲ್ಲಿ ಕೊಡದ ಅಭಾವವನ್ನು ನೋಡಿ, ಆ ಕೊಡವನ್ನು ನೀರು ತರಲಿಕ್ಕೆ ಒಯ್ದಿರುವರೆಂದು ನಿಶ್ಚಯಿಸುವರು. ಇದಕ್ಕೆ ಅಭಾವ ಅಥವಾ ನಿಷೇಧ ಪ್ರಮಾಣವೆನ್ನುವರು. ಕೊಡವಿರುವ ಜಾಗೆಯಲ್ಲಿ ಅದರ ಅಭಾವ ಕಂಡು, ಕೊಡವು ಬೇರೆ ದೇಶದಲ್ಲಿದೆ ಎಂದು ತಿಳಿಯುವದಕ್ಕೆ 'ಅನುಪಲಬ್ಧಿ ಪ್ರಮಾಣ' ಎಂದು ಬೇರೆ ಹೆಸರು ಇರುವದು. ದೇವದತ್ತನ ಅವಯವಗಳನ್ನು ನೋಡಿದರೆ ದಷ್ಟಪುಷ್ಟವಾಗಿದ್ದಾನೆ. ಆದರೆ ಅವನು ಹಗಲು ಉಣ್ಣುವದನ್ನು ಮತ್ತು ಮಲ ವಿಸರ್ಜನ ಮಾಡುವದನ್ನು ಯಾರೂ ನೋಡಿಲ್ಲ. ಹೀಗೆ ಸಂಶಯ ಬಂದರೆ, ಆ ದೇವದತ್ತನು ಹಗಲು ಉಣ್ಣದಿದ್ದರೆ ರಾತ್ರಿ ಉಣ್ಣುವನು ಮತ್ತು ಮಲವಿಸರ್ಜನ ಸ್ನಾನಗೃಹದಲ್ಲಿ ಮಾಡಿ, ಅದನ್ನು ನೀರು ಹಾಕಿ ಹೊರದೂಡುವನು.

ಹೀಗೆ ನಿರ್ಣಯಿಸುವದಕ್ಕೆ ಅರ್ಥಾಪತ್ತಿಪ್ರಮಾಣವೆನ್ನುವರು. ಬಳಿಕ ಕೊನೆಯ ಆರನೆಯ ಪ್ರಮಾಣಕ್ಕೆ ದೃಷ್ಟಾಂತವೆಂದರೆ ಕೈಲಾಸವನ್ನು ಮತ್ತು ಕೈಲಾಸವಾಸಿ ಈಶ್ವರನನ್ನು ಪ್ರತ್ಯಕ್ಷವಾಗಿ ಯಾರೂ ನೋಡಿಲ್ಲ, ಆದರೆ ಜಗತ್ತಿನ ಜೀವಕೋಟಿಗೆ ಆಪ್ತನಾಗಿ, ಸತ್ಪುರುಷರಿಗೆ ಸದ್ಭಕ್ತರಿಗೆ ಏಕೈಕಬಾಂಧವನಾಗಿ ಈಶನು ಕೈಲಾಸ ಮಂದಿರದಲ್ಲಿದ್ದಾನೆ, ಎಂದು ನಂಬಿ ನಿಶ್ಚಯಿಸುವದೇ ಶಾಬ್ದಿ ಅಥವಾ ಆಗಮಪ್ರಮಾಣವೆನಿಸುವದು. (ಮುಂಬರುವ ಎರಡು ಪದ್ಯಗಳಲ್ಲಿ ತ್ರಿಪುಟಿ ಲಕ್ಷಣ ಹೇಳುವರು).

ಅರಿಯಲ್ಪಡುವದೆ ನೀನರಿ ಸುಪ್ರಮೇಯಾಖ್ಯ।
ವರಿವಾತನಾ ಪ್ರಮಾತೃವೆನಿಕ್ಕು॥
ಅರಿಯೆ ತತ್ಸಾಧನವದು ಕೇಳ್ಪ್ರಮಾಣವೆಂ-।
ದರಿವುದು ತ್ರಿಪುಟಿಯ ನಿಜವನು ॥ 4 ॥

ಮಾನವೆ ಸತ್ವವಾ ಮೇಯವೆ ತಮವದು।
ಮಾನಿನಿ ಸತ್ವರಜಂಗಳು॥
ತಾನೊಂದಿನಿಲೆ ಮಾತೃವೆನಿಪುದೀ ಗುಣಗಳೊ-
ಳ್ನೀನರಿಯಾತ್ರಿಪುಟಿಗಳನು ॥ 5 ॥

ನಿನ್ನಿಂದ ಅರಿಸಿಕೊಳ್ಳುವದು ಪ್ರಮೇಯ ಎಂಬ ವಿಷಯವು. ಇದು ತಮೋರೂಪು. ಅರಿವ ಜೀವಾತ್ಮನೆ ಪ್ರಮಾತೃ. ಇವನಲ್ಲಿ, ಸತ್ವರಜ ಗುಣವೆರಡರ ಬೆರಿಕೆ ಇರುವದು. ವಿಷಯಗಳನ್ನರಿವ ಸಾಧನಗಳಾದ ಕರಣಗಳು ಪ್ರಮಾಣವೆನಿಸುವವು. ಇವು ಸತ್ವಗುಣರೂಪು. ಇಂತು ತ್ರಿಪುಟಿಗಳನ್ನು ನೀನರಿವುದು.

ಪವಣವಾ ದ್ವೈತಕ್ಕೆ ಪವಣಲ್ಲದ್ವೈತಕ್ಕೆ।
ಪವಣುಂಟೆ ತ್ರಿಪುಟಿಗಳೆಡೆಯಾಟ ॥
ಸವನಿಸದದ್ವೈತ ಪದದಲ್ಲಿ ಮೈತ್ರೇಯಿ।
ತವೆ ವಿಚಾರಿಸಿ ನೋಡು ನಿಜವಿದು ॥ 6 ॥

ಮೈತ್ರೇಯಿ, ಭೇದ ರೂಪಿನ ದ್ವೈತಪ್ರಪಂಚ ಜ್ಞಾನಕ್ಕೆ ಪ್ರಮಾಣ (ಪವಣ)ಗಳ ಅವಶ್ಯಕತೆಯಿದೆ. ಮತಿಯ ಹಂಗಿಲ್ಲದೆಲ್ಲವನು ಎದಿರಿಟ್ಟು ಅರಿಯುವ ಅದ್ವಯ(ಪೂರ್ಣ) ಆತ್ಮನಿಗಾವ ಪ್ರಮಾಣಗಳು ಬೇಕಾಗುವದಿಲ್ಲ, ಯಾಕೆಂದರೆ ತ್ರಿಪುಟಿಗಳ ಎಡೆಯಾಟವಿಲ್ಲದ ಮತ್ತು ತ್ರಿಪುಟಿಗಳಿಗೆ ಆದಿಯಾಗಿ (ಆಶ್ರಯವಾಗಿ) ಇರುವ, ಅರಿವ ಅದ್ವಯ(ಅಖಂಡ) ನಿಜಾತ್ಮನೇ ಎಂದೆಂದು ನೀನಿರುವಿ. ಈ ಸತ್ಯಾನುಭವವನ್ನು ನೀನು

ನಿನ್ನೊಳಗೆ ಪರಿಭಾವಿಸಿನೋಡು. ಯಾಕೆಂದರೆ ನಿನ್ನ ಅರುವಿನ ಆನಂದದಿರುವು ಮಾತು ಮನಾದಿ ಕರಣಗಳಿಗೆ ವಿಷಯವಾಗದು.

ಜಡಜಗವಿದು ಪುಸಿಯಜಡಾತ್ಮ ಸತ್ಯನೆಂ-
ಬೆಡೆಯೊಳಬಾಧ್ಯಚಿನ್ಮಯನಾಗಿ ॥
ಕೆಡದಿರ್ಪತಾನೆ ಪವಣವೈಸೆ ತಿಳಿಯಲಾ-
ಜಡ ಜಗವಿದು ಮಿಥ್ಯೆ ಪವಣಲ್ಲ ॥ 7 ॥

ಜಡವಾದ (ಅಂದರೆ) ಅರುಹಿಸಿಕೊಳ್ಳುವ ಜಗವು ಪುಸಿಯಾಗಿ ತೋರುವದು ಅಂದರೆ ಅದಕ್ಕೆ ಸ್ವತಂತ್ರವಾದ ಇರುವಿಕೆಯಿಲ್ಲ. ಆದುದರಿಂದ ಅಜಡನಾದ (ಅರುಹಿಸಿಕೊಳ್ಳದೆ ಅರಿಯುವವನಾದ) ತ್ರಿಕಾಲದಲ್ಲಿ ಬಾಧೆಯೊಂದದೆ ಸತ್ಯವಾಗಿರುವ, ಚಿನ್ಮಯನಾಗಿ ಮತ್ತು ನಿತ್ಯವಾಗಿರುವ ನಿಜಾತ್ಮನಿಗೆ (ಪುಸಿ ಜಗವು) ಪ್ರಮಾಣವಲ್ಲ. ಚಿನ್ಮಯನಾಗಿ ಅಬಾಧಿತನಾಗಿರುವ ಆತ್ಮನು ತನಗೆ ತಾನೆ ಪ್ರಮಾಣನು, ಸ್ವಯಂ ಸಿದ್ಧನು, ಸ್ವಪ್ರಕಾಶನು (ತನ್ನ ಬೆಳಕಿನಲ್ಲಿ ತಾನಿರುವನು) ಆದ್ದರಿಂದ ಆತ್ಮಜ್ಞಾನಕ್ಕೆ ಪ್ರತ್ಯಕ್ಷ ಆದಿ ಪ್ರಮಾಣಗಳು ಬೇಕಾಗಿಲ್ಲ. (ಟಿ–1)

ಅನುಭವವದು ಪವಣೆನಿಸದು ಹಮ್ಮಿಲ್ಲ-।
ಧನು ಭವವಿಲ್ಲದ ಕತದಿಂದ ॥
ಘನಕುಚೆಯದನುಳಿದಲ್ಲದೆ ತತ್ತ್ವವೆಂ-।
ದೆನಿಸದು ಸತ್ಯವಿಂತಿದು ನಂಬು ॥ 8 ॥

ಪರಮಾನುಭವವೆಂಬ ಹಾಲು ತುಂಬಿದ ಸ್ತನಗಳುಳ್ಳ ಮೈತ್ರೇಯಿ, "ನಾನು ಪರತತ್ತ್ವದ ಅನುಭಾವಿ ಇರುವೆ" ನೆಂಬುದು (ನಿಜವಾದ) ಪ್ರಮಾಣವಲ್ಲ. (ಇದು ಅನುಭವ ಆಪಾದಕ ಆವರಣವೆನಿಸುವದು.) (ಟಿ–2+3) ಅಭಿಮಾನವಿಲ್ಲದೆ ಅನುಭವ ಸಂಜನಿಸದು. ಅಹಂಭಾವಪರ ಕಲ್ಪಿತಜೀವನ ಅಭಿಮಾನವು ಜಡ, ವ್ಯಕ್ತಿಗತ (ಪರಿಚ್ಛಿನ್ನ)ವಾಗಿದೆ ಮತ್ತು ಪರಿಣಾಮಗೊಳ್ಳುವದರಿಂದ (ದೇಶಕಾಲಾಧೀನವಾದುದರಿಂದ) ತನ್ನ ಅನುಭವದ ಅಭಿಮಾನವನ್ನು ಸಂಪೂರ್ಣ ತ್ಯಜಿಸದೆ, ನಿಜತತ್ತ್ವವು, ಇದ್ದಕ್ಕಿದ್ದ ಹಾಗೆ ದರ್ಶನವಾಗದು. (ನಿರಭಿಮಾನಾಂಚಿತವೆ ಮುಕ್ತಿ) ಯೆಂದು ನಿಜಗುಣರು

1. [ಟಿಪ್ಪಣಿ :–'ಅಹಮಸ್ಮಿ' ನಾನು ಇದ್ದೇನೆ, ಎಂಬ ಸ್ವಾನುಭವವು ಸರ್ವರಲ್ಲಿ ಶಾಶ್ವತವಾಗಿ, ಸಹಜವಾಗಿ ಸ್ವಯಂಸಿದ್ಧವಾಗಿ ಇದ್ದೇ ಇದೆ. 'ನಾನು ಇದ್ದೇನೆ, ನಾನು ಅರಿಯುತ್ತೇನೆ. ಇರುವದು ಆನಂದ ಒಂದೇ ಇದೆ. ಅದು, ಇದು, ಅವನು– ಅವಳು' ಎಂಬ ಬಗೆಗಳು ಪುಸಿದೋರಿಕೆ (ಮಿಥ್ಯೆ). ಆತ್ಮನಿದ್ದಾನೆ. ಸ್ವಯಂಸಿದ್ಧನಾಗಿ ನಿತ್ಯನಾಗಿದ್ದಾನೆ. ಇದು ಸಹಜಾನುಭವ . ಪ್ರತ್ಯಕ್ಷನು, ಅಪರೋಕ್ಷನು ಸ್ವಯಂ ಪ್ರಕಾಶನು ಎಂಬುದು ಆತ್ಮನಿಗೆ ಬೇರೊಂದು ಹೆಸರು.] 2. . [ಟಿಪ್ಪಣಿ:– ಈ ಆವರಣ ನಿವೃತ್ತಿಯಾಗಲು ಮಹಾವಾಕ್ಯದ ಅಸಿ ಪದದ ಲಕ್ಷ್ಯಾರ್ಥವು ಸ್ವಾನುಭವವಾಗುವದು.]
3. [ಟಿಪ್ಪಣಿ :– ಇದನ್ನು ನಿವೇದಿಸಿದವರು ದಿ. ಪರಮಹಂಸ ಶ್ರೀ ಶ್ರೀ ಸಿದ್ಧವೀರ ಸ್ವಾಮಿಗಳು, ಗೋಪನಕೊಪ್ಪ ವಿ. ಕೈವಲ್ಯ 1974]

ಅನುಭವಸಾರದಲ್ಲಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಅಭಿಮಾನಯುಕ್ತ ಅನುಭವವು ನಿರ್ದೋಷವಾದ ಪ್ರಮಾಣವಲ್ಲ. ಇದು ಸತ್ಯವೆಂದು ನಂಬು.

ಇದು ತಾನೆ ಸುಜ್ಞಾನ ನಿರ್ಯೋಗವಿದು ತಿಳಿ-।
ಯದವರ್ಗೆ ವರನಿರ್ಗುಣಾಭ್ಯಾಸ ॥
ಪದಗತಿಯನು ಪೇಳ್ವುದಲಸದೆ ಗುರುಗಳು
ಸದಮಳಬೋಧೆ ಸಂಜನಿಸಲ್ಕೆ ॥ 9 ॥

ಇಲ್ಲಿಯವರೆಗೆ ಬೋಧಿಸಿದ ವಿಷಯ 'ಸುಜ್ಞಾನ ನಿರ್ಯೋಗ' ಇದು ಸಹಜಯೋಗ. ಇದರಲ್ಲಿ ಕೂಡುವ– ಅಗಲುವ ಪ್ರಕ್ರಿಯಗಳಿಲ್ಲ. ಇದನ್ನು ತಿಳಿಯದವರಿಗೆ ನಿರ್ಗುಣ ಯೋಗಾಭ್ಯಾಸವನ್ನು (ಮುಂದೆ ಬರುವ 4ನೇ ಸಂಧಿಯಲ್ಲಿ ನೋಡಿರಿ) ಸದ್ಗುರುಗಳು ಆಲಸದೆ (ಬೇಜಾರುಪಡದೆ) ಇದನ್ನು ಸಾಧಕರಿಗೆ ಹೇಳಬೇಕು. ಇದರಿಂದ ಸದಮಳ (ಸದಾ ನಿರ್ಮಲವಾದ) ಜ್ಞಾನವು ಸಂಜನಿಸುವದು.

ಮುನಿವರನಿಂತು ಬೋಧಿಸೆ ಕೇಳ್ದು ನಲವಿಂದೆ।
ವನಿತೆ ಮೈತ್ರೇಯಿ ವಂದಿಸಿ ಮತ್ತೆ ॥
ವಿನಯದಿಂ ನಿಜಪತಿಗೆರಗಿ ನಿರ್ಗುಣಯೋಗ-
ದನುವನೊರೆವುದೆಂದಳೊಲವಿಂದೆ ॥ 10 ॥

ಇಂತು ಮುನಿವರ್ಯರಾದ ಯಾಜ್ಞವಲ್ಕ್ಯರು ಬೋಧಿಸಿದುದನ್ನು ವನಿತೆ ಮೈತ್ರೇಯಿ ಕೇಳಿ, ಸವೆಯದೊಲವಿಂದೆ ವಂದನೆಗಳನ್ನು ಪತಿಯ ಶ್ರೀಪಾದ ಕಮಲಗಳಿಗೆ ಅರ್ಪಿಸಿ ಮತ್ತೆ ಬಿನ್ನವಿಸಿಕೊಂಡಳು. ''ಮುನಿ ಶ್ರೇಷ್ಠನೇ, ನಿರ್ಗುಣ ಯೋಗದ ದಾರಿಗುರಿಗಳನು (ಅನುವನು) ಸಂಪ್ರೀತಿಯಿಂದ ನನಗೆ ತಿಳಿವಂತೆ ಬೋಧಿಸಿರಿ''.

ಮೂರು ಸಂಧಿಯೊಳಿಂತು ತೋರಿ ಸಾಧ್ಯವನಿನ್ನು।
ಬೇರೆ ಸಾಧನದ ಲಕ್ಷಣವನು ॥
ತೋರುವೆನುತ್ತರವಾಗಿ ತೋರುವ ಸಂಧಿ।
ಮೂರರೊಳಚ್ಚರಿ ಪಡುವಂತೆ ॥ 11 ॥

(ಇಲ್ಲಿಯವರೆಗೆ) ಬೋಧಿಸಿದ ಮೂರು ಸಂಧಿಗಳಲ್ಲಿ (ಮುಮುಕ್ಷುಗಳಿಗೆ) ನಿಜಗುಣಾರ್ಯರು ಸಹಜವಾದ ಸಾಧ್ಯವನ್ನು ನಿರೂಪಿಸಿದರು. ಇನ್ನು ಮೇಲೆ ಮುಂದೆ ಬರುವ (4, 5, 6) ಮೂರು ಸಂಧಿಗಳಲ್ಲಿ (ಮುಕ್ತಿಗೆ ಅವಶ್ಯವಿರುವ) ಬೇರೆ ಬೇರೆ ಸಾಧನೆಗಳ ಲಕ್ಷಣಗಳನ್ನು (ಸಾಧಕರು) ಅಚ್ಚರಿಪಡುವ ಹಾಗೆ, ಅನುಭವ ಗೋಚರವಾಗುವಂತೆ ತಿಳಿಸುವರು.

ಇದು ನಿಜಗುಣಯೋಗಿ ಮುದದಿಂದ ತಿಳಿಯ ಪೇ-
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥
ಒದವಿದ ಸಂವಾದದೊಳು ಮೂರನೆಯ ಸಂಧಿ
ಸದಮಳ ಪರಮಾನುಭವಬಂಧಿ ॥ 12 ॥

ಇದು ನಿಜಗುಣ ಯೋಗಿಗಳು ಸಂತೋಷದಿಂದ ತಿಳಿಸಿ ಹೇಳಿದ, ಯಾಜ್ಞವಲ್ಕ್ಯ–ಮೈತ್ರೇಯಿ ಇಬ್ಬರಲ್ಲಿ ಸಂಜನಿತವಾದ ಸಂವಾದವಾಗಿದೆ. ಈಗ ಇದರಲ್ಲಿ 'ಭ್ರಾಂತಿನಿರಾಕರಣ' ಎಂಬ ಮೂರನೆಯ ಸಂಧಿ ಸಮಾಪ್ತವಾಯಿತು. ಮುಮುಕ್ಷುಗಳ ಶುದ್ಧಾಂತಃಕರಣದಲ್ಲಿ ಸದಮಳವಾದ ಪರಮಾನುಭವವು ಕರಿಗೊಳ್ಳುವಂತೆ ಈ ಸಂಧಿಯು ಬಂಧಿಸುವದು. [ ಟಿಪ್ಪಣಿ:– ನಿತ್ಯ ಶುದ್ಧ ಬುದ್ಧ ಮುಕ್ತಸ್ವಭಾವವುಳ್ಳ ಪರಮಾತ್ಮನು ಸಾಧಕನಿಗೆ ಅಪರೋಕ್ಷವಾಗುವಂತೆ ಬೋಧಿಸುವ ಮತ್ತು ಶ್ರುತಿವೇದ ಸಮ್ಮತವಾದ ವಾಕ್ಯಗಳನ್ನೊಳಗೊಂಡ ಗ್ರಂಥವಿದು ಪರಮಾನುಭವ ಬೋಧೆ. ]

– ಇತಿ ಆತ್ಮಂಗೆ ಪ್ರಮಾಣಾತೀತ್ವ ನಿರೂಪಣೆ –

ಸಂಧಿ ಮೂರು ಸೂತ್ರ 17 ಕ್ಕೆ ಸಂಪೂರ್ಣ

ಮಂಗಳಮಸ್ತು

****

ಶ್ರೀಗುರು ಶಂಭುಲಿಂಗಾಯ ನಮಃ

ಪರಮಾನುಭವ ಬೋಧೆ

## 4ನೇ ಸಂಧಿ

# ನಿರ್ಗುಣ ಯೋಗ

### 1ನೇ ಸೂತ್ರ

ಗುರುವಚನವೆ ಶ್ರುತಿ ಗುರುವಚನವೆಸ್ಮೃತಿ ।
ಗುರುವಚನವೆ ಸರ್ವವಿನಯಳೆ ॥

ಸಾಧನ ಚತುಷ್ಟಯ ಸಂಪನ್ನನಾದ ಸಾಧಕನು ಸರ್ವಾರ್ಪಣ ಭಾವದಿಂದ ಶರಣು ಬಂದಾಗ, ಶ್ರೋತ್ರಿಯ ಬ್ರಹ್ಮನಿಷ್ಠನಾದ ಸದ್ಗುರು ಅವನಿಗೆ ಉಪದೇಶಿಸಿದ ವಾಕ್ಯಗಳೆ (ಟಿ–1) ಶ್ರುತಿಗಳೆನಿಸಿವೆ. ಈ ಶ್ರುತಿಗಳ ಅರ್ಥವನ್ನೆ ಋಷಿಗಳು ತಾವು ತಿಳಿದು ಅನುಭವಿಸಿ ಹೇಳಿದ ದಿವ್ಯ ವಚನಗಳೆ (ಟಿ–2) ಸ್ಮೃತಿಗಳೆಂದು ಪ್ರಸಿದ್ಧಿಹೊಂದಿವೆ. ಈ ಗುರುವಾಕ್ಯಗಳೆ ಪ್ರವಾಹರೂಪದಿಂದ ಹರಿದು ಸರ್ವಪರಮಾರ್ಥಸಾಹಿತ್ಯವಾಗಿದೆ. ಇದೆ ಪರಮುಕ್ತಿಗೆ ನೇರ ಸಾಧನವಿರುವದು.

ಶ್ರೀ ಮಹಾದೇವಂಗೆ ಸೋಮಂಗೆ ಸುಖ ಪೂರ್ಣ ।
ಧಾಮಂಗೆ ಸತ್ಯ ಚಿದ್ರೂಪಂಗೆ ॥
ಕಾಮಿತಜನ ಕಲ್ಪಭೂಜಂಗೆ ಶಂಭುವಿಂ ।
ಗಾಮೋದದಿಂದೆ ವಂದಿಸುವೆನು ॥ 1 ॥

ಶ್ರೀ ಮಹಾದೇವನೂ, ಉಮಾಪತಿಯೂ, ಪೂರ್ಣಾನಂದ ಸ್ವರೂಪನೂ ಸತ್ಯಚಿದ್ರೂಪನೂ, ತನ್ನನ್ನು ನಂಬಿದ ಜನರಿಗೆ ಕಲ್ಪವೃಕ್ಷದಂತೆ ಇರುವವನೂ, ಆದ ಶಂಭುಲಿಂಗನಿಗೆ ಆನಂದದಿಂದ ವಂದಿಸುವೆನು.

ಶ್ರೀ ಪರಾನಂದೈಕನಿಧಿ ಯಾಜ್ಞವಲ್ಕ್ಯದ ।
ಯಾಪೂರ್ಣನಧಿಗತ ಪರಮಾತ್ಮ ॥
ಕಾಪಟ್ಯದೂರ ನೂರ್ಜಿತ ನಾಗಮೋದಯಾ ।
ಲಾಪನುನ್ನತ ಚಿತ್ಪ್ರದೀಪನು ॥ 2 ॥

ಯೋಗೀಂದ್ರ ನಚಲ ನಧಿಕ ನುರುತರನನು ।
ರಾಗದೆ ನಿಜಧರ್ಮ ಪತ್ನಿಗೆ ॥
ಶ್ರೀಗುಣಯುಕ್ತ ಮೈತ್ರೇಯಿಗೆ ನಿರ್ಗುಣ ।
ಯೋಗಾಭ್ಯಾಸವನೆ ಪೇಳಿದ ನಿಂತು ॥ 3 ॥

1. [ ಟಿಪ್ಪಣಿ :– ಪರಾವಾಣಿ. ಅಪೌರುಷೇಯವಾದ ಋಕ್, ಯಜುಸ್, ಸಾಮ ಮತ್ತುಅಥರ್ವಣ ಈ ನಾಲ್ಕು ವೇದಗಳೇ ಶ್ರುತಿಗಳಾದವು.] 2. [ ಟಿಪ್ಪಣಿ :– ಶ್ರುತಿಯನೆ ಸ್ಮರಿಸಿ ಪೇಳ್ದ ಅತಿಶಯದ ಋಷಿವಾಕ್ಯಗಳೆ ಸ್ಮೃತಿಗಳು ವೇದದ ಉಪಾಂಗಗಳು. ಮುಮುಕ್ಷುಗಳಿಗೆ ಇವೇ ಪ್ರಮಾಣಗಳು. ]

ಸ್ವರೂಪನಾಂದವೆ ನಿಜವಾಗಿವುಳ್ಳವನೂ ದಯಾರಸಪೂರ್ಣನೂ, ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡವನೂ, ಕಾಪಟ್ಯದೋಷರಹಿತನೂ, ಸರ್ವೋತ್ಕೃಷ್ಟನೂ, ಆಗಮೋಕ್ತವಿಷಯಗಳನ್ನು ಪ್ರತಿಪಾದಿಸುವವನೂ, ಪರಂಜ್ಯೋತಿ ಸ್ವರೂಪನೂ, ಯೋಗಿವರನೂ, ನಿಶ್ಚಯಜ್ಞಾನವುಳ್ಳವನೂ ಸರ್ವಶ್ರೇಷ್ಠನೂ ಆಗಿದ್ದನು ಯಾಜ್ಞವಲ್ಕ್ಯ ಮಹರ್ಷಿಯು. ಇಂತಹ ಯಾಜ್ಞವಲ್ಕ್ಯರು ವಿವೇಕ ವೈರಾಗ್ಯಾದಿ ಸರ್ವಸದ್ಗುಣ ಸಂಪನ್ನಳಾದ ಹಾಗೂ ತಮ್ಮ ಧರ್ಮಪತ್ನಿಯಾದ ಮೈತ್ರಾದೇವಿಗೆ ಪೂರ್ಣಾನುರಾಗದಿಂದ ನಿರ್ಗುಣ ಯೋಗಾಭ್ಯಾಸದ ಅಂದರೆ ಸತ್ವಾದಿ ಗುಣರಹಿತವಾದ ಆತ್ಮಜ್ಞಾನವನ್ನು ಮುಂದೆ ಹೇಳುವಂತೆ ಉಪದೇಶಿಸಲು ಉದ್ಯುಕ್ತರಾದರು.

ಗುರುವಚನವೆ ಶ್ರುತಿ ಪರಮಾರ್ಥವಿದು ತಾನು।
ಗುರುವಿಂದೆ ವೇದ್ಯವೆಲ್ಲವು ನೋಡೆ॥
ಗುರುವಾಕ್ಯವಿಲ್ಲದೆ ತ್ರಿಜಗದೊಳೇನೊಂದು।
ದೊರಕೊಳ್ಳಲರಿಯದೆಂತಾರ್ಗೆಯು ॥ 4 ॥

ಗುರುವಿನ ತಪೋವಾಣಿಯೇ ವೇದವು (ಶೃತಿ) ಇದೇ ಯಥಾರ್ಥವು ಅಂದರೆ ಪರಮಾರ್ಥವು. ಎಲ್ಲವೂ ಗುರುವಿನಿಂದ ಮಾತ್ರ ಅನುಭವಗೋಚರವಾಗುವದು. ವಿಚಾರಿಸಲಾಗಿ ಗುರುವಾಕ್ಯ (ಗುರೂಪದೇಶ)ವಿಲ್ಲದೆ ಎಂಥ ಮೇಧಾವಿಗಳಿಗಾದರೂ ಮೂರು ಲೋಕಗಳಲ್ಲಿ ಪರಮ ಪುರುಷಾರ್ಥವು ದೊರೆಯದು.

ಗುರುವಾಕ್ಯವಿಲ್ಲದೆ ಪರತತ್ತ್ವವೆಂತಪ್ಪ।
ಪುರುಷರ್ಗೆ ಸಿದ್ಧಿಸದದರಿಂದೆ॥
ಗುರುಪಯೋಧರೆ ಕೇಳು ಪರಿಭಾವಿಸಿದೊಡಿಂತು।
ಗುರುವಚನವೆ ವೇದವೆನಿಪುದು ॥ 5 ॥

ಗುರೂಪದೇಶವಿಲ್ಲದೆ ಆತ್ಮತತ್ತ್ವವು (ಟಿ) ಎಂಥ ಪ್ರಜ್ಞಾವಂತ ಜನರಿಗೂ ಸಿದ್ಧಿಸಲಾರದು. ಭಾರವಾದ ಸ್ತನಗಳುಳ್ಳ ಮೈತ್ರೇಯಿ ಕೇಳು (ಯಾರೇ ಯಾವದೇ ಬಗೆಯಿಂದ) ವಿಚಾರಿಸಿದರೂ, ಗುರುವಚನವೇ ವೇದವೆನಿಸುವದು.

ಗುರುವಚನವೆ ಶ್ರುತಿ ಗುರುವಚನವೆ ಸ್ಮೃತಿ।
ಗುರುವಚನವೆ ಪುರಾಣಾಗಮ॥
ಗುರುವಚನವೆ ಸಕಲಾರ್ಥ ಸಿದ್ಧಿಗಳಾಗು।
ಗುರುವಚನವೆ ಮೋಕ್ಷಗತಿ ಹೇತು ॥ 6 ॥

ಗುರುವಚನವೆ ಶ್ರುತಿ, ಸ್ಮೃತಿ, ಪುರಾಣಗಮವೆನಿಸಿಕೊಂಡಿದೆ. ಅದೇ ಸಕಲ ಪುರುಷಾರ್ಥ ಪಡೆದುಕೊಳ್ಳಲು ಸಾಧನವಾಗಿದೆ. ಗುರುವಚನವೆ ಸರ್ವದುಃಖ ನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿರೂಪ ಮೋಕ್ಷ ಪ್ರಾಪ್ತಿಗೆ ಕಾರಣವಾಗಿರುವದು.

[ ಟಿಪ್ಪಣಿ :– ಆತ್ಮತತ್ವದ ಇರವು, ಅರಿವು, ಆನಂದರೂಪವು. ]

ಆದರಿಂದೆ ವೇದ ಪುರಾಣಾಗಮ ಸ್ಮೃತಿ।
ಪದಸಿದ್ಧಿಗಳ ಬೇರೆಯರಸದೆ॥
ಸುದತಿ ಸದ್ಗುರು ವಾಕ್ಯವನೆ ನಂಬು ನೀನತಿ।
ಮುದದಿಂದೆ ಬಹುಬುದ್ಧಿಗಳನಿಕ್ಕಿ ॥ 7 ॥

ಈ ಕಾರಣದಿಂದ ವೇದಾಗಮಾದಿಗಳಲ್ಲಿ ಹೇಳಿದ ಪದವಿಗಳನ್ನಾಗಲಿ ಸಿದ್ಧಿಗಳನ್ನಾಗಲಿ ಅಪೇಕ್ಷಿಸಿ ಹುಡುಕಿಕೊಂಡು ಹೋಗದೆ ನಿರ್ಮಲ ವೃತ್ತಿಯುಳ್ಳ (ಸುದತಿ) ಮೈತ್ರೇಯಿ ನೀನು ನಿನ್ನ ಜಡವಾದ ಅನೇಕ ತರಹದ ಲೌಕಿಕ ಬುದ್ಧಿಯನ್ನು (ಟಿ) ತೊರೆದು, ಅತ್ಯಂತಾನಂದದಿಂದ ನಿನ್ನ ಜೀವನವನ್ನೇ ಪಾವನ ಮಾಡತಕ್ಕ ಶ್ರೀಗುರುವಿನ ಉಪದೇಶವನ್ನೇ ಪೂರ್ಣವಾಗಿ ನಂಬು.

ಅನುಭವಗೋಚರವೆನಿಪಂತೆ ಪರತತ್ತ್ವ।
ವನು ತಾನಿದೆಂದು ಪೇಳ್ವುದರಿಂದ॥
ಇನಿಯಳೆ ವರಗುರು ವಚನವೆ ಶಾಬ್ದವೆಂ।
ದೆನಿಪ ಪ್ರಮಾಣವಪ್ಪುದು ನೋಡಾ ॥ 8 ॥

ಶ್ರೀ ಗುರು ನಿಜತತ್ತ್ವ ಅಂದರೆ ನೀನು ಪರಮಾತ್ಮನಿರುವಿ ಎಂಬ ತತ್ತ್ವವನ್ನು ಅಪರೋಕ್ಷವಾಗಿ ಸ್ವಾನುಬವಗೋಚರವಾಗುವಂತೆ ಹೇಳುವನು. ಪ್ರಿಯಳೆ, ಇವನೆ ವಿಹಿತ ಗುರು. ಇವನ ವಚನವೆ ಶಾಬ್ದಿ(ಆಗಮ) ಪ್ರಮಾಣವೆನಿಸಿಕೊಳ್ಳುವದೆಂದು ನೀನು ತಿಳಿ.

ಮನನಕ್ಕೆ ಬೀಜವೆಂದೆನಿಪಂತೆ ಯುಕ್ತಿಗ।
ಳನು ಗೋಚರಿಸುವ ಕಾರಣದಿಂದೆ॥
ವನಜಸನ್ನಿಭವಕ್ತ್ರೆ ತಿಳಿಯೆ ಸದ್ಗುರುವಾಕ್ಯ।
ವನುಮಾನವೆಂದೆಂಬ ಪವಣಕ್ಕು ॥ 9 ॥

ಶ್ರವಣ ಮಾಡಿದ ವಿಷಯವನ್ನು ಯುಕ್ತಿಪೂರ್ವಕವಾಗಿ ಚಿಂತನ ಮಾಡುವದಕ್ಕೆ ಮನನವೆನ್ನುವರು. ಇಂತಹ ಯುಕ್ತಿಗಳನ್ನು ಸದ್ಗುರು ವಾಕ್ಯವೆ ವಿವೇಚಿಸಿ ನೋಡಲು ತಿಳಿಸಿಕೊಡುವದರಿಂದ, ಹೇ ಕಮಲ ಸದೃಶ ಮುಖವುಳ್ಳ ಮೈತ್ರೇಯಿ ಅದು ಅನುಮಾನ ಪ್ರಮಾಣವೆಂದು ಹೇಳಿಸಿಕೊಳ್ಳುವದು. ಅದು ಯುಕ್ತಿ ದೃಷ್ಟಾಂತಗಳನ್ನು ಒದಗಿಸಿ ಕೊಡುವದರಿಂದ ಆತ್ಮಚಿಂತನೆಗೆ ಸಹಾಯಕವಾಗುವದು.

ಅನುಮಾನದಿರವಿನ ಚಿಂತನವೆಂಬ।
ಮನನವೆ ತನ್ನನುಭವವದು ॥
ಜನಿಪುದಕ್ಕಾದಿ ಕಾರಣವಾದ ಗುರು ವಾಕ್ಯ।
ವನುಭೂತಿಯೆಂದೆಂಬ ಪವಣಕ್ಕು ॥ 10 ॥

[ ಟಿಪ್ಪಣಿ :– ಅನಾತ್ಮವಿಮುಖತ್ವಕ್ಕೆ ಹೇತುವಾದ ಬುದ್ಧಿಯಿಂದ ಮಾತ್ರ ಆತ್ಮನು ನೋಡಲ್ಪಡುತ್ತಾನೆ.(ಕಠ.ಉ.ಪ.) ]

ಮೊದಲು ಹೇಳಿದ ಅನುಮಾನ ಪ್ರಮಾಣದಿಂದ ಹಾಗೂ ಯುಕ್ತಿ ದೃಷ್ಟಾಂತಗಳೆಂಬ ಮನನ ಸಾಮಗ್ರಿಯಿಂದ ನಿಜತತ್ತ್ವ ಸಾಧಕನಿಗೆ ಅಪರೋಕ್ಷವಾಗುವಂತೆ ಅಂದರೆ 'ನೀನೇ ಪರಮಾತ್ಮನಿರುವಿ' ಎಂಬ ಸಿದ್ಧಾಂತವು ಸ್ವಾನುಭವಕ್ಕೆ ಗೋಚರವಾಗುವಂತೆ ಶ್ರೀ ಸದ್ಗುರು ಬೋಧಿಸುವನು. ಆದ್ದರಿಂದ ಆತ್ಮಾನುಭವ ಪ್ರಾಪ್ತಿಗೆ ಕಾರಣವಾದ ಗುರು ವಾಕ್ಯವೇ ಅನುಭೂತಿ ಪ್ರಮಾಣವಾಗಿದೆ.

ಅವಗತಿಕ್ರಮವಿದಾ ಶ್ರವಣವಾ ಮನನಮೊ।
ಪ್ಪುವ ನಿದಿಧ್ಯಾಸನವೆನಿಸುವ॥
ಇವು ತಾವನುಕ್ರಮದೊಳು ಶಬ್ದವನುಮಾನ।
ವನುಭೂತಿಯಹುದೆಂದು ತಿಳಿವುದು ॥ 11 ॥

ಶ್ರೀ ಗುರುವಾಕ್ಯದ ಶ್ರವಣ [ ಟಿಪ್ಪಣಿ :– ಆತ್ಮಾವಾರೇ ಶ್ರೋತವ್ಯಃ। ನೀನು ನಿತ್ಯ ಚಿದಾನಂದ ಪೂರ್ಣಪರಮಾತ್ಮನೇ ಇರುವಿ, ಎಂದು ಗುರುಗಳು ಷಡ್ಲಿಂಗ ಪೂರ್ವಕವಾಗಿ ಶ್ರುತಿ ತಾತ್ಪರ್ಯಬೋಧಿಸುವದರಿಂದ ಗುರುವಚನವೆ ಶ್ರವಣಕ್ಕೆ ಅತ್ಯಂತ ಯೋಗ್ಯವು. ] ದೃಷ್ಟಾಂತ, ತರ್ಕ, ಯುಕ್ತಿಚಿಂತನಸಹಿತ ಅರ್ಥಚಿಂತನರೂಪ ಮನನ [ ಟಿಪ್ಪಣಿ :– "ಆತ್ಮಾ ಮಂತವ್ಯಃ" ಗುರುವಿನಿಂದ ಕೇಳಿದ ಆತ್ಮಬೋಧೆಯನ್ನೇ ಮನನ ಮಾಡತಕ್ಕದ್ದು ] ಹಾಗೂ ನಿದಿಧ್ಯಾಸನ ಅಂದರೆ ಅನಾತ್ಮಾಕಾರ ವೃತ್ತಿವ್ಯವಧಾನ ರಹಿತ ಆತ್ಮಾಕಾರ ವೃತ್ತಿಸ್ಥಿತಿ, ಇವುಗಳೇ ಕ್ರಮವಾಗಿ ಶಾಬ್ದಿ ಅನುಮಾನ ಹಾಗೂ ಅನುಭೂತಿಯೆಂಬ ಪ್ರಮಾಣಗಳೆಂದು ಹೇಳಿಸಿಕೊಳ್ಳುವವು. ಇದೇ ಜ್ಞಾನಮಾರ್ಗದ ಕ್ರಮವಾಗಿದೆ ಎಂದು ತಿಳಿಯಬೇಕು.

– ಇತಿ ಗುರುವಾಕ್ಯಕ್ಕೆ ಸರ್ವಸಾಧನತ್ವ ನಿರೂಪಣೆ –

## 2ನೇ ಸೂತ್ರ

**ಶ್ರವಣಾದಿ ಶಬ್ದಾದಿಗಳನುಮೀ ಕರ್ಮಾದಿ ।**
**ತ್ರಿವಿಧಾವಗತಿಯೊಳರಿಯೆ ಮುಕ್ತಿ ॥**

ಗುರುವಾಕ್ಯ ಶ್ರವಣವೇ ಶಬ್ದ ಪ್ರಮಾಣವೆನಿಸಿ ಕರ್ಮಕಾಂಡಕ್ಕೆ ಬೀಜವು. ಮನನವೆ ಅನುಮಾನ ಪ್ರಮಾಣವೆನಿಸಿ ಉಪಾಸನಾಕಾಂಡಕ್ಕೆ ಬೀಜವು. ಗುರುವಾಕ್ಯವೆ ನಿದಿಧ್ಯಾಸನವೆನಿಸಿ ಅನುಭೂತಿ ಪ್ರಮಾಣವಾಗಿದೆ ಮತ್ತು ಇದೇ ಜ್ಞಾನಕಾಂಡಕ್ಕೆ ಕಾರಣವಾಗಿದೆ. ಈ ಮೂರರ ಗತಿಯನ್ನು ಮುಮುಕ್ಷು ತನ್ನೊಳು ಅರಿಯಲು ಮುಕ್ತಿ ಕರತಲಾಮಲಕವಾಗುವದು.

ಶ್ರವಣವಹುದು ಶಬ್ದವನುಮಾನವನುಭವ।
ವವಗತಿ ಕ್ರಮದಿಂದವನ್ಯಕ್ಕೆ॥
ಯುವತಿ ಕೇಳಧ್ಯಾತ್ಮವೆನಿಪ ನೈಜದೊಳೊಂದು।
ಪವಣಲ್ಲವರಿದಂದು ದಿಟವಿದು ॥ 1 ॥

ತರುಣಿಯೇ ಕೇಳು. ತನ್ನಲ್ಲಿ ಅಧ್ಯಾರೋಪವಾದ ಇನ್ನೊಂದನ್ನು ಅಂದರೆ ತನ್ನಲ್ಲಿ ಸಂಶಯ, ಅಸಂಭಾವನೆ ಮತ್ತು ವಿಪರೀತ ಭಾವನೆಗಳು ತನಗನ್ಯವಾದವು. ಈ ದೋಷಗಳ ನಿವೃತ್ತಿಯು ಕ್ರಮವಾಗಿ ಶ್ರವಣಾದಿ ಸಾಧನ ಮತ್ತು ಶಬ್ದಾದಿ ಪ್ರಮಾಣ ಗಳಿಂದ ಆಗುವದು. ಆದರೆ ಅಧ್ಯಾತ್ಮವೆನಿಸುವ ನಿಜಸ್ವರೂಪ ಪ್ರಾಪ್ತಿಗೆ ವಿಚಾರಿಸಿ ನೋಡಲು ಒಂದೂ ಪ್ರಮಾಣವಿಲ್ಲ, ಇದು ಸತ್ಯವು.

ಗುರುವಾಕ್ಯವೆನಿಸುವ ಶ್ರುತಿ ಕರ್ಮಜ್ಞಾನವಾ।
ಯೆರಡರ ಮಿಶ್ರರೂಪಾಗಿರ್ಪ॥
ವರಕಾಂಡತ್ರಯವನೊರೆವು ದವರಿರವನು।
ತರುಣಿ ನೀನರಿ ಪೇಳ್ವೆನೊಲವಿಂದ॥ 2 ॥

ಗುರುವಾಕ್ಯವೆನಿಸುವ ಶ್ರುತಿಯು ಕರ್ಮಕಾಂಡ, ಉಪಾಸನಾಕಾಂಡ ಮತ್ತು ಜ್ಞಾನಕಾಂಡ ಎಂಬ ಜ್ಞಾನಪರವಾಗಿರುವ ಕಾಂಡತ್ರಯಗಳನ್ನು ಪ್ರತಿಪಾದಿಸುತ್ತದೆ. ಜ್ಞಾನಬೀಜವನ್ನು ಧರಿಸಲು ಪಾತ್ರತ್ರೆಯುಳ್ಳ (ತರುಣಿ) ಮೈತ್ರೇಯಿ, ನೀನು ತಿಳಿವಂತೆ ಹೇಳುವೆನು ಕೇಳು. (ವೇದದ ಮೂರು ಕಾಂಡಗಳನಿಲ್ಲಿ ಜ್ಞಾನಪರವಾಗಿ ಹೇಳುತ್ತಾರೆ.)

ಕರ್ಮದಿಂದವೆ ಜ್ಞಾನ ಕರ್ಮದಿಂದವೆ ಮೇಣು।
ನಿರ್ಮಳ ಜ್ಞಾನದಿಂದವೆ ಮುಕ್ತಿ॥
ಪೇರ್ಮೆಯೊಳಹುದೆಂಬುದೆಲೆ ತ್ರಿಕಾಂಡಂಗಳ।
ಧರ್ಮ ವಾಶ್ರುತಿಸಿದ್ಧವಿದು ತಾನು॥ 3 ॥

ಕರ್ಮಕಾಂಡದಿಂದಲೂ, ಉಪಾಸನಾ ಕಾಂಡದಿಂದಲೂ ಮತ್ತು ಜ್ಞಾನಕಾಂಡ ದಿಂದಲೂ ಮುಕ್ತಿಯಾಗುವದೆಂಬುದು ಕಾಂಡತ್ರಯಗಳ ಹೇತುವಾಗಿರುವದು.ಇದು ಶ್ರುತಿಗಳಿಂದ ಸಿದ್ಧವಾದ ಅಭಿಪ್ರಾಯವು.

ಪ್ರಿಯತಮೆ ತಾನಿದಿರೆಂದು ತೋರುವ ಭಾವ।
ನೆಯನುಳಿದೊಡೆ ಮುಕ್ತಿ ದೊರೆವುದು॥
ನಿಯತವದಾಗಿ ನೀನರಿ ಮೋಕ್ಷವಿಷಯಕ್ಕೆ।
ಕ್ರಿಯೆಯಾತ್ಮ ಸುವಿಚಾರವೆನಬೇಕು॥ 4 ॥

ಅತ್ಯಂತ ಪ್ರೀತಿಗೆ ಪಾತ್ರಳಾದ ಮೈತ್ರೇಯಿ, ತಾನು (ಅಹಂಭಾವ) (ಟಿ) ಮತ್ತು ಇದಿರು (ದೃಶ್ಯರೂಪ ಜಗತ್ತು) ಎಂದು ತೋರುವ ಭೇದ ಭಾವನೆ ನಾಶವಾದರೆ ಮುಕ್ತಿ ಪ್ರಾಪ್ತವಾಗುವದು.

[ ಟಿಪ್ಪಣಿ:– ಅಹಂಕಾರ ಮಮಕಾರಗಳಿಗೆ ಇಂಬುಗೊಡದವನೆ ಶಾಂತಿಯನ್ನು ಹೊಂದುತ್ತಾನೆ. 'ನಿರ್ಮಮೋ ನಿರಹಂಕಾರಃ ಸ ಶಾಂತಿಮ ಅಧಿಗಚ್ಛತಿ.' ]

ಆದ್ದರಿಂದ ಮೋಕ್ಷವಿಷಯಕ್ಕೆ (ಟಿ) ಆತ್ಮ ಸುವಿಚಾರವೇ ಕರ್ಮಕಾಂಡವೆನಿಸುವದು.

ಅರಿವಿನೊಳ್ಕೂಡಿ ತನ್ನನು ವಿಚಾರಿಸುವಾಗ।
ಳರಿವುಮಾ ಸುವಿಚಾರ ಕ್ರಿಯೆಯದು ॥
ನೆರೆ ಬಿಚ್ಚದಿರೆ ಮುಕ್ತಿಯಹುದೆಂಬುದದು ಮಿಶ್ರ।
ವರಿ ನೀನು ನಿರ್ಮಳ ಮತಿವಂತೆ ॥ 5 ॥

ಶುದ್ಧಬುದ್ಧಿಯುಳ್ಳ ಮೈತ್ರೇಯಿ, ತನ್ನ ಸ್ವರೂಪಜ್ಞಾನದಲ್ಲಿ ಬೆರೆತು, ತಾನಾರೆಂಬುದನ್ನು ಅನುಮಾನ, ಯುಕ್ತಿ, ದೃಷ್ಟಾಂತಗಳೆಂಬ ಪ್ರಮಾಣಗಳಿಂದ ಮನನ ಮಾಡುವಾಗ ಸ್ವರೂಪಜ್ಞಾನ ಮತ್ತು ಸುವಿಚಾರ ಕ್ರಿಯೆ (ಎರಡೂ ಸಮರಸವಾಗಿ) ಒಂದನ್ನೊಂದು ಅಗಲದೆ ಕೂಡಿ ಇರಲು ಮುಕ್ತಿಯಾಗುವದೆಂದು ತಿಳಿಯುವದೆ 'ಮಿಶ್ರ'ವೆಂಬ ಉಪಾಸನಾಕಾಂಡವು. ತಾನಾರು ಎಂಬ ಆತ್ಮವಿಚಾರದಿಂದ ಅಧಿಷ್ಠಾನವಾದ ನಿರ್ವಿಕಾರ ಸಚ್ಚಿದಾನಂದ ಸ್ವರೂಪವೇ ನಾನೆಂಬ ಜ್ಞಾನದೃಢವಾಗುವದಕ್ಕೆ ಈ ಮನನವೇ ಸಾಧನ.

ಮರವೆಯೆಂಬುದು ಬಂಧವರಿವೆ ತನಗೆ ಮುಕ್ತಿ।
ನೆರೆಬಂಧವದು ಪುಸಿ ಪೂರ್ಣಂಗೆ॥
ಕರೆಮರೆಯೇನೆಂಬ ತಿಳಿವೆ ಸಮ್ಯಜ್ಞಾನ।
ವರಿ ಮೋಕ್ಷವಿಷಯದೊಳದು ತಾನೆ ॥ 6 ॥

ಮರವೆಯೇ ಬಂಧ, ಅರಿವೇ ಮುಕ್ತಿ, ಪರಿಪೂರ್ಣವಾದ ಆತ್ಮನಿಗೆ (ತನಗೆ) ಬಂಧವಿದೆ ಎಂಬ ಮಾತು ಶುದ್ಧಸುಳ್ಳು. ಸರ್ವತ್ರ ಇರುವ ಪೂರ್ಣಗೆ (ಏಕದೇಶೀಯವಾದ) ಅಜ್ಞಾನ ಮತ್ತು ಅದರ ಕಾರ್ಯವಾದ ಆವರಣದಿಂದ ತನಗೆ ಮರವೆ ಅಸಾಧ್ಯ, ಇಂತಹ ಸರಿಯಾದ ತಿಳುವಳಿಕೆಯೆ ಸಮ್ಯಜ್ಞಾನವು. ಮೋಕ್ಷ ವಿಷಯದಲ್ಲಿ ಇದೆ ಜ್ಞಾನಕಾಂಡವು.

ಈ ಮೂರು ಕಾಂಡವನಾರೈದು ನೋಡಲ್ಕೆ।
ತಾಮಸ ರಾಜಸ ಸಾತ್ವಿಕ॥
ನಾಮದ ಗುಣರೂಪವೆಂಬನುಕ್ರಮದಿಂದೆ।
ಸೋಮಸನ್ನಿಭಮುಖಿ ತಿಳಿ ನೀನು ॥ 7 ॥

ಚಂದ್ರಸದೃಶ ಮುಖವುಳ್ಳ ಮೈತ್ರೇಯಿ, ಕರ್ಮಕಾಂಡ ಉಪಾಸನಕಾಂಡ ಮತ್ತು ಜ್ಞಾನಕಾಂಡವೆಂಬ ಈ ಮೂರು ಕಾಂಡಗಳ ಸ್ವರೂಪವೇನೆಂದು ವಿಚಾರಿಸಿ ನೋಡಲು, ಅವು ಕ್ರಮವಾಗಿ ಸತ್ತ್ವದಲ್ಲಿಯ ತಾಮಸ, ಸತ್ತ್ವದಲ್ಲಿಯ ರಾಜಸ ಹಾಗೂ ಸತ್ವದಲ್ಲಿಯ ಶುದ್ಧ ಸತ್ತ್ವಗುಣಗಳಿಂದ ಕೂಡಿರುತ್ತವೆಂದು ನೀನು ತಿಳಿ.

[ ಟಿಪ್ಪಣಿ: – ವ್ಯಾವಹಾರಿಕ ದ್ವೈತದರ್ಶನವೇ ಬಂಧ ಬ್ರಹ್ಮಾತ್ಮೈಕತ್ತ್ವ ಜ್ಞಾನದಿಂದ ದ್ವೈತಭಾವ ನಿವೃತ್ತಿಯೆ ಮೋಕ್ಷ. ] [ ಟಿಪ್ಪಣಿ :– ಶ್ರವಣ ಹಾಗೂ ಶಾಬ್ದಿ ಪ್ರಮಾಣದಿಂದ ಅಜ್ಞಾನ ಮತ್ತು ಆವರಣಗಳ ನಿವೃತ್ತಿ ಮಾಡಿಕೊಳ್ಳುವದೇ 'ಆತ್ಮಸುವಿಚಾರ'ವೆಂಬ ಕರ್ಮಕಾಂಡ. ]

ಗುಣಮೂಲವಾದ ಸಗುಣಯೋಗವಿಡಿದು ನಿ-।
ರ್ಗುಣವೆನಿಪಂತರ ಯೋಗವ ॥
ಅಣಿಯರದಿಂದೆ ತಿಳಿದು ನೀರೆ ಕೇಳು ನಿ।
ರ್ಗುಣಯೋಗಿಯೆನಿಸುವಾತನೆ ಸುಖಿ ॥ 8 ॥

ತ್ರಿಗುಣಗಳಿಂದ ಕೂಡಿದ ಈ ಮೂರು ಕಾಂಡಗಳನ್ನು ಅರಿಯುತ್ತಿರುವವ ನಾನು ನಿರ್ಗುಣ ಸ್ವರೂಪನಿರುವೆನು. ಈ ಪ್ರಕಾರ ನಿಜಸ್ವರೂಪವನ್ನು ಅರಿತವನೇ ನಿರ್ಗುಣಯೋಗಿಯೆನಿಸುವನು, ಆತ ನಿತ್ಯಸುಖಿ.

ಗುಣಯೋಗಮಾರ್ಗವ ನಣಿಮಾದಿ ಸಿದ್ಧಿಯ ।
ನೆಣಿಸದೋರ್ಮೆಯು ತನ್ನ ಮನದೊಳು ॥
ತೃಣದಂತೆ ಕಂಡು ನಿಂದಾತನು ತಾನೆ ನಿ।
ರ್ಗುಣ ಯೋಗಿ ಶಿಷ್ಯನೆನಿಪನಿಲ್ಲಿ ॥ 9 ॥

ಸಗುಣಯೋಗ ಮಾರ್ಗವನ್ನು ಮತ್ತು ಅಣಿಮಾದಿ ಅಷ್ಟಮಹಾಸಿದ್ಧಿಗಳನ್ನು ಒಮ್ಮೆಯಾದರೂ ತನ್ನ ಮನದೊಳಗೆ ಬಯಸದೆ ಅವುಗಳನ್ನೆಲ್ಲ ತೃಣಸಮಾನವೆಂದು ತಿಳಿದು ನಿಜ ಸ್ವರೂಪದಲ್ಲಿ ನಿಂದಾತನು ನಿರ್ಗುಣ ಯೋಗಿ ಎನಿಸುವನು. ಆತನೇ ಇಲ್ಲಿ ಸಚ್ಛಿಷ್ಯನೆನಿಸುವನು. (ಯೋಗ್ಯ ಅಧಿಕಾರಿ).

– ಇತಿ ಕಾಂಡತ್ರಯಾರ್ಥ ನಿರೂಪಣೆ –

## 3ನೇ ಸೂತ್ರ

**ಗುರುವಿಂದೆ ಪರತತ್ತ್ವವದು ದೋಷರಹಿತವಮಾ-।
ಗಿರೆ ತಿಳಿವುದು ಶಿಷ್ಯನೆನಿಪನು ॥**

ಸದ್ಗುರುವರನಿಂದ ಆತ್ಮತತ್ತ್ವವನ್ನು ಶ್ರವಣ ಮನನ ನಿದಿಧ್ಯಾಸನಗಳಲ್ಲಿ ಯಾವ ದೋಷಗಳೂ ತೊಡರದಂತೆ ಶಿಷ್ಯನಾದವನು ತಿಳಿದುಕೊಳ್ಳಬೇಕು.

ಗುರುಪಾದ ಭಕ್ತಂಗೆ ಪರಮವಿರಕ್ತಂಗೆ।
ಪರಿಣತ ಚಿತ್ತಂಗೆ ಶಿಷ್ಯಂಗೆ ॥
ಪರಮಾತ್ಮ ಪದವನು ನಿರಪೇಕ್ಷನೆನಿಸಿ ಸ।
ದ್ಗುರುವರನೊಲವಿಂದೆ ತಿಳುಪುದು ॥ 1 ॥

ಸದ್ಗುರು ಪಾದವೇ ಪರಮಗತಿಯೆಂದು ನಂಬಿದ ಭಕ್ತನೂ ಪರಮವೈರಾಗ್ಯ ಶೀಲನೂ ಆದ ಶಿಷ್ಯನಿಗೆ ಪರಾತ್ಪರ ಸ್ವರೂಪವನ್ನು ಯಾವದೇ ಪ್ರತಿಫಲದ ಅಪೇಕ್ಷೆಯಿಲ್ಲದೆ ಸದ್ಗುರುವರನು ಪ್ರೇಮಪೂರ್ವಕವಾಗಿ ತಿಳಿಸಿಕೊಡಬೇಕು.

ನಿರಹಂಕಾರದೆ ಪರತತ್ತ್ವಪದನು ದೋಷ।
ವಿರಹಿತಮೆನೆ ತಿಳುಪುವನನು ॥
ಗುರುವರನೆಂದು ನಂಬಲು ಬೇಹುದಾದನಂದ।
ಶರನಿಧಿಯೆನಿಪ ಸುಂದರಗಾತ್ರೆ ॥ 2 ॥

ಆನಂದಸಾಗರವೆನಿಸುವ ಸುಂದರ ಹೃದಯವುಳ್ಳ ಮೈತ್ರೇಯಿ, ತಾನು ಗುರುವೆಂಬ ಅಭಿಮಾನವನ್ನು ತ್ಯಜಿಸಿ ಪರಮಾತ್ಮ ಸ್ವರೂಪವನ್ನು ಶ್ರವಣಾದಿ ದೋಷಗಳು ಉಂಟಾಗದಂತೆ ತಿಳಿಸಿಕೊಡುವವನನ್ನು ಮಾತ್ರ ಸದ್ಗುರುವೆಂದು ನಂಬಿ ಅವನನ್ನು ಆಶ್ರಯಿಸಬೇಕು.

ತರುಣಿ ಕೇಳಾ ಶ್ರವಣಾದಿ ದೋಷಗಳನು।
ವಿರಹಿತಮಾಗಿ ವಿಚಾರಿಸಿ ॥
ಪರತತ್ತ್ವಪದವನು ಗುರುಬೋಧೆಯಿಂದವ।
ಧರಿಪುದು ವರಶಿಷ್ಯನೊಲವಿಂದ ॥ 3 ॥

ಆತ್ಮತತ್ತ್ವವನ್ನು ಗ್ರಹಿಸಲು ಸಮರ್ಥಳಾದ (ತರುಣಿ) ಮೈತ್ರೇಯಿ, ಕೇಳು ಸಚ್ಛಿಷ್ಯನೆನಿಸುವವನು, ಶ್ರವಣಾದಿ ದೋಷಗಳು ಉಂಟಾಗದಂತೆ ಗುರೂಪದೇಶದಿಂದ ಪರಮಾತ್ಮ ಸ್ವರೂಪವನ್ನು ಪರಮಭಕ್ತಿಯಿಂದ ಕೇಳಿ ತಿಳಿದುಕೊಳ್ಳಬೇಕು.

ಶ್ರುತಿ ತತ್ತ್ವಮಸಿಯೆನೆ ಮತಿಭೇದದಿಂದವ।
ಗತಿಯನಾ ತ್ವಂಪದದೊಳಗೋರ್ಮೆ ॥
ರತಿಯಿಂದೆ ತಿಳಿಯದ ಕತದಿಂದೆ ಕೇಳೆಲೆ।
ಸತಿ ನೀನೆಯದು ದೋಷತ್ರಯವಕ್ಕು ॥ 4 ॥

ಸಾಮವೇದವು ತತ್ತ್ವಮಸಿ (ಆ ಪರಮಾತ್ಮನೆ ನೀನಿರುವಿ) ಎಂದು ಬೋಧಿಸಲು ಬುದ್ಧಿ ಭೇದದಿಂದ (ಆ ವಾಕ್ಯದ) ಲಕ್ಷ್ಯಾರ್ಥವಾದ ರಹಸ್ಯವನ್ನು ನಿನ್ನೊಳಗೆ ನೀನು ತಿಳಿಯಲಿಲ್ಲ. ಮಡದಿ ಕೇಳು. 'ಅದೇ ನಾನೆಂದು' ಪ್ರೀತಿಯಿಂದ ಒಮ್ಮೆಯಾದರೂ ಅರಿಯದ ಕಾರಣದಿಂದ ಮಹಾವಾಕ್ಯ ಶ್ರವಣ, ಮನನ ನಿಧಿಧ್ಯಾಸನಗಳೆಂಬ ಮೂರು ದೋಷಗಳು ನಿನ್ನಲ್ಲಿ ತೋರುವವು.

ತನುವನಿಂದ್ರಿಯವನಸುವಂತಃಕರಣಗ।
ಳೆನಿಪವೆ ತಾನೆಂಬುದನುದಿನ ॥
ಇನಿತಗಲದೆ ತನ್ನೊಳಿರ್ಪ ತತ್ಕ್ರಿಯೆಯಿಂದೆ।
ತನಗೆ ಶ್ರವಣ ದೋಷವೆನಿಪುದು ॥ 5 ॥

ಶರೀರ, ಇಂದ್ರಿಯ, ಪ್ರಾಣ, ಅಂತಃಕರಣಗಳಿವೇ ದಿನದಿನವೂ ತಾನೆಂಬ ತಾದಾತ್ಮ್ಯ ಭಾವದಿಂದ ಕಿಂಚಿತ್ತಾದರೂ ಅಗಲದೆ, ತನ್ನಲ್ಲಿ ಅವುಗಳ ಕರ್ತೃತ್ವ ಅಭಿಮಾನವಿರಲು ತನಗೆ ಶ್ರವಣ ದೋಷ ಪ್ರಾಪ್ತವಾಗುವದು.

ತನುಮೊದಲೆನಿಸಿ ತೋರ್ಪನಿತುವನರಿವ ದೃ।
ಷ್ಟನೆ ತಾನೀಯೊಡಲೊಳು ತುರಿಯನು।
ಎನಿಪ ವಿಚಾರದರಿಕೆಯುಳ್ಳ ಕತದಿಂದ।
ಮನನ ದೋಷಾಖ್ಯನಪ್ಪನು ತಾನೆ ॥ 6 ॥

ಮಹಾವಾಕ್ಯ ಶ್ರವಣ ಕಾಲಕ್ಕೆ ಶರೀರ ಅಂತಃಕರಣಾದಿಗಳನ್ನು ಅರಿವ ದೃಷ್ಟನೆ ತಾನು ಹಾಗೂ ತುರಿಯನು ತಾನೆಂಬ ಭಾವವು ಸತತವಾಗಿ ತನ್ನನ್ನು ಅಗಲದಂತೆ ಉಳಿದರೆ ಆಗ ಮನನ ದೋಷವುಳ್ಳವನು ತಾನೆನಿಸುವನು.

ಎನಿತು ತೋರ್ಕೆಗಳೊಳಗನಿತು ತಾನಲ್ಲವೆಂ।
ದೆನೆ ಕಾಣ್ಬಸರ್ವದೃಕ್ಕಾನೆಂಬ॥
ಘನದರಿವಿಂದೆ ನಿದಿಧ್ಯಾಸನಾಹ್ವಯ।
ವೆನಿಸುವ ದೋಷಮುಳ್ಳನು ತಾನೆ ॥ 7 ॥

ತೋರುವ ದೃಶ್ಯ ಮತ್ತು ದೃಷ್ಟಾ ಎಂಬಿವೆಲ್ಲವು ತಾನಲ್ಲವೆಂಬದನ್ನು ಅರಿಯುವ ಸರ್ವದೃಕ್ ನಾನು ಎಂಬ ಮಿಗಿಲಾದ ಜ್ಞಾನದ ಅಭಿಮಾನದಿಂದ ನಿದಿಧ್ಯಾಸನವೆಂಬ ದೋಷವುಳ್ಳವನು ತಾನೆನಿಸುವನು.

ಜಡದೃಶ್ಯಾತ್ಮನು ಮೇಣಜಡ ದೃಶ್ಯಾತ್ಮನು ಜಡಾ।
ಜಡ ರಹಿತಾತ್ಮನೆಂಬೀ ಮೂರು॥
ಜಡಭಾವವಳಿದುಳಿದಿರವೆ ದೋಷದೊಳೆಂದು।
ತೊಡರದ ಪದವದು ನಿಜತತ್ತ್ವ ॥ 8 ॥

ಜಡದೃಶ್ಯಗಳು, ಅಜಡದೃಶ್ಯಗಳು ಮತ್ತು ಜಡಾಜಡ ದೃಶ್ಯಗಳಿಗೆ ವಿಲಕ್ಷಣನು 'ನಾನು' ಇದ್ದೇನೆಂಬ ಈ ಮೂರುಭಾವಗಳಿಗೆ ಅತೀತನಾಗಿರುವವನೇ ನಿರ್ದೋಷನಾದ ಶುದ್ಧಾತ್ಮನು. ಶ್ರವಣಾದಿ ಮೂರು ದೋಷಗಳಲ್ಲಿ ತಿಳಿಯುವ ಅಹಂಭಾವವಿರುವದರಿಂದ ಈ ಭಾವವನ್ನು ಕಳೆದುಳಿದ ನಿರ್ಮಲವಾದ ಬ್ರಹ್ಮಸ್ವರೂಪವೇ ಯಥಾರ್ಥವಾಗಿರುತ್ತದೆ. ಅದೇ ನಿರ್ದೋಷವಾಗಿರುವ ನಿಜತತ್ತ್ವವು.

– ಇತಿ ಆತ್ಮನಲ್ಲಿ ದೋಷತ್ರಯ ನಿರಾಕರಣ ನಿರೂಪಣೆ –

## 4ನೇ ಸೂತ್ರ

ವಿರತಂಗೆ ಕರ್ಮರಹಿತವಾಗಿ ನಿಜವನು ।
ಗುರುಬೋಧಿಪುದು ನಾಲ್ಕುತೆರದಿಂದ ॥

ಪರಮ ವೈರಾಗ್ಯಶೀಲನಾದ ಶಿಷ್ಯೋತ್ತಮನಿಗೆ ಕರ್ಮ ರಹಿತವಾಗಿರುವಂತೆ ಸ್ವಸ್ವರೂಪವನ್ನು ಸದ್ಗುರುಗಳು ಮುಖಾಂತರಾದಿ ಕೆಳಗೆ ವಿವರಿಸಿದ ನಾಲ್ಕು ವಿಧಧ ಬೋಧಗಳಿಂದ ಉಪದೇಶಿಸಬೇಕು.

ವರಶಿಷ್ಯರನು ಮುಖಾಂತರ, ದಶಾಂತರಭಾವಾಂ।
ತರಬಳಿಕನ್ಯೋಪದೇಶಾಖ್ಯ॥
ಪರಿವಿಡಿದೀ ನಾಲ್ಕು ವಿಧದ ಬೋಧೆಗಳಿಂದೆ।
ಗುರು ಬೋಧಿಸುವದವಗತಿಯೊಳು ॥ 1 ॥

ವಿವೇಕ ವೈರಾಗ್ಯಾದಿಯುಕ್ತಸಚ್ಛಿಷ್ಯರಿಗೆ ಮುಖಾಂತರ, ದಶಾಂತರ, ಭಾವಾಂತರ ಹಾಗೂ ಅನ್ಯೋಪದೇಶವೆಂಬ ಕ್ರಮವಾಗಿ ನಾಲ್ಕು ಪ್ರಕಾರದ ಬೋಧೆಗಳಿಂದ ಜ್ಞಾನಮೂಲಕವಾಗಿ ಉಪದೇಶ ಮಾಡಬೇಕು.

ಪ್ರಿಯತಮೆ ಕೇಳ್ ಬ್ರಹ್ಮವಿಷಯಮಾಗಿರ್ಪ ಸ।
ತ್ಕ್ರಿಯೆಯನೆ ಮಾಡಲಸದಿರೆಂಬ॥
ನಿಯತದೀ ಬೋಧೆ ಮುಖಾಂತರವಹುದು ನಿ।
ಷ್ಕ್ರಿಯನದ್ವಯಾತ್ಮ ನೀನದರಿಂದ ॥ 2 ॥

ಪರಮ ಪ್ರೀತಿಗೆ ಪಾತ್ರಳಾದ ಮೈತ್ರೇಯಿ ಕೇಳು. ಅಖಂದಸ್ವರೂಪವೂ ಏಕವೂ ನೀನಿರುವದರಿಂದ ಬ್ರಹ್ಮವಿಷಯವಾಗಿರುವ ಸುವಿಚಾರ ಕ್ರಿಯೆಯನ್ನು ಆಲಸ್ಯವಿಲ್ಲದೆ ನಿರಂತರವಾಗಿ ಚಿಂತನ ಮಾಡು ಎಂದು ಉಪದೇಶಿಸುವದೇ ಮುಖಾಂತರ ಬೋಧೆ ಯೆಂದು ಹೇಳಿಸಿಕೊಳ್ಳುವದು. ಇದರಿಂದ ಸಾಧಕನ ವೃತ್ತಿ ಅಂತರ್ಮುಖವಾಗುವದು.

ವಿರತಿಯನಾತ್ಮಾಭಿರತಿಯನಂತರದಿಂದೆ।
ಪರಮನದ್ವಯನೆಂದು ತಿಳಿಪುವ॥
ವರಬೋಧೆಯದು ದಶಾಂತರವಹುದೆಂದು ನಿ।
ರ್ಧರಿಸಿದು ಶ್ರುತಿ ಸಿದ್ಧವಹುದಾಗಿ ॥ 3 ॥

ಅನಾತ್ಮವಿಷಯದಲ್ಲಿ ವೈರಾಗವನ್ನೂ ಆತ್ಮವಿಷಯದಲ್ಲಿ ಸಂಪ್ರೀತಿಯನ್ನೂ ವಿವೇಕಿಸಿ ಅಳವಡಿಸಿಕೊಂಡ ಮೇಲೆ, ನೀನೆ ಅದ್ವಯ ಪರಮಾತ್ಮನಿರುವಿ ಎಂದು ಬೋಧಿಸುವದೇ ದಶಾಂತರಬೋಧೆಯೆಂದು ನಿರ್ಧರಿಸು. ಈ ಬೋಧೆಯಿಂದ ಅಜ್ಞಾನದೆಶೆ ನಾಶವಾಗಿ ಜ್ಞಾನ ಪ್ರಾಪ್ತವಾಗುವದು. ಇದು ಶ್ರುತಿ ಸಮ್ಮತವಾದ ಸಿದ್ಧಾಂತವು.

ಪರಮನೆ ನೀನೆಂಬುವದೆ ಪರೀಕ್ಷೆ ಭಾವಾಂ।
ತರ ಬೋದೆಯೆನಿಪುದು ನಿಜದೊಳು॥
ಪರಮಾತ್ಮನೆಂದೆಂಬ ತಾನನ್ಯನೆಂದೆಂಬ।
ವೆರಡು ಭಾವನೆಗಳು ಪುಸಿಯಕ್ಕು ॥ 4 ॥

ಪರಮಾತ್ಮನು ಬೇರೆ ನೀನು ಬೇರೆ ಎಂಬ ಎರಡು ಭಾವನೆಗಳು ಅದ್ವಯಾತ್ಮನಲ್ಲಿ ಮಿಥ್ಯೆಯಾದ್ದರಿಂದ ವಿವೇಚಿಸಿ ನೋಡಲಾಗಿ ನೀನೆ ಪರಮಾತ್ಮನಿರುವಿ ಎಂದು ಬೋಧಿಸುವದೇ ಭಾವಾಂತರಬೋಧೆಯೆನಿಸುವದು. ಈ ಬೋಧೆಯಿಂದ ತಾನು ಸರ್ವಭಾವನೆಗಳಿಗೆ ಅತೀತನಿರುವೆನೆಂದು ತಿಳಿಯುವನು.

ಅನ್ಯವನೊರೆವು ತನನ್ಯವನರುಪಲ।
ದನ್ಯೋಪದೇಶ ಬೋಧೆಯೆನಿಕ್ಕು॥
ಧನ್ಯೆ ನೀನರಿಯನ್ಯವದು ಪುಸಿ ತಾನೆಯ।
ನನ್ಯಬೋಧ್ಯನು ದೃಶಿಮಾತ್ರನು ॥ 5 ॥

ತನಗೆ ಅನ್ಯವಾದ ವಸ್ತುಗಳ ಮುಖಾಂತರ ತನಗೆ ಅನ್ಯವಲ್ಲದ ಅಂದರೆ ತಾನೇ ತಾನಾದ ಆತ್ಮಸ್ವರೂಪವನ್ನು ಬೋಧಿಸುವದಕ್ಕೆ ಅನ್ಯೋಪದೇಶವೆಂಬ ಬೋಧೆಯೆನ್ನುವರು. (ಅನ್ಯಃ ಅಪದೇಶ :– ಅನ್ಯವಸ್ತುವಿನ ಚಿಹ್ನ ಅಥವಾ ಲಕ್ಷಣ. ಇದಕ್ಕೆ ತಟಸ್ಥಲಕ್ಷಣವೆಂದೂ ಕರೆಯುವರು. ಅಥವಾ ಅನ್ಯವನುವೊರೆವುತ ಅನನ್ಯವನು ಬೋಧಿಸುವದು ಅನ್ಯೋಪದೇಶವು) ಈ ಬೋಧೆಯಿಂದ ನಿನಗನ್ಯವಾದ ಅನಾತ್ಮವು ಮಿಥ್ಯೆಯಾಗಿ ನೀನು ಅನನ್ಯ, ಬೋಧಸ್ವರೂಪನು, ದೃಶಿಮಾತ್ರನಿರುವಿ, ಎಂದು ಸಿದ್ಧವಾಗುವದು ಮೈತ್ರೇಯಿ, ಈ ಬೋಧೆಯಿಂದ ನೀನು ಧನ್ಯಳಿರುವಿ.

ಇಂತೀ ಪರಿಯ ನಾಲ್ಕು ತೆರದ ಬೋಧೆಗಳನು।
ಭ್ರಾಂತಿಬೋಧ ಚತುಷ್ಪಯವೆಂದು॥
ಕಾಂತೆ ನೀನರಿವುದೋರಂತೆ ಪರಮಾತ್ಮನ।
ನಂತನದ್ವಿತೀಯ ಚಿನ್ಮಯನಾಗಿ ॥ 6 ॥

ಪರಮಾತ್ಮನು ಅನಾದ್ಯನಂತನೂ, ಏಕಮೇವಾದ್ವಿತಿಯನೂ, ಅನನ್ಯ ಚಿನ್ಮಾತ್ರನೂ ಇರುವನು. ಅಲ್ಲಿ (ನಿನ್ನ ನಿಜಸ್ವರೂಪದಲ್ಲಿ ಗುರು–ಶಿಷ್ಯರ ಬೋಧ–ಬೋಧಕತ್ವಕ್ಕೆ ಅವಕಾಶವಿರುವದಿಲ್ಲವಾದ್ದರಿಂದ) ಈ ನಾಲ್ಕು ಭ್ರಾಂತಿ ಬೋಧೆಗಳು ಭ್ರಾಂತನ (ಕಲ್ಪಿತ ಪುರುಷ) ಅಧ್ಯಾಸವನ್ನು ನಿವಾರಿಸಲಿಕ್ಕೆ ಉಪಯುಕ್ತವಾಗಿವೆ. ಕಾಂತೆ ಮೈತ್ರೇಯಿ, ನಿರ್ದೋಷವಾದ ಈ ಗುರುಬೊಧೆಯನ್ನು ನೀನು ಚೆನ್ನಾಗಿ ತಿಳಿದುಕೊಳ್ಳಬೇಕು.

– ಇತಿ ಬೋಧಚತುಷ್ಟಯ ನಿರೂಪಣೆ –

## 5ನೇ ಸೂತ್ರ

ಸಕಲವಿಷಯವಿರಕ್ತನು ಶುದ್ಧವಿದ್ಯೆಯಿಂ ।
ದಕಲಂಕನಿಜವ ತಾನರಿವುದು ॥

ಸರ್ವವಿಷಯಗಳಲ್ಲಿ ಪರಮ ವೈರಾಗ್ಯವನ್ನು ಹೊಂದಿದ ಸಾಧಕನು ಶುದ್ಧ ವಿದ್ಯೆಯ ಸಹಾಯದಿಂದ ನಿಷ್ಕಲಂಕವಾದ ತನ್ನ ಸ್ವರೂಪವನ್ನು ತಿಳಿಯಬೇಕು. (ಶುದ್ಧವಿದ್ಯೆ ಎಂದರೆ ಸತ್ಯಾನುಭವ. ಇದರ ವಿವರಣೆಯನ್ನು ಮುಂದೆ 10ನೇ ನುಡಿಯಲ್ಲಿ ನೋಡಿರಿ)

ಧನ ಪುತ್ರ ಜನನಿ ಜನಕ ವನಿತಾದಿ ತಾ।
ನೆನಿಪಲ್ಲಿ ತನಗೆ ವೈರಾಗ್ಯವು ॥
ಜನಿಸಲಂತದು ಗುಣಕಾರ್ಯವದಕ್ಕೆ ಮಾ।
ನಿನಿ ಕೇಳ್ಪ್ರಂಚಾಖ್ಯವೆಸೆವುದು ॥ 1 ॥

ತಾಯಿ,ತಂದೆ, ಮಡದಿ, ಮಕ್ಕಳು, ಧನ ಕನಕಾದಿ ವಿಷಯಗಳಲ್ಲಿನಾನು ನನ್ನದೆಂಬ ಭ್ರಮೆ ಅಳಿದು ಅವೆಲ್ಲವುಗಳಲ್ಲಿ ತನಗೆ ವೈರಾಗ್ಯ ಉಂಟಾದರೆ (ಅಂದರೆ ಅವುಗಳಲ್ಲಿಯ ಮೋಹವು ಇಲ್ಲವಾದರೆ) ಅದು ಗುಣಕಾರ್ಯ ಅಥವಾ ಪ್ರಪಂಚಾಖ್ಯ ವೈರಾಗ್ಯವೆಂದು ಹೇಳಿಸಿಕೊಳ್ಳುವದು (ಮುಂದೆ ಹೇಳುವ ವೈರಾಗ್ಯಗಳ ದೃಷ್ಟಿಯಿಂದ ಇದು ಅಪರವೈರಾಗ್ಯವೆನಿಸುವದು).

ದೇಹವಿಂದ್ರಿಯವಸು ಮನವಹಮಾದಿ ಸ।
ಮೂಹವಿಂತಿದು ತಾನೆಂಬೆಡೆಯೊಳು।
ಸಾಹಸದಿಂದ ವಿರಕ್ತಿ ಪುಟ್ಟಿದೊಡೆ ಸಂ।
ದೇಹವೇನದುವೆ ತಾಮಸವಕ್ಕು ॥ 2 ॥

ದೇಹ ದಶೇಂದ್ರಿಯಗಳು, ಪ್ರಾಣ, ಮನಾದಿ ಅಂತಃಕರಣವು ತಾನೆಂದು ಭಾವಿಸಿದ್ದಾನೆ. ಈಗ ಸತ್ಸಂಗದಲ್ಲಿ ಪ್ರಯತ್ನಪೂರ್ವಕವಾಗಿ ಮೇಲೆ ಹೇಳಿದ ಕರಣಗಳಲ್ಲಿ ತನಗೆ ವೈರಾಗ್ಯವು ಸಂಜನಿಸಿದರೆ ನಿಸ್ಸಂದೇಹವಾಗಿ ಅದಕ್ಕೆ ತಾಮಸವೈರಾಗ್ಯವೆನ್ನುವರು.

ತನು ಮೊದಲಾಗಿ ತೋರ್ಪನಿತುವನರಿವ ದೃ।
ಷ್ಟನೆ ತಾನೆಂಬಲ್ಲಿ ವೈರಾಗ್ಯವು ॥
ತನಗೆ ಜನಿತಮಾಗಲದನು ರಾಜಸವೆಂದು।
ವನಿತೆ ಮೈತ್ರೇಯಿ ನಿಶ್ಚಯಿಪುದು ॥ 3 ॥

ಪ್ರಿಯೆ ಮೈತ್ರೇಯಿ, ಮೇಲೆ ವಿವರಿಸಿದ ಶರೀರ ಮೊದಲ್ಗೊಂಡು ತೋರತಕ್ಕ ನಾಮರೂಪಾತ್ಮಕ ದೃಶ್ಯಗಳನ್ನು ಅರಿಯುವ ದೃಷ್ಟನೆ ತಾನು ಎಂಬಲ್ಲಿ ತನಗೆ ವೈರಾಗ್ಯವು ಉದಿಸಿದರೆ, ಅದು ರಾಜಸವೈರಾಗ್ಯವೆಂದು ನೀನು ನಿಶ್ಚಯಿಸು.

ತೋರುವ ದೃಶ್ಯ ದೃಕ್ಕುಗಳೆಂಬುಭಯಮಿವು।
ತೋರದರಿವೆ ತಾನೆಂದೆನಿಪಲ್ಲಿ॥
ತೋರೆ ನಿಶ್ಚಲಮಾದ ನಿಜವಿರಾಗತೆಯದು।
ನೀರೆ ಸಾತ್ವಿಕವೆಂದೆನಿಸುತಿರ್ಕು ॥ 4 ॥

ತೋರತಕ್ಕ ದೃಶ್ಯ ಹಾಗೂ ದೃಕ್ಕು ಇವೆರಡೂ ತೋರದಿರುವ ಬರೆ ಅರಿವೆ ತಾನೆಂದು ತಿಳಿಯುವಲ್ಲಿ ಅರಿವಿನ ಅಹಂಭಾವವು ಅಳಿಯಲು ಅದುವೆ ಸಾತ್ವಿಕ ವೈರಾಗ್ಯವೆಂದು ಹೇಳಿಸಿಕೊಳ್ಳುವದು.

ನಿರವಿಸುವೆನು ಪರಬ್ರಹ್ಮವಾನಪ್ಪೆನೆಂ।
ಬರಿವಿನೊಳಗೆ ತನಗುದಿಸಲು ॥
ವಿರತಿ ಕೇಳೆಲೆ ಕಾಂತೆ ಗುಣಗಂಧವದು ತಾನೆ।
ಪರಮವೈರಾಗ್ಯವೆಂದೆನಿಪುದು ॥ 5 ॥

ಪರಬ್ರಹ್ಮವೆ ನಾನಿರುವೆನು ಮತ್ತು ಇತರರಿಗೆ ಅದನ್ನೇ ನಿರೂಪಣ ಮಾಡುವೆನು ಎಂಬ ಈ ಬೋಧ ಬೋಧಕತ್ವರೂಪ ತುರಿಯ ಅವಸ್ಥೆಯಲ್ಲಿ ವೈರಾಗ್ಯ ಪ್ರಾಪ್ತವಾಗಲು ಅದಕ್ಕೆ ಗುಣಗಂಧ ಅಥವಾ ಪರಮ ವೈರಾಗ್ಯವೆಂದು ಹೇಳುವರು.

ಇನಿತರಲ್ಲಿಯ ರಾಗವದು ತಾನವಿದ್ಯೆಯೆಂ।
ದೆನಿಪುದಿನಿತರೆಡೆಯೊಳು ಮತ್ತೆ।
ತನಗೆ ವಿರಾಗ ಸವನಿಸಲ್ಕೆ ವಿದ್ಯೆಯೆಂ।
ದೆನಿಪುದು ಲಲಿತಾಂಗಿ ತಿಳಿ ನೀನು ॥ 6 ॥

ಸುಂದರ ಸ್ತ್ರೀಯಳೆ, ಮೇಲೆ ಹೇಳಿದ ಐದು ಪ್ರಕಾರದ ವೈರಾಗ್ಯಗಳಲ್ಲಿ ತನಗಿರುವ ಮೋಹವು ಅವಿದ್ಯೆಯೆಂದೆನಿಪುದು. ವಿವೇಚಿಸಿ ನೋಡಲಾಗಿ ಅವುಗಳಲ್ಲಿಯ ರಾಗವಳಿದದ್ದೇ ವಿದ್ಯೆಯೆಂದು ನೀನು ತಿಳಿದುಕೊಳ್ಳಬೇಕು.

ಇನಿತು ತೋರ್ಕೆಗಳಲ್ಲಿ ತನಗೆ ರಾಗವಿರಾಗ।
ವನಿತು ಪುಟ್ಟದೊಡೆ ವಿದ್ಯಾವಿದ್ಯೆ।
ಎನಿಪುದು ಮಿಶ್ರಗತಿಯಿಂದೆ ಸನ್ಮುನಿ।
ವನಿತಾ ಕದಂಬ ವಂದಿತ ಪಾದೆ ॥ 7 ॥

ಮುನಿಪುಂಗವರ ಪತ್ನಿಸಮೂಹದಿಂದ ವಂದಿತಳಾದ ಮೈತ್ರೇಯಿ, ಈ ಸಕಲ ಜಡಾಜಡ ತೋರಿಕೆಗಳಲ್ಲಿ ತನಗೆ ಒಮ್ಮೆ ರಾಗ ಮತ್ತೊಮ್ಮೆ ವಿರಾಗವು ಹುಟ್ಟಿದರೆ ಅದು ಮಿಶ್ರರೂಪದಿಂದ ವಿದ್ಯಾವಿದ್ಯೆಯೆಂದೆನಿಸುವದೆಂದು ನೀನು ತಿಳಿ.

ವಿದ್ಯೆಯೆ ಸತ್ತ್ವಮವಿದ್ಯೆಯೆ ತಮವದು।
ವಿದ್ಯಾವಿದ್ಯೆಯೆ ರಜೋಗುಣವಕ್ಕು॥
ಹೃದ್ಯೆ ಮೈತ್ರೇಯಿ ಕೃತಾರ್ಥೆ ನೀನೆಲೆ ಶುದ್ಧ।
ವಿದ್ಯೆಯಿಂದಿನಿತುವನರಿವುದು ॥ 8 ॥

ವಿದ್ಯೆಯೆ ಸತ್ತ್ವಗುಣವು. ಅವಿದ್ಯೆಯೆ ತಮೋಗುಣವು. ವಿದ್ಯಾವಿದ್ಯೆಗಳ (ಜ್ಞಾನಾಜ್ಞಾನ) ಮಿಶ್ರವೇ ರಜೋಗುಣವೆನಿಸಿದೆ. ಪವಿತ್ರ ಹೃದಯವುಳ್ಳ ಮೈತ್ರೇಯಿ, ಈ ಮೂರು ಪ್ರಕಾರದ ಗುಣಭೇದಗಳನ್ನು ತಿಳಿಯುವ ಶುದ್ಧ ಬುದ್ಧಿಯಿಂದ ನಿಷ್ಕಲಂಕವಾದ ನಿನ್ನ ಸ್ವರೂಪವನ್ನು ತಿಳಿದರೆ ನೀನು ಕೃತಾರ್ಥಳಾಗುವಿ.

ಗುಣಕಾರ್ಯವೆಂಬ ತದ್ಗುಣಮಯವೆಂಬ ಮೇ।
ಣ್ಗುಣಗಂಧವೆಂಬೈದು ವಿರತಿಯೆ।
ಗುಣರೂಪವೆನಿಸುವೀ ತ್ರಿವಿಧ ವಿಭಾಗೆ ನಿ।
ರ್ಗುಣನಾಗಿ ತನ್ನೊಳಿಂತಿವು ಮಿಥ್ಯೆ ॥ 9 ॥

ವೈರಾಗ್ಯಗಳಲ್ಲಿ ಗುಣಕಾರ್ಯವೆಂಬ ಪ್ರಪಂಚಾಖ್ಯ ವೈರಾಗ್ಯ ಒಂದು, ಗುಣಮಯವೆಂಬ ಅಂದರೆ ತಾಮಸ, ರಾಜಸ ಮತ್ತು ಸಾತ್ವಿಕವೆಂಬ ಮೂರು ಹಾಗೂ ಗುಣಗಂಧವೆಂಬ ವೈರಾಗ್ಯ ಒಂದು. ಹೀಗೆ ಐದು ಪ್ರಕಾರದ ವೈರಾಗ್ಯಗಳಿರುವವು. ಇವು ನಿರ್ಗುಣವಾದ ನಿನ್ನ ನಿಜ ಸ್ವರೂಪದಲ್ಲಿ ಪುಸಿದೋರಿಕೆಯಾಗಿವೆ.

ವಿದ್ಯೆಯೋಳ್ಕೂಡದವಿದ್ಯೆಯೋಳ್ಬೆರಸದೆ।
ವಿದ್ಯಾವಿದ್ಯೆಗಳೆಂಬೆರಡರೊಳು ॥
ಪೊದ್ದದೆ ಪರತರಮಾಗಿ ತೋರುವ ಶುದ್ಧ।
ವಿದ್ಯೆಯಿಂದರಿ ನಿನ್ನ ನೆಲೆ ನೀರೆ ॥ 10 ॥

ಆನಂದರಸಭರಿತಳಾದ ಮೈತ್ರೇಯಿ, ಸತ್ತ್ವಗುಣರೂಪ ವಿದ್ಯೆಯಲ್ಲಿ ತಾದಾತ್ಮ ಹೊಂದದೆ, ತಮೋಗುಣಾತ್ಮಕ ಅವಿದ್ಯೆಯಲ್ಲಿ ಬೆರೆಯದೆ ಮತ್ತು ರಜೋಗುಣವೆಂಬ ವಿದ್ಯಾವಿದ್ಯೆಯಲ್ಲಿ ಸಂಬಂಧ ಹೊಂದದೆ, ಇವುಗಳಿಗೆ ವಿಲಕ್ಷಣವಾಗಿ ಇರುವ ಶುದ್ಧವಿದ್ಯೆಯಿಂದ ನಿನ್ನ ನಿಜಸ್ವರೂಪವನ್ನು ತಿಳಿಯಬೇಕು (ಇದು ಅತದ್ವ್ಯಾವೃತ್ತಿ ಲಕ್ಷಣದಿಂದ ತನ್ನನ್ನು ತಾನು ತಿಳಿಯುವ ಬಗೆಯಾಗಿದೆ.)

ಅದು ಶುದ್ಧವಿದ್ಯೆ ಮುನ್ನೊರೆದ ನಾನಾ ಪ್ರಪಂ।
ಚದ ಭೇದವೆಲ್ಲವು ಪುಸಿಯೆಂದು ॥
ಒದವಿ ತಾನರಿದರಿವಡಗಿ ಪೂರ್ಣಾನಂದ।
ಪದವಾದ ಬರಿಯರಿವಿನ ತೋರ್ಕೆ ॥ 11 ॥

ಈ ಮೊದಲು ವಿವರಿಸಿ ಪಂಚಪ್ರಕಾರದ ವೈರಾಗ್ಯಗಳಲ್ಲಿ ತೋರಿದ ಯಾವತ್ತೂ ಪ್ರಪಂಚದ ಭೇದವು ಮಿಥ್ಯೆಯೆಂದು ಚನ್ನಾಗಿ ಅರಿತ ಅರಿವೆ ಶುದ್ಧವಿದ್ಯೆಯು. ಅಭ್ಯಾಸಬಲದಿಂದ ಈ ಅರಿವು ಕೂಡ ತೋರದಡಗಿ ಕೇವಲ ಆನಂದಪದವಾದ ಬರಿಯ ಅರಿವಿನ ಅಂದರೆ ಕಾಲಾದಿ ಪರಿಚ್ಛೇದರಹಿತವಾದ ಅಖಂಡ ಇರವು, ಅರಿವು ಹಾಗೂ ಆನಂದ ಮಾತ್ರ ತನ್ನ ನಿಜಸ್ವರೂಪವಾಗಿದೆ.

– ಇತಿ ವೈರಾಗ್ಯ ಪಂಚಕ ನಿರೂಪಣೆ –

## 6ನೇ ಸೂತ್ರ

ಸತ್ಯಾನುಭವದಿಂದ ನೋಡಲಖಂಡಿತ ।
ನಿತ್ಯ ಪಂಚಾವಯುವನು ತಾನೆ ॥

ಶುದ್ಧವಿದ್ಯೆಯಿಂದ ಫಲಿಸುವ ಸುಜ್ಞಾನದಿಂದ ನೋಡಲು ದೇಶಕಾಲಾದಿ ಪರಿಚ್ಛೇದರಹಿತ, ಪ್ರಾಗಾದಿ ಅಭಾವಚತುಷ್ಟಯದಿಂದ ಕೂಡದ, ಸತ್, ಚಿತ್, ಆನಂದ ನಿತ್ಯ ಪರಿಪೂರ್ಣವೆಂಬ ಪಂಚ ಲಕ್ಷಣಗಳುಳ್ಳ ಪರಬ್ರಹ್ಮ ಸ್ವರೂಪವೆ ನೀನಿರುವಿ.

**ಅದು ಸಚ್ಚಿದಾನಂದವದು ನಿತ್ಯ ಪರಿಪೂರ್ಣ ।**
**ವದು ತಾನಖಂಡೈಕರಸರೂಪು ॥**
**ಅದು ಶುದ್ಧವಿದ್ಯೆಗೆ ಗೋಚರವೆನಿಪಾತ್ಮ ।**
**ವದು ಪಂಚಾವಯವದಿಂದೆಸೆವುದು ॥ 1 ॥**

ಆತ್ಮಸ್ವರೂಪವು ಸಚ್ಚಿದಾನಂದ ನಿತ್ಯ ಪರಿಪೂರ್ಣವೆಂಬ ಪಂಚಲಕ್ಷಣ ಗಳುಳ್ಳದ್ದಾಗಿದೆ. ಅದು ಅಖಂಡವೂ ಏಕರಸವೂ ಆಗಿದ್ದು ಶುದ್ಧವಿದ್ಯೆಯಿಂದ ಮಾತ್ರ, ಅನುಭವಕ್ಕೆ ಬರುವದಾಗಿದೆ.

**ಮರೆದೆ ನಾನೆನ್ನನೆಂಬರಿವನಾ ಮರವೆಯ ।**
**ನರಿವಾತನುಂಟೆಂಬವನು ತಾನೆ ॥**
**ಅರಿವುದರಿಂದೆ ಸತ್ವದಸಿದ್ಧಿ ತನಗೆಂದು ।**
**ನಿರಿಗುರುಳಬಲೆ ನೀನರಿವುದು ॥ 2 ॥**

ಗುಂಗುರುಗೂದಲುಳ್ಳ ಮೈತ್ರೇಯಿ, ನನ್ನನ್ನು ನಾನು ಮರೆತೆನೆಂಬ ಅರಿವನ್ನು ಆ ಮರವೆಯನ್ನು ಅರಿವಾತನೊಬ್ಬನುಂಟು ಎಂಬುದನ್ನು ತಾನು ಎಂದರೆ ಇದ್ದವನೆ ಅರಿಯುವದರಿಂದ ತನಗೆ ತ್ರಿಕಾಲಾಬಾಧಿತವಾದ ಸದ್ರೂಪು ಸಿದ್ಧವಾಯಿತೆಂದು ನೀನು ತಿಳಿಯಬೇಕು.

**ತನು ತಾನಲ್ಲೆಂದರಿದನಿತರೊಳ್ಳಿಂದ ಚೇ ।**
**ತನವೆ ತಾನಲ್ಲವೆಂದರಿದಂದು ॥**
**ತನಗೆ ಚಿತ್ವದಸಿದ್ಧಿಯದರಿಂದೆ ಘಟಿಸಿತೆಂ ।**
**ದಿನಿಯಳೆ ಮತಿಮುಟ್ಟತಿಳಿ ನೀನು ॥ 3 ॥**

ಪ್ರಿಯತಮೆ, ಈ ಶರೀರವು ತಾನಲ್ಲವೆಂದು ತಿಳಿದಿರುವ ಅರಿವು ಕೂಡ ತಾನಲ್ಲವೆಂದು ತಿಳಿದಾಗಲೇ ತನಗೆ ಚಿದ್ರೂಪು (ತಾನು ಅರುಹಿಸಿಕೊಳ್ಳದೆ ಎಲ್ಲವನ್ನು ಬೆಳಗುವ ಅರಿವು) ಸಿದ್ಧಿಯಾಯಿತೆಂದು ನೀನು ನಿಶ್ಚಯಿಸು (ತಿಳಿದದ್ದನ್ನು ತಿಳಿಯುವ ತಿಳುವಳಿಕೆ ತಾನಾಗಿ ಉಳಿಯಬೇಕೆಂಬ ಭಾವ) ಇದನು ಮತಿಮುಟ್ಟಿ ತಿಳಿ.

ನಿರವಯವನು ನಿರುಪಾಧಿಕ ನಿಸ್ಸಂಗ।
ನಿರಘನೆನಿಪ ನಿಜಾತ್ಮನು ತಾನು ॥
ಪೊರೆಯನೆಲ್ಲಿಯುಮಾವತೆರದಿಂದ ನೋಯನೆಂ।
ದಿರೆ ಸುಖಪದವದು ತನಗಕ್ಕು ॥ 4 ॥

ನಿರವಯವನೂ, ಉಪಾಧಿರಹಿತನೂ, ನಿಸ್ಸಂಗನೂ, ಪರಮಾತ್ಮನೂ ಆದ ತಾನು ಯಾರಿಂದಲೂ ರಕ್ಷಿಸಲ್ಪಡುವದಿಲ್ಲ (ಕಿಂತು ತಾನೆ ಎಲ್ಲರನ್ನು ರಕ್ಷಿಸುವನು) ಮತ್ತು ಯಾವರೀತಿಯಿಂದಲೂ ಯಾರಿಂದಲೂ ನೋಯನು ಅಂದರೆ ದುಃಖರಹಿತನು ಎಂದು ತಿಳಿದರೆ ತನಗೆ ಆನಂದಪದ ಸಿದ್ಧಿಸಿದಂತಾಯಿತು.

ಪುಸಿಯಾಗಿ ಕೆಡುವುದೀ ತ್ರಿಜಗವೆಲ್ಲವು ತಾನೆ।
ಪುಸಿಯಲ್ಲವಾಗಿ ಕೆಡುವನಲ್ಲ ॥
ಸಸಿನವಿದೆಂದು ಭಾವಿಸೆ ನಿತ್ಯ ಪದಸಿದ್ಧಿ।
ಬಿಸಜಾಕ್ಷಿ ತನಗೆಂದು ತಿಳಿವುದು ॥ 5 ॥

ಕಮಲಸದೃಶ ನೇತ್ರವುಳ್ಳ ಮೈತ್ರೇಯಿ, ಈ ಮೂರು ಲೋಕಗಳು ಪುಸಿದೋರಿಕೆಯಾದ್ದರಿಂದ ಅವೆಲ್ಲ ಕೆಡುವವು. ತ್ರಿಕಾಲಾಬಾಧಿತ ಸತ್ಯಸ್ವರೂಪನಾದ್ದರಿಂದ ತಾನು ಮಾತ್ರ ಕೆಡುವದಿಲ್ಲ, ಇದು ಸತ್ಯವೆಂದು ನಿಶ್ಚಯಿಸಿದರೆ ಚತುರ್ವಿಧ ಅಭಾವರಹಿತ ನಿತ್ಯಪದ ಸಿದ್ಧಿ ತನಗಾಯಿತೆಂದು ನೀನು ತಿಳಿದುಕೊಳ್ಳಬೇಕು.

ಸುದತಿ ಕೇಳಿಂತು ತೋರುವ ಸರ್ವಭಾವವೆಂ।
ಬಿದು ತೋರದಳಿದು ಬೇರುಳಿದೇನು ॥
ಉದಿಸದೆ ಬರಿಯರಿವಾಗಿ ನಿಂದುದು ಪೂರ್ಣ।
ಪದಸಿದ್ಧಿ ತನಗಿದು ಶ್ರುತಿಸಿದ್ಧ ॥ 6 ॥

ಸುಂದರವಾದ ದಂತವುಳ್ಳವಳೆ ಕೇಳು, ಈ ಪ್ರಕಾರ ತೋರತಕ್ಕ ಸರ್ವಭಾವಗಳು ನಾಶವಾಗಿ ಬೇರೆ ಏನೊಂದು ಭಾವನೆ ಹುಟ್ಟದೆ ಕೇವಲ ಅರಿವಿನ ಇರವಾಗಿ ತಾನು ಉಳಿದಾಗ ದೇಶಕಾಲಾದಿ ಪರಿಚ್ಛೇದ ರಹಿತವಾದ ಪೂರ್ಣಪದ ಸಿದ್ಧಿಯಾಯಿತು. ಇದು ಶ್ರುತಿಗಳ ಸಿದ್ಧಾಂತವಾಗಿದೆ.

ಭ್ರಾಂತನ ವಿಷಯವ್ಯೆದಿವು ತಾನೆ ಚಿನ್ಮಾತ್ರ।
ನಂತಾಗಿ ಸರ್ವಜ್ಞನೆನಿಸುವ ॥
ಸಂತತಾಖಂಡೈಕರಸರೂಪನಾದಾತ್ಮ।
ನಂ ತಿಳಿ ಸತ್ಯಾನುಭವದಿಂದ ॥ 7 ॥

ಈ ಪ್ರಕಾರವಾಗಿ ಹೇಳಿದ ಐದು ಲಕ್ಷಣಗಳೂ ಕೂಡ ಕಲ್ಪಿತ ಜೀವನಲ್ಲಿ ತೋರಿದ ಭ್ರಾಂತನ ವಿಷಯಗಳೇ ಆಗಿವೆ. ತಾನು ಚಿನ್ಮಾತ್ರನು ಅಂದರೆ ಚೈತನ್ಯಸ್ವರೂಪನು.

ಆದ್ದರಿಂದ ಸ್ವಯಂಪ್ರಕಾರನೂ, ನಿರಂತರನೂ, ಅಖಂಡನೂ, ಏಕರಸರೂಪನೂ ಆದ ಆತ್ಮನೆ ತಾನೆಂದು ಸತ್ಯಾನುಭವದಿಂದ ತಿಳಿಯತಕ್ಕದ್ದು. ಹೀಗೆ ತಿಳಿದಾಗ ತಾನೆ ಸರ್ವಜ್ಞನೆನಿಸುವನು.

– ಇತಿ ಆತ್ಮನಿಗೆ ಸದಾದಿ ತಟಸ್ಥ ಲಕ್ಷಣ ನಿರೂಪಣೆ –

## 7ನೇ ಸೂತ್ರ

ಮರವೆಪಿಂಗಿದೊಡಾತ್ಮವಿದ್ಯೆಯಿಂದಖಿಳವ ।
ನರಿವ ಸದಾದಿರೂಪನುತಾನೆ ॥

ಮರವೆ ನಾಶವಾಗಿ ಸ್ವಸ್ವರೂಪಜ್ಞಾನವು ತನಗಾಗಲು ತಾನು ಅರಿಸಿಕೊಳ್ಳದೆ ಎಲ್ಲವನ್ನೂ ಬೆಳಗುವ ಸಚ್ಚಿದಾನಂದ ನಿತ್ಯ ಪರಿಪೂರ್ಣರೂಪದಿಂದ ಸಾಕ್ಷಾತ್ ಬ್ರಹ್ಮಸ್ವರೂಪನೇ ಇರುವನು.

**ಪರಮಾತ್ಮಕನೆ ಪಂಚಪದದಿಂದೆ ಭರಿತನಾ।**
**ಪರಿಯಲ್ಲದೈದು ಮಾಯಾರೂಪು ॥**
**ಪರಿಕಿಸಲ್ಮಿಥ್ಯೆಯದಾಗಿ ತಾನವರೊಡ।**
**ವೆರೆಯನೆಂದೆಂದು ನಂಬೆಲೆ ಕಾಂತೆ ॥ 1 ॥**

ಮಡದಿಯೆ, ಪರಮಾತ್ಮನು ಸಚ್ಚಿದಾನಂದ ನಿತ್ಯ ಪರಿಪೂರ್ಣನೆಂಬ ಪಂಚಲಕ್ಷಣಾತ್ಮಕನಿದ್ದಾನೆ. ಆದರೆ ಮಾಯೆಯು ಈ ಲಕ್ಷಣಗಳಿಗೆ ವಿಲಕ್ಷಣಗಳಾದ ಅಸತ್, ಜಡ, ದುಃಖರೂಪ ಅನಿತ್ಯ ಪರಿಚ್ಛಿನ್ನವೆಂಬ ಐದು ಲಕ್ಷಣಗಳುಳ್ಳದ್ದಾಗಿ ಮಿಥ್ಯೆಯಾಗಿರುವದೆಂದು ಸಿದ್ಧವಾಗುವದು. ಆದ್ದರಿಂದ ಇಲ್ಲದ ಮಾಯೆಯೊಡನೆ ನೀನೆಂತು ಬೆರೆಯಬಲ್ಲೆ? ಇದನ್ನು ನೀನು ಚನ್ನಾಗಿ ನಂಬು.

**ಸತ್ತಲ್ಲವಿದು ಜಾಡ್ಯವಹುದು ಬಾಧಾತ್ಮತೆ।**
**ವೆತ್ತುದು ನಿತ್ಯವೆಂದೆನಿಸದು ॥**
**ಮತ್ತೆ ಖಂಡಿತವಿದನ್ನತವೆಂದು ಮಾಯೆ ತೋ।**
**ರುತ್ತಿರದಾಗಿ ಮೋಹಕವಲ್ಲ ॥ 2 ॥**

ಮಾಯೆಯು ಅಸತ್ತು ಜಡ ದುಃಖರೂಪ ಅನಿತ್ಯ ಮತ್ತು ಖಂಡಿತವಾಗಿದೆ. ಹೀಗಿರುವ ಮಾಯೆಯು ಅಜ್ಞಾನಿಗಳಿಗೆ ಅನೃತ (ಪುಸಿದೋರಿಕೆ)ವೆಂದು ತೋರದೆ ಮೋಹಕವಾಗಿದೆ. ಆದರೆ ಆತ್ಮಜ್ಞಾನಿಗಳಿಗೆ ಈ ಮಾಯೆಯು ಮೋಹವನ್ನು ಉಂಟು ಮಾಡಲಾರದು.

ತಾನಿಲ್ಲದುದು ತೋರಿತೆಂಬ ನುಡಿಯೆ ಮಿಥ್ಯೆ।
ತಾನಿದನರಿದು ನಿಂದೊಡೆ ತನ್ನ॥
ತಾನೆ ಸಿದ್ದಂಗಳು ತನಗೆ ನಿರ್ಮಳ ಸಚ್ಚಿ।
ದಾನಂದ ನಿತ್ಯ ಪೂರ್ಣತೆಗಳು ॥ 3 ॥

ಯಾವದು ತ್ರಿಕಾಲದಲ್ಲಿ ಇಲ್ಲವೋ ಅದು ತೋರಿತೆಂಬ ನುಡಿಯೇ ಅಸಂಗತವಾದದ್ದಾಗಿದೆ. ಈ ಪ್ರಕಾರ ತಾನು ನಿಶ್ಚಯವಾಗಿ ತಿಳಿದು ನೆಲೆಗೊಂಡು ನಿಲ್ಲಬೇಕು. ಹಾಗಾದಾಗಲೇ ತನಗೆ ನಿರ್ಮಲತೆ, ಸಚ್ಚಿದಾನಂದತ್ವ ನಿತ್ಯತ್ವ ಪರಿಪೂರ್ಣತೆಗಳು ಸಹಜವೆ ಸಿದ್ಧವಿರುವವು. (ಅವು ಕರ್ಮಜನ್ಯವಲ್ಲವೆಂಬ ಭಾವವು)

ಇಲ್ಲದೆ ಚಿನ್ಮಯನಲ್ಲದೆ ಸುಖರೂಪ।
ನಲ್ಲದೆ ನಿತ್ಯನಲ್ಲದೆ ವಿಭು॥
ವಲ್ಲದೊಡಂಗನೆ ಬೇರೊಂದು ಭಾವನೆ।
ಯಲ್ಲಿ ಸರ್ವಜ್ಞತೆ ಘಟಿಸದು ॥ 4 ॥

ಹೇ ಸ್ತ್ರೀಯಳೆ, ತನಗೆ ಸರ್ವಜ್ಞತೆ ಘಟಿಸಬೇಕಾದರೆ ತಾನು ತ್ರಿಕಾಲಾಬಾಧಿತನಾಗಿ, ಶುದ್ಧ ಚೈತನ್ಯರೂಪನಾಗಿ, ದುಃಖ ಮಿಶ್ರಿತವಲ್ಲದ ಕೇವಲ ಸುಖಸ್ವರೂಪನಾಗಿ, ಅಭಾವ ಚತುಷ್ಟಯ ರಹಿತವಾದ ನಿತ್ಯಪದವಾಗಿ, ಕಾಲದೇಶಾದಿ ಪರಿಚ್ಛಿನ್ನತೆ ಇಲ್ಲದೆ ಪರಿಪೂರ್ಣಪದದಲ್ಲಿ ನೆಲೆಯಾಗಿ ನಿಲ್ಲಬೇಕು. ಇವುಗಳೆಲ್ಲ ಇಲ್ಲವಾದರೆ ಬೇರೆ ಯಾವ ಭಾವದಲ್ಲಿಯೂ ಸರ್ವಜ್ಞತೆ ಸಂಭವಿಸಲಾರದು.

ಇಲ್ಲದನಿಗೆ ತೋರ್ಕೆ ಘಟಿಪುದೆ ಚಿನ್ಮಯ।
ನಲ್ಲದೊಡರಿವನೆ ಸುಖಮೂರ್ತಿ ॥
ಯಲ್ಲದವನು ಸರ್ವವಿಷಯಕ್ಕೆ ಹಿತನೆ ಸಂ।
ಫುಲ್ಲ ಪಂಕರುಹಸನ್ನಿಭನೇತ್ರೆ ॥ 5 ॥

ನಿತ್ಯನಲ್ಲದವ ನನಿತ್ಯವನರಿಯನು।
ನಿತ್ಯನಲ್ಲದೆ ತೋರಲರಿಯನು॥
ಅತ್ಯರ್ಥಮಾಗಿ ಪೂರ್ಣನಿಗಲ್ಲದಿಂತಿದು।
ಸತ್ಯವಾತ್ಮಂಗೈದು ಪದಸಿದ್ಧಿ॥ 6 ॥

ಕಮಲಸದೃಶ ನೇತ್ರವುಳ್ಳ ಮೈತ್ರೇಯಿ, ಇಲ್ಲದವನಿಗೆ ತೋರಿಕೆ ಪ್ರಾಪ್ತವಾಗದು. ಚೇತನ ಪುರುಷನಲ್ಲದವನು ಅರಿಯಲಾರನು. ಸುಖರೂಪನಲ್ಲದಿದ್ದರೆ ಸರ್ವರಿಗೂ ಪ್ರೇಮಾಸ್ಪದನಾಗನು. ನಿತ್ಯನಾದವನೆ ಅನಿತ್ಯವನ್ನು ಅರಿಯಬಲ್ಲನು ಮತ್ತು ನಾಮರೂಪದಿಂದ ತೋರಬಲ್ಲನು. ನಿಶ್ಚಯವಾಗಿ ಪೂರ್ಣಾತ್ಮನಾದ ತನಗೆ ಮಾತ್ರ ಸದಾದಿ ಪಂಚ ಲಕ್ಷಣಗಳು ಸಿದ್ಧಿಸುವವು. ಈ ಪ್ರಕಾರ ಆತ್ಮನಿಗೆ ಅಂದರೆ ತನಗೆ ಸಚ್ಚಿದಾನಂದ

ನಿತ್ಯ ಪರಿಪೂರ್ಣತೆಗಳೆಂಬ ಪಂಚ ಲಕ್ಷಣಗಳು ಸ್ವತಃ ಸಿದ್ಧವಾಗಿವೆ. ಇದು ಸತ್ಯವೆಂದು ತಿಳಿಯಬೇಕು.

ತಿಳಿ ಶೈತ್ಯ ಕಾಂತಿ ಧವಳ ನಿರ್ಮಳಾನಂದ।
ಕುಳಮಿವು ಬೆಳದಿಂಗಳಿರವೆಂಬ॥
ವೊಲು ಸಚ್ಚಿದಾದಿಗಳಾತ್ಮರೂಪವು ನೀರೆ।
ಬಳಿಕೆನಲಹುದೆ ತದ್ಗುಣವೆಂದು ॥ 7 ॥

ನಿರ್ಮಳ ವೃತ್ತಿಯುಳ್ಳ ಮೈತ್ರೇಯಿ, ಶೀತ ಕಾಂತಿ, ಶುಭ್ರತೆ, ನಿರ್ಮಳತೆ, ಆನಂದ ಇವೆಲ್ಲವು ಬೆಳದಿಂಗಳಿನ ಸ್ವರೂಪವೆ ಹೇಗೋ ಹಾಗೆ ಸಚ್ಚಿದಾನಂದ ನಿತ್ಯ ಪರಿಪೂರ್ಣತೆಗಳು ಆತ್ಮನ ಸ್ವರೂಪವೇ ಆಗಿವೆ. ಪರಂತು ಆತ್ಮನ ಗುಣಗಳಲ್ಲ ಎಂದು ತಿಳಿಯಬೇಕು.

– ಇತಿ ಬ್ರಹ್ಮ ಸ್ವರೂಪ ಲಕ್ಷಣ ನಿರೂಪಣೆ –

## 8ನೇ ಸೂತ್ರ

ವರಜಾಗ್ರದಾದಿನಾಲ್ಕೆನಿಪವಸ್ಥೆಗಳಾತ್ಮ।
ನಿರವೆ ತುರ್ಯಾತೀತವದುನೋಡು ॥

ವರಜಾಗ್ರ, ವರಸ್ವಪ್ನ, ವರಸುಪ್ತಿ ಮತ್ತು ವರತುರ್ಯಗಳೆಂಬ ಇವು ನಾಲ್ಕು ಅವಸ್ಥೆಗಳೇ ಇರುತ್ತವೆ. ಈ ಎಲ್ಲ ಅವಸ್ಥೆಗಳನ್ನು ಮೀರಿ ತುರ್ಯಾತೀತ ಸ್ಥಿತಿಯು ಮಾತ್ರ ಆತ್ಮನ (ಅಂದರೆ ತನ್ನ) ನಿಜಸ್ವರೂಪವಾಗಿದೆ ಎಂದು ತಿಳಿಯಬೇಕು.

ಇಂತು ಪಂಚಾವಯವಂಗಳೊಡನೆ ಚೇತ।
ನಾಂತರ್ಮುಖತ್ವವೆಂದೆನಿಸುವ॥
ಭ್ರಾಂತಿಪೊರ್ದದ ನಾಲ್ಕು ವಿಧದವಸ್ಥೆಗಳನೋ।
ರಂತೆ ಪೇಳುವೆನಾಲಿಪುದು ನೀರೆ॥ 1 ॥

ಪರಿಶುದ್ಧ ಹೃದಯಳಾದ ಮೈತ್ರೇಯಿ, ಬುದ್ಧಿವೃತ್ತಿಯು ಅಂತರ್ಮುಖವಾದಾಗ ಹಂಭ್ರಾಂತಿ ನಿರಸನವಾಗಿ ಸಚ್ಚಿದಾನಂದ ನಿತ್ಯ ಪರಿಪೂರ್ಣವೆಂಬ ಪಂಚಲಕ್ಷಣಗಳಿಂದ ಕೂಡಿ ತೋರುವ ನಾಲ್ಕು ಪ್ರಕಾರದ ಎಚ್ಚರದವಸ್ಥೆಗಳನ್ನು ನಿನಗೆ ತಿಳಿಯುವ ಹಾಗೆ ಹೇಳುವೆನು ಕೇಳು.

ಅರಿಯೆ ನಾನೆನ್ನನೆಂಬರಿವು ತಾನೆಂದದ।
ನುರೆ ಮರೆಯದೆ ಸತ್ಯಗತಿಯಿಂದೆ॥
ಅರಿಯೆ ಜಾಗರಣವದೆನಿಪುದೆಂದಬಲೆ ನೀ।
ನರಿ ಚೇತನಾಂತರ ಮುಖದೊಳು॥ 2 ॥

ಮೈತ್ರೇಯಿ, ನನ್ನನ್ನು ನಾನರಿಯೆನು ಎಂಬ ಅಜ್ಞಾನವನ್ನು ತಿಳಿಯುವ ಅರಿವೆ ತಾನೆಂದು ಚೆನ್ನಾಗಿ ಅರಿದು ಅದನ್ನು ಮರೆಯದೆ ಎಡಬಿಡದೆ ಆ ಅರುವಿನಲ್ಲಿ ಇರುತ್ತಿರಲು, ಅದು ಅಂತರ್ಮುಖ ವೃತ್ತಿಯಲ್ಲಿ ತೋರಿದ ವರಜಾಗ್ರದವಸ್ಥೆ ಎಂದು ತಿಳಿಯುತಕ್ಕದ್ದು.

ಜಡಭಾವವನು ಪಿಂಗಿದರುವಿನೆಚ್ಚರಿನೊಳ-।
ಜಡ ದೇಹಿಯಾಗಿ ಕಾಣಪುದದು ॥
ಕೆಡಲುಳ್ಳದದರಿಂದೆ ಪುಸಿಯೆಂದು ತಾನರಿ।
ದೊಡೆ ಕನಸಾಂತರಮುಖದೊಳು ॥ 3 ॥

ಶರೀರ ನಾನೆಂಬ ಜಡಬುದ್ಧಿ ನಾಶವಾಗಲು ಅರುವಿನ ಎಚ್ಚರ ಅರ್ಥಾತ್ ವರಜಾಗ್ರದಲ್ಲಿ ಅರಿವು ಮೂರ್ತಿವತ್ ತೋರುವದರಿಂದ ಅದು ಕೂಡ ನಾಶವಾಗುವದು. ಆದ್ದರಿಂದ ಅದು ಮಿಥ್ಯೆಯೆಂದು ತಿಳಿದರೆ, ಅದು ವರಸ್ವಪ್ನ ಅಂದರೆ ಎಚ್ಚರದಲ್ಲಿಯ ಕನಸು ಎಂದು ಹೇಳಿಸಿಕೊಳ್ಳುವದು.

ಮರವೆಯಿಂದೆಚ್ಚರಾದರಿವನು ಪುಸಿಯೆನ।
ಲರಿ ಜಾಗರಣ ಕನಸುಗಳವು ॥
ನೆರೆ ತೋರದಾನಂದ ಪದವದು ಸುಪ್ತಿಯೆಂ।
ದುರೆ ನಂಬು ನೀನಂಬುಜಾನನೆ ॥ 4 ॥

ಕಮಲಮುಖಿಯೆ, ತನ್ನ ಸ್ವರೂಪದ ಅಜ್ಞಾನವು ನಾಶವಾಗಲು ಅರಿವಿನ ಎಚ್ಚರವು ತೋರುವದು. ಅದು ದೃಶ್ಯವಾಗಿರುವದರಿಂದ ಅದು ಸಹ ಮಿಥ್ಯೆಯೆಂದು ತಿಳಿದಾಗ ಕ್ರಮವಾಗಿ ಮೇಲೆ ವಿವರಿಸಿದ ವರಜಾಗ್ರ ಮತ್ತು ವರಸ್ವಪ್ನಗಳು ಇವು ಕಿಂಚಿತ್ತೂ ತೋರದ ಆನಂದ ಮಾತ್ರ ಇರುವದು. ಈ ಆನಂದ ಪದವೆ ವರಸುಪ್ತಿಯೆಂದು ಚನ್ನಾಗಿ ನಂಬಬೇಕು.

ನೆನಸು ಕನಸು ನಿದ್ರೆಯೆನಿಪವಸ್ಥೆಗಳು ಚೇ-।
ತನ ಭಾವ ಭೇದಗಳಿವು ತಾವು ॥
ಜನಿತಮಾಗಿಯೆ ಪುಸಿ ತಾನೆ ನಿತ್ಯಾತ್ಮನೆಂ।
ದೆನೆ ತುರ್ಯವಂತರದೊಳಗದು ॥ 5 ॥

ಅರಿವಿನ ಎಚ್ಚರದಲ್ಲಿ ತೋರಿದ ಈ ಜಾಗ್ರ, ಸ್ವಪ್ನ ಹಾಗೂ ಸುಪ್ತಿಗಳೆಂಬ ಅವಸ್ಥೆಗಳು ಬುದ್ಧಿಯ ಭೇದಗಳಾಗಿವೆ. ಇವು ಜನಿಸಿ ತೋರುವದರಿಂದ ಅನಿತ್ಯವಾಗಿವೆ. ತಾನು ಮಾತ್ರ ನಿತ್ಯನಾದ ಆತ್ಮನೆಂಬುದು ತಿಳಿಯಲು ಅದು ಅಂತರ್ಮುಖ ವೃತ್ತಿಗೆ ಗೋಚರಿಸುವ ನಾಲ್ಕನೆಯ ತುರ್ಯ ಅವಸ್ಥೆಯೆನಿಸುವದು.

ಅದು ಸಚ್ಚಿದಾನಂದವದು ನಿತ್ಯವೆಂಬ ಭಾ।
ವದ ತೋರ್ಕೆಯುಡಗಿ ನಿಂದರಿವದು।
ಸದಮಲವೆನಿಪ ತುರ್ಯಾತೀತವದು ನಿಜ।
ಪದವಾದ ಪೂರ್ಣಾದ್ವಯಾತ್ಮನು ॥ 6 ॥

ತನ್ನ ಸ್ವರೂಪವು ಸಚ್ಚಿದಾನಂದ ನಿತ್ಯ ಪರಿಪೂರ್ಣವಿದೆ ಎಂಬ ಸದ್ಭಾವವದ ಅನಿಸಿಕೆಯು ತುರ್ಯಾವಸ್ಥೆಯೆನಿಸುವದು. ಈ ಅನಿಸಿಕೆಯು ಸಹ ಅಳಿದುಳಿದ ಇರವೆ ತುರ್ಯಾತೀತವು. ಅದು ಸದಮಳ ನಿಜಸ್ವರೂಪವಾದ ಪೂರ್ಣಅದ್ವಿತೀಯ ಆತ್ಮಪದವಾಗಿದೆ (ಅದೇ ನೀನಿರುವಿ).

ನಾನೆಂಬುದಿಲ್ಲ ವನ್ಯತೆಗಾಣಲಿಲ್ಲ ವಿ।
ನ್ನೇನೊಂದನುಸುರಲಿಕ್ಕೆಡೆಯಿಲ್ಲ॥
ಮಾನಮೇಯಾದಿಗಳಿಲ್ಲ ವಂತೆಂಬು।
ದೇನುಮಿಲ್ಲೆಂದೆಂದು ಪರಿಪೂರ್ಣ ॥ 7 ॥

ಎರಡಿಲ್ಲದಾ ಪೂರ್ಣಪದದಲ್ಲಿ ನಾನೆಂಬುದಿಲ್ಲವಾಗಿ ಇನ್ನೊಂದು ವಿಷಯವು ತೋರಲಿಲ್ಲ, (ಯಾಕೆಂದರೆ ತಾನಿದ್ದರೆ ಜಗವಿದೆ) ಅದ್ವಯವಾಗಿರುವದರಿಂದ ತನಗನ್ಯವಾಗಿ ಮತ್ತೊಂದಿಲ್ಲ, ಇನ್ನೊಂದೇನನು ನುಡಿಯಲು ಆಸ್ಪದವಿಲ್ಲ, ಮಾನಮೇಯಾದಿ ತ್ರಿಪುಟಿಗಳಿಲ್ಲ, ಹಾಗೆ ಹೀಗೆ ಎಂಬುದೇನೂ ಇಲ್ಲದೆ ನಿನ್ನ ಸ್ವರೂಪವು ಮಾತು ಮನಗಳಿಗೆ ಮೀರಿರುವದು. ಅದು (ನಿನ್ನ ಸ್ವರೂಪವು) ಎಂದೆಂದೂ ಪರಿಪೂರ್ಣವಾಗಿರುವದು.

ಕಡೆಯಿಲ್ಲ ಮೊದಲಿಲ್ಲ ತಡೆ ಬಿಡುಗಡೆಯಿಲ್ಲ।
ಪಡಿಯಿಲ್ಲ ಪಟ್ಟಾಂತರವೆಯಿಲ್ಲ॥
ನುಡಿಯಿಲ್ಲ ನೆನಹಿಲ್ಲವರಿವಿನೆಚ್ಚರು ದೋರ।
ಲೆಡೆಯಿಲ್ಲವೆಂದೆಂದು ಪರಿಪೂರ್ಣ ॥ 8 ॥

ಅದು ಅನಾದಿ ಅನಂತವಾಗಿದೆ. ಬಂಧ ಮೋಕ್ಷಗಳಿಗೆ ಒಳಗಾಗದೆ ಸರ್ವ ಸ್ವತಂತ್ರವಿದೆ. ಅಪ್ರತಿಮವಾಗಿ ಅಚಲವಾಗಿದೆ. ಅಲ್ಲಿ ಮಾತು ಮನಗಳಿಲ್ಲ, ವ್ಯವಹಾರಿಕ ಅರಿವು ತೋರಿಲಿಕ್ಕೂ ಅಸ್ಪದವಿಲ್ಲದೆ ಅದು ಎಂದೆಂದೂ ಪರಿಪೂರ್ಣವಿದೆ.

ಅರಿವಿಲ್ಲ ಮರವೆಯಿಲ್ಲರಿವುಮರವೆಯಿಲ್ಲ।
ಹರಿಮುರಿಯಿಲ್ಲೊಂದು ಕುರುಹಿಲ್ಲ ॥
ಕರೆಮರೆಯಿಲ್ಲ ವಾಸನೆಯಿಲ್ಲವರಿ ಬಚ್ಚ।
ಬರಿಯರಿವೆಂದೆಂದು ಪರಿಪೂರ್ಣ ॥ 9 ॥

ಅಲ್ಲಿ ಅರಿವು ಇಲ್ಲ ಮತ್ತು ಮರವೆಯಿಲ್ಲ, ಅರಿವು ಮರವೆಗಳ ಮಿಶ್ರಣವೂ ಇಲ್ಲ, ಅಲ್ಲಿ ಹರಿಯುವಿಕೆ ಮತ್ತು ಮುರಿಯುವಿಕೆ (ತುಣುಕಾಗುವದು, ತುಂಡಾಗುವದು) ಇಲ್ಲ, ಅದು ಸಾಕ್ಷಾತ್ ನಿರ್ಲಕ್ಷಣವಾಗಿದೆ. ಅಲ್ಲಿ ಅಜ್ಞಾನ ಆವರಣಗಳಿಲ್ಲ, ಅದು ನಿರ್ವಾಸನಾಪದವಿದ್ದು ಕೇವಲ ಚಿತ್ ಸ್ವರೂಪವಾಗಿದೆ. ಆದ್ದರಿಂದ ದೇಶ ಕಾಲಾದಿ ಪರಿಚ್ಛೇದತ್ರಯಗಳಿಲ್ಲದೆ ಎಂದೆಂದೂ ಪರಿಪೂರ್ಣವಿದೆ. ಅದೇ ನೀನಿರುವಿ.

ಇದು ಪರಮರಹಸ್ಯ ವಿದನರಿದಾತನೆ।
ಸದಮಳ ಯೋಗಿಯವನು ತಾನೆ॥
ಪುದಿಯದೀ ಸಕಲ ಭಾವದೊಳು ವರ್ತಿಪನೆಲೆ।
ಚದುರೆ ಮೈತ್ರೇಯಿ ನೀನಿದನಂಬು॥ 10 ॥

ಎಲೆ ಚತುರಳಾದ ಮೈತ್ರೇಯಿ, ಈ ವಿಷಯವು ಬಹಳ ರಹಸ್ಯಮಯವಾಗಿದೆ. ಇದನ್ನು ತಿಳಿಯುವವನು ಸತ್ಯಸ್ವರೂಪನಾದ ನಿರ್ಮಲ ಬ್ರಹ್ಮಜ್ಞಾನಿಯೆನಿಸುವನು. ಅವನು ಯಾವುದಕ್ಕೂ ಸಂಬಂಧ ಪಡದೆ ನಿರ್ಲಿಪ್ತನಾಗಿ ನಿರಹಂಭಾವದಿಂದ (ತಾನೆ ಪುದಿಯದೆ) ಈ ಎಲ್ಲ ಭಾವನೆಗಳನ್ನು ಹೊಂದಿಯೂ ಹೊಂದದಂತೆ ಸಂಚರಿಸುವನು. ಇದನ್ನು ನೀನು ನಂಬತಕ್ಕದ್ದು. ಇವನೆ ಜೀವನ್ಮುಕ್ತನು, ಆತ್ಮಲೀಲಾವಿಲಾಸಿಯಾಗಿ ಸಂಚರಿಸುವನು.

– ಇತಿ ಜೀವನ್ಮುಕ್ತಿ ನಿರೂಪಣೆ –

## 9ನೇ ಸೂತ್ರ

ಪ್ರಾರಬ್ಧವಶದಿಂದೆ ಮಾಯಾತ್ಮಜೀವಂಗೆ ।
ಶಾರೀರಭೋಗವರಿವಿಗಿಲ್ಲ ॥

ಮಾಯಾಶರೀರ ಹೊಂದಿರುವ ತುರಿಯ ಜೀವನಿಗೆ ಅರ್ಥಾತ್ ವರಯೋಗಿಗೆ ಪ್ರಾರಬ್ಧವಶದಿಂದ ಶರೀರಭೋಗಗಳು ಇದ್ದಂತೆ ಕಂಡರೂ, ಅರಿವು ತಾನಾದವನಿಗೆ ಅವು ಇರುವದಿಲ್ಲ, ನೋಡುವವನಿಗೆ ಮಾತ್ರ ಭೋಗಗಳು ತೋರುವವು. ಭೋಗವಿರುವದು (ಇನ್ನೊಂದು ಅರ್ಥದಲ್ಲಿ) ಕಲ್ಪಿತ ಪುರುಷನಿಗೆ, ಅರಿವಿಗೆ ಇಲ್ಲ.

ವರಯೋಗಿಗೆಂತು ತದ್ವ್ಯವಹಾರವೆಂಬುದು।
ದೊರೆವುದು ಪರಿಪೂರ್ಣರೂಪಂಗೆ॥
ಕರಚೋದ್ಯವೆನಗಿದು ಮುನಿಪತಿ ನೀನೆ ವಿ।
ಸ್ತರದಿಂದೆ ತಿಳುಪೆನಗಲಸದೆ॥ 1 ॥
ಎನೆ ಯಾಜ್ಞ್ಯವಲ್ಕ್ಯ ತನ್ನಿನಿಯಳ್ಗೆ ನಿಜವೆನಿ।
ಪನುಭವದಿಂದೆ ಯೋಗೀಶಂಗೆ॥
ಜನಿಪ ಮಾಯಾ ವ್ಯಾವಹಾರಿಕ ಭೋಗವ।
ಪ್ಪನುವನಿಂತರುಪಿದನೊಲವಿಂದೆ॥ 2 ॥

ಶರೀರ ಭಾವವಿಲ್ಲದ, ತನ್ನ ಹೊರ್ತು ಮತ್ತೊಂದನ್ನು ಅರಿಯದ ಪರಿಪೂರ್ಣರೂಪ ಬ್ರಹ್ಮಜ್ಞಾನಿಗೆ ಇಂದ್ರಿಯ ಭೋಗವು ಪ್ರಾಪ್ತವಾಗುವದೆಂಬ ಮಾತು ನನಗೆ ಬಹು ವಿಚಿತ್ರವೆನಿಸಿ ತೋರುತ್ತದೆ. ಮುನಿಶ್ರೇಷ್ಠನೇ, ನೀನೆ ಇದನ್ನು ನನಗೆ

ಸವಿಸ್ತಾರವಾಗಿ ಬೇಸರಪಟ್ಟುಕೊಳ್ಳದೆ ತಿಳಿಸಿಕೊಡಬೇಕು ಎಂದು ಮೈತ್ರಾದೇವಿಯು ತನ್ನ ಪತಿ ಶ್ರೀ ಯಾಜ್ಞವಲ್ಕ್ಯರಿಗೆ ಕೇಳಿಕೊಂಡಳು. ಅವರು ತಮ್ಮ ಪತ್ನಿಗೆ ಯೋಗೀಶ್ವರನಿಗೆ ಪ್ರಾಪ್ತವಾಗುವ ಮಾಯಿಕವಾದ ಭೋಗದ ರೀತಿಯನ್ನು ತಮ್ಮ ಸ್ವಾನುಭವದಿಂದ ಪ್ರೀತಿ ಪೂರ್ವಕ ತಿಳಿಸಿದರು.

ಪ್ರಾರಬ್ಧಭೋಗದಿಂದಾರಯ್ಯಲವಿರಳಾ।
ಕಾರ ನಿರ್ಲೇಪನೆನಿಪ ಯೋಗಿ॥
ಸಾರಿಯಜ್ಞಾನ ಗಂಧವನು ಮಿಥ್ಯಾವ್ಯವ।
ಹಾರದೊಳೊಂದಿ ಸಂಚರಿಪನು ॥ 3 ॥

ಸುವಿಚಾರಿಸಿ ನೋಡಲು, ಪರಿಪೂರ್ಣನೂ, ನಿರ್ದೇಹಿಯೂ, ನಿರ್ಲಿಪ್ತನೂ, ಆಗಿರುವ ಜ್ಞಾನಯೋಗಿಯು ತನ್ನಲ್ಲಿ ಅಜ್ಞಾನವಿಲ್ಲದಿದ್ದರೂ ಕೆಲ ಕಾಲದವರೆಗೆ ಅಜ್ಞಾನದ ಗಂಧವನ್ನು ಹೊಂದಿರುವದರಿಂದ ಪ್ರಾರಬ್ಧದಂತೆ ಜೀವಿಸಿರುವನು. ಅವಿರಳ ಜ್ಞಾನಿಗೆ ಅಜ್ಞಾನ ಮತ್ತು ಅಜ್ಞಾನ ಕಾರ್ಯದ ಬಗ್ಗೆ ಮಿಥ್ಯಾನಿಶ್ಚಯವಿರುವದರಿಂದ ತನ್ನಲ್ಲಿ ತೋರುವ ಪ್ರಾರಬ್ಧಭೋಗದಿಂದ ಅವನಿಗೆ ಯಾವ ಬಾಧೆಯೂ ಇಲ್ಲ.

ಪ್ರಾರಬ್ಧವೆನಲಹಂಕಾರವಂತದು ಸುವಿ।
ಚಾರಿಸಿನೋಡಲಿಲ್ಲದುದಾಗಿ॥
ಆರಬ್ಧಭೋಗವಾತ್ಮನಿಗಿಲ್ಲವಿದು ತೋರ।
ಹಾರದುರೋಜದಿಂದೆಸೆವಳೆ॥ 4 ।

ದೊಡ್ಡತೆಗುವ ಹೂವಿನ ಹಾರದಂ ಕುಚಗಳಿಂದ ಶೋಭಿಸುವ ಮೈತ್ರೇಯಿ ಕೇಳು, ಪ್ರಾರಬ್ಧವೆಂದರೆ ಅಹಂಕಾರವು. ಯಾಕೆಂದರೆ ಅದೇ ಸಕಲ ಕರ್ಮಗಳಿಗೆ ಬೀಜವಾಗಿದೆ. ವಿಚಾರಿಸಿ ನೋಡಿದರೆ ಅಹಂಕಾರವೆ ಇಲ್ಲದ್ದಾಗಿದೆ. ಆದ್ದರಿಂದ (ಇಲ್ಲದ ಬಂಜೆಯ ಮಗನ ಸಂತತಿಯಂತೆ) ಪ್ರಾರಬ್ಧವೂ ಮಿಥ್ಯೆಯಾಯಿತು. ಇಲ್ಲದ ಪ್ರಾರಬ್ಧಭೋಗವು ಇದ್ದ ಆತ್ಮನಿಗೆ (ಅಂದರೆ ತನಗೆ) ಹೇಗೆ ಸಂಬಂಧವಾದೀತು ? ಆದಕಾರಣ ಆತ್ಮವಿತ್ತನಿಗೆ ಪ್ರಾರಬ್ಧ ಭೋಗವು ಇಲ್ಲವೆಂಬ ಭಾವವು.

ಇಲ್ಲದ ತ್ರಿಜಗದೊಳುಳ್ಳಾತ್ಮವ್ಯವಹೃತಿ।
ಯುಳ್ಳಂತೆ ತೋರ್ಪುದು ಪುಸಿಯಾಗಿ॥
ಉಳ್ಳ ಮೃತ್ತಿಕೆಯಲ್ಲಿ ಘಟಾದಿಗಳು ನೋಡ।
ಉಳ್ಳಂತೆ ವರ್ತಿಸುವ ಪಾಂಗು ॥ 5 ॥

ಇದ್ದ ಮಣ್ಣಿನಲ್ಲಿ ಇಲ್ಲದ ಘಟಾದಿಗಳ ವ್ಯವಹಾರವು ಇದ್ದ ಹಾಗೆ ವರ್ತಿಸುವಂತೆ ಯಾವಾಗಲೂ ಉಳ್ಳ ಆತ್ಮನಲ್ಲಿ ಎಂದೂ ಇಲ್ಲದ ಮೂರು ಲೋಕಗಳ ವ್ಯವಹಾರವು ಪುಸಿಯಾಗಿ ಇದ್ದಂತೆ ತೋರುತ್ತದೆ. ಅಹಂಕಾರದ ಉಪಲಕ್ಷಣದಿಂದ ತೋರುವ ಈ ಜಗತ್ತು ತಾನು ಇಲ್ಲದ್ದಾದರೂ ಇದ್ದ ಆತ್ಮನ ಅಸ್ತಿತ್ವದಿಂದ ಇದ್ದಂತೆ ತೋರಿಬರುತ್ತದೆ.

ಕಟಕಾದಿಗಳು ಪೊನ್ನಿನೊಳು ತೋರ್ಪವಿಲ್ಲದೆ।
ಘಟಿಪುದು ಪುಸಿಯಾದ ವ್ಯವಹಾರ ॥
ದಿಟದಂತೆ ನೋಡಲಾಪರಿಯೊಳೀ ಜಗವಿಂತು।
ನಟಿಸುಗುಮಾತ್ಮನೊಳದು ಪುಸಿದೋರ್ಕೆ ॥ 6 ॥

ಕಟಕಾದಿ ಆಭರಣಗಳು ಬಂಗಾರದಲ್ಲಿ ಇಲ್ಲದೆ ಹೇಗೆ ತೋರುತ್ತವೆಯೋ ಹಾಗೆ ಪುಸಿಯಾದ ವ್ಯವಹಾರವು ಸತ್ಯದಂತೆ ಆತ್ಮವಿದನಲ್ಲಿ ನಟಿಸುವದು. (ಮಿಥ್ಯಾತೋರಿಕೆ ಯಾದ ಜಗತ್ತು ಆತ್ಮನ ಸತ್ತಾಸ್ಫುರಣ ಪಡೆದು ಇದ್ದಂತೆ ತೋರುತ್ತದೆ, ಎಂಬ ಭಾವ.)

ಶ್ರೌತ ಯೌಕ್ತಿಕ ಲೌಕಿಕ ವ್ಯಾವಹಾರಿಕ।
ಜಾತದೃಷ್ಟಿಗಳಿಗೆ ಜಗವಿದು ॥
ಮಾತೇನು ತುಚ್ಛವನಿರ್ವಾಚ್ಯವೆಲೆ ತಥ್ಯ।
ಏೀ ತೋರ್ಪಮಾತ್ರವೆಂದೆನಿಸಿರ್ಕು ॥ 7 ॥

ಗಗನ ಕುಸುಮದಂತೆ ಶುಕ್ತಿರಜತದಂತೆ।
ಮಿಗೆಯಾತ್ಮನಂತಿಂದ್ರಜಾಲದ ॥
ನೆಗಳಿಕೆಯಂತೆಂದು ಪರಿವಿಡಿದೀ ನಾಲ್ಕು।
ಬಗೆಯ ದೃಷ್ಟಾಂತಂಗಳವಕಿಲ್ಲಿ ॥ 8 ॥

ಶ್ರುತಿ, ಯುಕ್ತಿ, ಲೌಕಿಕ, ವ್ಯಾವಹಾರಿಕ ದೃಷ್ಟಿಗಳಿಗೆ ಈ ಜಗತ್ತು ಕ್ರಮವಾಗಿ ತುಚ್ಛ ಅನಿರ್ವಾಚ್ಯ, ಸತ್ಯ ಹಾಗೂ ತೋರಿಕೆ ಮಾತ್ರವಾಗಿ ಕಂಡು ಬರುವದು. ಇವುಗಳಿಗೆ ಕ್ರಮವಾಗಿ ನಾಲ್ಕು ದೃಷ್ಟಾಂತಗಳೆಂದರೆ ಶ್ರುತಿಗೆ ಅನುಸರಿಸಿ ವಿಚಾರಿಸಿದರೆ, ಇಲ್ಲದ ಗಗನ ಕುಸುಮದಂತೆ ಜಗತ್ತು ತುಚ್ಛವಾಗಿದೆ, ಯುಕ್ತಿಯಿಂದ ವಿಚಾರಿಸಿದರೆ ಅನಿರ್ವಚನೀಯ ಎಂದರೆ ಅಂತು ಇಂತೆಂದು ಹೇಳಬಾರದಂತಿದೆ, ಲೌಕಿಕವಾಗಿ ವಿಚಾರಿಸಿದರೆ ಆತ್ಮನಂತೆ ಸತ್ಯವಾಗಿದೆ, ಇನ್ನು ವ್ಯಾವಹಾರಿಕ ದೃಷ್ಟಿಯಿಂದ ನೋಡಿದರೆ ಇಂದ್ರಜಾಲದಾಟದಂತೆ ತೋರಿಕೆ ಮಾತ್ರವಾಗಿರುತ್ತದೆ.

ಉಳ್ಳೊಡುಂಟಾಗಿರದಿಲ್ಲನೆ ತೋರ್ಪುದು।
ನಲ್ಲಳೆ ಕೇಳಿದು ಕಾರಣ ॥
ಸೊಲ್ಲಿಡೆ ತಾನಿದಿರೆಂದಿಂತು ತೋರ್ಪುದಿ।
ದೆಲ್ಲವರಿಯೆ ಮಿಥ್ಯಾವ್ಯವಹಾರ ॥ 9 ॥

ಪ್ರಿಯಳೆ ಕೇಳು, ಜಗತ್ತು ಇರುವದೆಂದರೆ ನಾಶವಾಗುತ್ತದೆ. ಇಲ್ಲವೆಂದರೆ ತೋರುತ್ತದೆ. ಆದ್ದರಿಂದ ತಾನು ಇದಿರೆಂದು ತೋರುವ ಜಗವಿದೆಲ್ಲವು ವಿಚಾರಿಸಿ ನೋಡಲು ಪುಸಿ ಲೂಟಿಸು ವ್ಯವಹಾರವಿದೆ.

ಆದರಿಂದೆ ಪೂರ್ಣಾತ್ಮನಿಗೆ ಮಿಥ್ಯಾವ್ಯವಹಾರ।
ವದು ನಿಜವೆನೆ ತೋರುತಿರ್ಪುದು ॥
ಒದವಿ ಸಮ್ಯಜ್ಞಾನ ಲೋಚನದಿಂದೆ ನೋ।
ಡಿದಡಿದು ಪುಸಿಯೆಂದೆನಿಸುತಿರ್ಕು ॥ 10 ॥

ಆದುದರಿಂದ ಶಾರೀರಿಕ ಮತ್ತು ಜಗದ ಭೋಗ ರೂಪದಿಂದ ತೋರುವ ವ್ಯವಹಾರವು ನಿಜವನರಿದ ಪೂರ್ಣಾತ್ಮನಿಗೆ ಮಿಥ್ಯೆ (ಪುಸಿದೋರಿಕೆ) ಯಾಗಿದೆ. ಆದಾಗ್ಯೂ ಅದು ನಿಜವೇನೊ ಎಂಬಂತೆ ಪ್ರತೀತಿಯಾಗುವುದು. ಆದರೆ ಯಥಾರ್ಥವಾದ ಜ್ಞಾನದೃಷ್ಟಿಯಿಂದ ವಿಚಾರಿಸಲಾಗಿ ದೇಹದ ಹಾಗೂ ಜಗದ ವಾಸನೆಯ ಭೋಗಸಂಕುಳವು ಪುಸಿಯೆಂದೇ (ಅಂದರೆ ಅಸ್ತಿತ್ವವಿಲ್ಲದ ಬರೆತೋರಿಕೆಯೆಂದು) ವರಯೋಗಿಯ ಅನುಭವಕ್ಕೆ ಬರುತ್ತದೆ.

– ಇತಿ ಯೋಗೀಶ್ವರಂಗೆ ಪ್ರಾರಬ್ಧಭೋಗ ವ್ಯವಹಾರ ನಿರಾಕರಣ –

## 10ನೇ ಸೂತ್ರ

ತನುವೊದಲಾದತೋರಿಕೆ ತವಮ್ಮಕಾರ್ಯಂಗ-।
ಳನು ಮಾಡದಿರೆ ಕೆಟ್ಟುದಲ್ಲವೆ ॥

ಶರೀರಾದಿ ಸರ್ವ ದೃಶ್ಯಪದಾರ್ಥಗಳು ತಮ್ಮ ಗುಣಧರ್ಮಗಳಿಗನುಸರಿಸಿ ಕೆಲಸಗಳನ್ನು ಮಾಡದಿದ್ದರೆ ಅವು ಕೆಟ್ಟಂತೆ ಅಥವಾ ಲಯಿಸಿದಂತೆ ಎಂದು ತಿಳಿಯಬೇಕು.

ಪುಸಿಯಾಗಿ ಕಂಡನೊಳನಿತು ಸಂಪ್ರೀತಿಯ।
ನೆಸಗಲರಿಯದಿರ್ಪ ಕತದಿಂದೆ ॥
ಬಿಸರುಹ ದಳನೇತ್ರೆ ವಿಷಯಾಳಿಗಳಿಗೆ ಭಾ।
ವಿಸಿ ನೋಡಲದು ಲಯವಲ್ಲವೆ ॥ 1 ॥

ಕಮಲದಂತೆ ಕಣ್ಣುಳ್ಳ ಮೈತ್ರಾದೇವಿಯೆ, ಯಾವ ಪುರುಷನು ಸರ್ವ ವಿಷಯಗಳು ಪುಸಿದೋರಿಕೆಯೆಂದು ಅನುಭವದಿಂದ ನಿಶ್ಚಯಿಸಿರುವನೊ, ಅವನಲ್ಲಿ ಆ ವಿಷಯಗಳು ವಿಶೇಷ ಪ್ರೀತಿಯನ್ನು ಉಂಟು ಮಾಡಲಾರವು. ಆದ ಕಾರಣ, ವಿಚಾರಿಸಿ ನೋಡಲು ಆ ಅನುಭಾವಿಗೆ ವಿಷಯಗಳು ಲಯವಾದಂತೆ ಎಂದು ತಿಳಿಯತಕ್ಕದ್ದು. (ವಿಷಯಗಳ ಮಿಥ್ಯಾನಿಶ್ಚಯವೆ ಅವುಗಳ ಲಯ, ಎಂಬ ಭಾವ).

ತನು ಕೃಶತ್ವಾದಿಗಳಿಂದೆ ತಾನೆನಿಸಿ ಮುಂ।
ನಿನ ಪರಿಯೊಳು ತೋರದುದರಿಂದ ॥
ತನುವಿಗೆ ಲಯವದು ತಾನೆ ಸಂಶಯಮಾದ।
ತನುಮಧ್ಯೆ ನೀನಿದನರಿವುದು ॥ 2 ॥

ತೆಳುವಾದ ನಡವುಳ್ಳ (ಸಿಂಹಕಟಿ) ಮೈತ್ರೇಯಿ, ಸೊರಗುವಿಕೆ ಸೊಕ್ಕುವಿಕೆಯುಳ್ಳ ಶರೀರವೆ ತಾನೆಂದು ಮೊದಲಿನಂತೆ (ವಿವೇಕಿಗೆ) ದೇಹಾತ್ಮಬುದ್ಧಿ ತೋರದ್ದರಿಂದ ಅದು ತನುವಿಗೆ ಲಯವೆಂದು ನೀನು ನಿಶ್ಚಯಿಸು.

ನಡೆ ನುಡಿ ಮೊದಲೆನಿಪೆಡೆಯಾಳಾ ವ್ಯವಹಾರ।
ದೊಡೆತನವನು ತನ್ನದೆನಿಸುವ ॥
ತೊಡಕನೊಮ್ಮೆಯು ಮಾಡದಿಹುದರಿಂದವೆ ಚಲ್ವ।
ಮಡದಿ ಕರ್ಮೇಂದ್ರಿಯಲಯವದು ॥ 3 ॥

ಲಲಿತಾಂಗಿಯೆ, ನಡೆ ನುಡಿ ಮೊದಲಾದ ಕ್ರಿಯೆಗಳಲ್ಲಿ ನಾನು ನಡೆದೆನು ನಾನು ನುಡಿದೆನು ಎಂಬ ಕರ್ತೃತ್ವಾಭಿಮಾನದ ತೊಡಕನ್ನು ಈಗ ಒಮ್ಮೆಯೂ ಮಾಡದಿರುವದರಿಂದ ಇದು ಕರ್ಮೇಂದ್ರಿಯಗಳ ಲಯವೆಂದು ಹೇಳಿಸಿಕೊಳ್ಳುವದು.

ಅನೃತವೀ ತ್ರೈಲೋಕ್ಯದೊಳಗೆ ಭೇದಜ್ಞಾನ।
ವನು ತನ್ನೊಳೆಸಗಲರಿವಾಗಿ ॥
ಮನದನ್ನೆ ಮೈತ್ರೇಯಿ ಕೇಳು ಬುದ್ಧೀಂದಿಯ।
ವೆನಿಸುವೈದರ ಲಯವದು ತಾನೆ ॥ 4 ॥

ಪುಸಿದೋರಿಕೆಯಾದ ಮೂರು ಲೋಕಗಳಲ್ಲಿ ಅಥವಾ ಜಾಗರಣಾದಿ ಮೂರವಸ್ಥೆಗಳಲ್ಲಿ ಕಿವಿ, ಕಣ್ಣು ಮೊದಲಾದ ಐದು ಜ್ಞಾನೇಂದ್ರಿಯಳು ತನಗೆ (ಎಚ್ಚರ ಪುರುಷಗೆ) ಮೊದಲಿನಂತೆ ಭೇದಜ್ಞಾನವನ್ನು ಹುಟ್ಟಿಸಲಾರವು. ಆದುದರಿಂದ ಪ್ರಿಯೆ ಮೈತ್ರೇಯಿ, ಇದು ಪಂಚ ಬುದ್ಧೀಂದ್ರಿಯಗಳ ಲಯವೆಂದು ತಿಳಿಯಬೇಕು.

ತನುವೋ-ಜೀವನೊ ಪರಾತ್ಮನೊ ತಾನಾರೆಂಬುದೊಂ।
ದಿನಿಸಿಲ್ಲದಾನೆ ಪರಾತ್ಮನು ॥
ಎನೆ ಮನೋಲಯವದು ತಾನೆ ಪರಾತ್ಮ ಭಾ।
ವನೆಯಳವಟ್ಟ ಮಾನಿನಿರನ್ನೆ ॥ 5 ॥

ಮಹಿಳೆಯರಲ್ಲಿ ರತ್ನಪ್ರಾಯಳಾದ ಹಾಗೂ ಆತ್ಮಜ್ಞಾನ ಸಂಪನ್ನಳಾದ ಮೈತ್ರಾದೇವಿ, ತಾನು ದೇಹವೊ ಜೀವಾತ್ಮನೊ ಅಥವಾ ಪರಮಾತ್ಮನೊ, ತಾನಾರು ಎಂಬುವಲ್ಲಿ ಎಳ್ಳಷ್ಟು ಸಂಶಯವಿಲ್ಲದೆ ತಾನೆ ಪರಮಾತ್ಮನೆಂದು (ಶ್ರೀ ಗುರು ಕೃಪೆಯಿಂದ ಮೇಲೆ ಹೇಳಿದ ಸಂಶಯಗಳು ಲಯಿಸುವದರಿಂದ) ದೃಢವಾಗಲು ಅದಕ್ಕೆ ಮನೋಲಯವೆನ್ನುವರು.

ಮನದ ಸಂದೇಹವೆಳ್ಳನಿತಿಲ್ಲದಾನೆ ಚಿ।
ದ್ಘನರೂಪನಾದ ನಿಜಾತ್ಮನು ॥
ಎನೆ ಪುಸಿ ಬುದ್ಧಿನಿಶ್ಚಯವೆಂಬುದಿಂ ತಾಗೆ।
ವನಜಾಕ್ಷ್ಯ ಮತಿಲಯವದು ನೋಡು ॥ 6 ॥

ಕಮಲಮುಖಿಯೆ, ಮನಸ್ಸಿನಲ್ಲಿ ಸ್ವಲ್ಪಾದರೂ ಸಂಶಯವಿಲ್ಲದೆ ನಾನೆ ಸಚ್ಚಿದಾನಂದ ನಿಜಾತ್ಮನೆಂದು ತಿಳಿಯಲು, ಸಂಶಯಗಳನ್ನು ಹೋಗಲಾಡಿಸಿ ನಿಶ್ಚಯ ಮಾಡುವ ಮುನ್ನಿನ ಬುದ್ಧಿಯು ಪುಸಿಯಾಗುವದು. ಇದುವೆ ಬುದ್ಧಿಯ ಲಯವೆಂದು ತಿಳಿ.

ತನು ಮಾನಸಾದಿಗಳೊಳಗಹಂಭಾವನೆ।
ತನಗೆ ಮುನ್ನಿನ ವೋಲಿಲ್ಲದುದನು ॥
ಮುನಿಮುಖ್ಯರೆಂಬ ರಹಂಕೃತಿ ಲಯವೆಂದು।
ವನಿತೆ ನೀನಿದ ನಿಂತು ತಿಳಿವುದು ॥ 7 ॥

ಮೈತ್ರೇಯಿ, ಶರೀರ, ಮನಸ್ಸು ಮೊದಲಾದವುಗಳಲ್ಲಿ ತನಗೆ ಮೊದಲಿನಂತೆ ಅಹಂಭಾವನೆ ಇಲ್ಲದಿರುವ (ನಿರಹಂಕಾರ) ಸ್ಥಿತಿಗೆ ಅಹಂಕಾರ ಲಯವೆಂದು ಮುನಿಶ್ರೇಷ್ಠರು ಹೇಳುವರು. ಹೀಗೆ ನೀನು ಇದನ್ನು ತಿಳಿದುಕೊಳ್ಳಬೇಕು.

ಜೀವಾದಿ ಸಕಲಹಂಭಾವಮಂ ಧರಿಸಲು।
ದ್ಭಾವಿಸಲರಿಯದಿರ್ಪುದರಿಂದೆ॥
ಭಾವೆ ಕೇಳದು ಚಿತ್ತದಿರವಿನ ಲಯವೆಂದು।
ಭಾವಜ್ಞರುಗ ಳವಧರಿಪರು ॥ 8 ॥

ಭಾವಿಕಳಾದ ಮೈತ್ರೇಯಿ, ಕೇಳು, ಜೀವ ನಾನು, ಈಶ್ವರ ನಾನು ಬ್ರಹ್ಮನಾನು ಇತ್ಯಾದಿ ಭಾವನೆಗಳನ್ನು ಧಾರಣೆ ಮಾಡಲು ಚಿತ್ತು ಉದ್ಭವಿಸಲಾರದು. ಆದ್ದರಿಂದ ಅದೇ ಚಿತ್ತದ ಲಯವೆಂದು ಆತ್ಮಜ್ಞಾನಿಗಳು ನಿಶ್ಚಯ ಮಾಡುವರು.

ಅಜ್ಞತೆಯೆಂಬುದು ತಜ್ಞರೊಳಿಲ್ಲವೆಂ।
ತಜ್ಞತೆ ದೋರದ ಕತದಿಂದ॥
ಪ್ರಾಜ್ಞರಂತದನೆ ಜ್ಞಾತೃತ್ವದ ಲಯವೆಂದು॥
ಸುಜ್ಞಾನಿಗಳಿಗೆ ಬೋಧಿಸುವರು ॥ 9 ॥

ಅಜ್ಞಾನವೆನ್ನುವದು ಅದನ್ನು ತಿಳಿದ ಜ್ಞಾನಿಗಳಲ್ಲಿ ತೋರುವದಿಲ್ಲ. ಅಜ್ಞಾನವು ನಾಶವಾದ ತತ್‌ಕ್ಷಣದಲ್ಲಿ ಜ್ಞಾತೃವಿನ ಲಯವಾಗುವದು. ಇದನ್ನೇ ಜ್ಞಾತೃತ್ವದ ಲಯವೆಂದು ಬಲ್ಲವರು ಸುವಿವೇಕಿಗಳಿಗೆ ಬೋಧಿಸುವರು.

ದೃಶ್ಯಮಿರಲು ತನ್ನನದು ಮರಸುಗುಮಿಂತು।
ದೃಶ್ಯಮಿಲ್ಲಾಗ್ಗಿ ಮರಸಲಿಲ್ಲ॥
ದೃಶ್ಯವಿಲಕ್ಷಣನಿಗೆ ಮರೆಯಿಲ್ಲಾಗ್ಗಿ।
ದೃಶ್ಯಮಾಯಾ ಲಯವದು ತಾನೆ ॥ 10 ॥

ಇದಂರೂಪ ದೃಶ್ಯವಿದ್ದರೆ ಅದು ತನ್ನನ್ನು ಮರೆಯಿಸುವದು. ಈಗ ಅಂತ- ರ್ಮುಖಿಯಾದ ಯೋಗಿಗೆ ದೃಶ್ಯವಿಲ್ಲದ್ದರಿಂದ ತನಗೆ ಮರೆವಿಯಿಲ್ಲ. ದೃಶ್ಯವಿಲಕ್ಷಣನಾದ

ತನಗೆ ಮರವೆ ಇಲ್ಲವಾಗಿ, ಇದನ್ನು ದೃಶ್ಯ ಮಾಯಾಲಯವೆಂದು ಹೇಳುವರು. ಯದ್ದೃಷ್ಟಂ ತನ್ನಷ್ಟಂ ಎಂಬ ಭಾವ.

ತಾನುಂಟೆನಿಸುಗುಮೀ ವಿಷಯಾಳಿಯುಳ್ಳೊಡೆ।
ತಾನೇನನರಿಯದ ಕತದಿಂದ॥
ಏನುಮಿಲ್ಲದಿರಲ್ಕೆ ಮಾನಿನಿ ತಿಳಿಯದು।
ತಾನಾತ್ಮ ಲಯವೆಂದು ನಿಜದಿಂದ॥ 11 ॥

ಇದಂರೂಪ ಈ ಸರ್ವ ವಿಷಯಗಳು ಇದ್ದರೆ ತಾನುಂಟು ಎನಿಸುವನು. ತನ್ನ ತಾನು ಪೂರ್ಣ ವರಿಯಲು ಏನೊಂದು ವಿಷಯವು ಇಲ್ಲವಾಗಿ ಮತ್ತು ಇನ್ನೊಂದನ್ನು ಕಾಣಲು ತಾನೆ (ಅಹಂವೃತ್ತಿ) ಇಲ್ಲವಾಗಿ, ಹೇ ಮೈತ್ರೇಯಿ. ಅದು ನಿಜವಾಗಿ ಜೀವಾತ್ಮನ ಲಯ ವೆಂದು ನೀನು ತಿಳಿ. (ಜೀವಾತ್ಮನಿಗೆ ಎಂದೂ ಸ್ವತಂತ್ರ್ಯವಾದ ಅಸ್ತಿತ್ವ ಇಲ್ಲೆಂಬ ಭಾವ)

– ಯೋಗೀಶ್ವರಂಗೆ ದೇಹಾದಿ ಲಯಪ್ರಕಾರ ನಿರೂಪಣೆ –

## 11ನೇ ಸೂತ್ರ

ಪೊನ್ನೊಳು ತೊಡಿಗೆಯಂತಂತೆ ಜಗತ್ತಿದು ।
ತನ್ನೊಳಿಲ್ಲೆನೆ ಕೆಟ್ಟುದಲ್ಲವೆ ॥

ಬಂಗಾರದಲ್ಲಿ ಆಭರಣಗಳು ಹೇಗೆ ಅಸ್ತಿತ್ವ ಇಲ್ಲದೆ ತೋರುತ್ತವೆಯೋ ಹಾಗೆ ಪುಸಿಯಾಗಿ ತೋರತಕ್ಕ ಈ ಜಗತ್ತು ತನ್ನ ಸ್ವರೂಪದಲ್ಲಿ ಇಲ್ಲವೇ ಇಲ್ಲ. ಹೀಗೆಂದು ತನ್ನ ಸ್ವಾನುಭವದಿಂದ ನಿಶ್ಚಯಿಸಲಾಗಿ ಈ ಜಗತ್ತು ನಾಶವಾದಂತೆಯೆ ಸರಿ.

ಜಡನಿಧಿಯೊಳು ತೆರೆ ಮಡಕೆ ಮೃತ್ತಿಕೆಯೊಳು।
ಕಡಗವಾಕಾಂಚನದೊಳಗೆಂತು॥
ಮಡದಿ ತನ್ನೊಳು ಜಗವಿದು ಪುಸಿಯೆಂದರಿ।
ದೊಡೆ ಯುಗಪಲ್ಲಯವದಕಕ್ಕು॥ 1 ॥

ಹೇ ಕುಲೀನ ಸ್ತ್ರೀಯಳೆ, ಜಲರಾಶಿಯಾದ ಸಮುದ್ರದಲ್ಲಿ ತೆರೆಗಳು, ಮಣ್ಣಿನಲ್ಲಿ ಗಡಿಗೆ ಮಡಕೆ ಇತ್ಯಾದಿಗಳು, ಬಂಗಾರದಲ್ಲಿ ಕಡಗ ಕಂಕಣಾದಿಗಳು ಹೇಗೆ ಇಲ್ಲದೆ ತೋರಿಕೊಳ್ಳುತ್ತವೆಯೋ, ಹಾಗೆಯೆ ಈ ಜಗತ್ತು ಪುಸಿಯಾಗಿದ್ದರೂ ತನ್ನೊಳಗೆ ತೋರಿ ಕೊಳ್ಳುತ್ತದೆಂದು ತಿಳಿಯಲು ಜಗತ್ತಿಗೆ ಯುಗಪತ್ (ನೋಡುವಾಗಲೇ) ಲಯವೆಂದೆನಿಸುವದು.

ಜಳಧಿಯ ತೆರೆ ತೋರುವಡಗುವೆಡೆಯೊಳು ತ।
ನ್ನೊಳಗೊಂದನೊಂದು ಬಾಧಿಸುವಂತೆ।
ಸುಳಿದು ತನ್ನೊಳು ತೋರ್ಪ ವ್ಯವಹಾರವೆಂಬುದು।
ತಿಳಿಯಲ್ ನೋಡಲು ಪುಸಿಯೆನಿಸುಗು॥ 2 ॥

ಸಮುದ್ರದ ತೆರೆಗಳು ತೋರುವ ಅಡಗುವ ಸಮಯದಲ್ಲಿ ಅವು ಒಂದನ್ನೊಂದು ಅಪ್ಪಳಿಸು (ಬಾಧಿಸು) ವಂತೆ ವಿವೇಚಿಸಿ ನೋಡಲು ತನ್ನ ಸ್ವರೂಪದಲ್ಲಿ ರಾಗದ್ವೇಷಾದಿ ವ್ಯವಹಾರವು ಇಲ್ಲದಿದ್ದರೂ ಇದ್ದಂತೆ ತೋರುವದರಿಂದ ಪುಸಿ (ಮಿಥ್ಯೆ) ಯಾಗಿರುವದು.

ತೋರಿದೊಡೇನು ತೋರದೊಡೇನು ಜಗವಿದು।
ನೀರೆ ನೀನರಿ ಪುಸಿಯಹುದೆಂದು।
ತೋರಿ ಜಳಧಿಯೊಳಡಗುವ ತೆರೆಯಂತೆ।
ಬೇರೇನು ನುಡಿ ಮಿಥ್ಯಾವ್ಯವಹಾರ ॥ 3 ॥

ಕೋಮಲ ಹೃದಯಳೆ, ಸಮುದ್ರದಲ್ಲಿಯ ತೆರೆಗಳು ತೋರಿದರೂ ಪುಸಿಯಿರುವಂತೆ ಈ ಜಗತ್ತು ತನ್ನಲ್ಲಿ ತೋರಲಿ ಅಥವಾ ತೋರದಿರಲಿ ಅದು ಕೇವಲ ನುಡಿಮಾತ್ರವಾಗಿ ಮಿಥ್ಯೆಯೆಂದು ತಿಳಿಯಬೇಕು. ಏಕೆಂದರೆ ನಾಮರೂಪದಿಂದ ತೋರುವ ಜಗತ್ತಿನ ವ್ಯವಹಾರವು ಅಧ್ಯಾಸವಾಗಿದೆ. ಅಧ್ಯಾಸ ಮೂಲೋಹಿ ವ್ಯವಹಾರಃ, ಎಂಬ ಶ್ರುತಿಯಂತೆ (ಅಧ್ಯಾಸ, ಭ್ರಾಂತಿ, ಮಿಥ್ಯೆ, ಮಾಯೆ, ಪುಸಿತೋರಿಕೆ) ಇವು ಪರ್ಯಾಯ ನಾಮಗಳು. ತನಗೆ ಭಿನ್ನವಾದ ಪ್ರಕೃತಿ ಲಯವನ್ನು ನಿರೂಪಿಸಿ ಈಗ ಆರೂಢನಿಗೆ ವಿಧಿ ನಿಷೇದಗಳಿಲ್ಲವೆಂದು ಹೇಳುತ್ತಾರೆ.

– ಇತಿ ಪೃಥಕ್ಪ್ರಕೃತಿ ಲಯ ಪ್ರಕಾರ ನಿರೂಪಣೆ –

## 12ನೇ ಸೂತ್ರ

ಜಗವಿದುಪುಸಿಯೆಂದು ಮಿಗೆತಿಳಿದಾರೂಢ–।
ನಿಗೆ ಸುಖಾದಿ ದ್ವಂದ್ವತತಿಯುಂಟೆ ॥

ಈ ಜಗತ್ತು ಪುಸಿದೋರಿಕೆಯೆಂದು ನಿಸ್ಸಂಶಯವಾಗಿ ತಿಳಿದ ಪರಮಾರೂಢನಿಗೆ ಸುಖದುಃಖಾದಿ ಯಾವ ದ್ವಂದ್ವಗಳ ಸ್ಪರ್ಶವೂ ಇಲ್ಲ. ಅವನು ದ್ವಂದಾತೀತ ಸ್ಥಿತಿಯಲ್ಲಿ ಇರುತ್ತಾನೆಂಬ ಭಾವ.

ತನುವಸು ಎಂದ್ರಿಯಾಳಿಗಳಿಲ್ಲಾತ್ಮನಿಗೆ ಸಾ।
ಧನವಿಲ್ಲದೆಂತು ವಿಷಯದೊಳು।
ತನಗೆ ಮೇಳನವೆಂಬುದಹುದು ವಿಚಾರಿಸ।
ಲನಿತುಮಸತ್ಯ ಮಪ್ಪುದರಿಂದ ॥ 1 ॥

ಆತ್ಮನಾದ ತನಗೆ ತನು ಪ್ರಾಣ ಇಂದ್ರಿಯಾದಿ ಯಾವ ಸಾಧನಗಳೂ ಇಲ್ಲ. ವಿಚಾರಿಸಿ ನೋಡಲು ಸಾಧನಗಳಿಲ್ಲದೆ ತನಗೆ ವಿಷಯಗಳಲ್ಲಿ ಸಂಗವು ಅಂದರೆ ಭೋಗವು ಘಟಿಸದು, ಯಾಕೆಂದರೆ ಅವೆಲ್ಲವೂ ಪುಸಿದೋರಿಕೆಯಾಗಿವೆ.

ಪುಸಿ ವಿಷಯಾಳಿಗಳೊಳು ಪುಸಿ ದೇಹಾದಿ।
ಪುಸಿ ಜೀವನೊಡಗೂಡಿ ಚರಿಸಲು ॥
ಅಸಮನದ್ವಯ ಸುಖನಿಧಿ ಸತ್ಯರೂಪನೆ।
ನಿಸುವ ಪರಾತ್ಮಂಗೆ ತನಗೇನು ॥ 2 ॥

ಮಿಥ್ಯೆಯಾದ ವಿಷಯ ಸಮೂಹದಲ್ಲಿ ಪುಸಿಯಾದ ದೇಹದೊಡನೆ, ಇಲ್ಲದ ಜೀವನು ವ್ಯವಹರಿಸುವನು. ಆದರೆ ಅಸಮನೂ, ಅದ್ವಯನೂ, ಆನಂದನಿಧಿಯೂ. ಸತ್ಯರೂಪನೂ ಪರಮಾತ್ಮನೂ ಆದ ತನಗೆ ಆ ಪುಸಿ ಜೀವನ ವ್ಯವಹಾರದಿಂದ ಏನೂ ಸಂಬಂಧವಿಲ್ಲ.

ಪುಸಿ ದೇಹಾದಿಗಳಲ್ಲಿ ಪುಸಿ ನಿಯಮಂಗಳ।
ಪುಸಿ ಜೀವನಿಗೆ ಕಲ್ಪಿಸುವದೇಕೆ॥
ಬಿಸಜಾಕ್ಷಿ ಕೇಳಾತ್ಮನಚಲ ನಚ್ಯುತನು ಸಾ।
ಧ್ವಸವಿಲ್ಲದಾನಂದ ಪೂರ್ಣನು ॥ 3 ॥

ಕಮಲಸದೃಶ ನೇತ್ರವುಳ್ಳ ಮೈತ್ರೇಯಿ ಕೇಳು, ಇಲ್ಲದ ದೇಹಾದಿಗಳಲ್ಲಿ ಇಲ್ಲದ ನಿಯಮಗಳನ್ನು ಇಲ್ಲದ ಜೀವನಿಗೇಕೆ ಕಲ್ಪಿಸಬೇಕು ? ಅಂದ ಮೇಲೆ ಅಚಲನೂ ಅಚ್ಯುತನೂ ದುಃಖ ಬೆರೆಯದ ಆನಂದಪೂರ್ಣನೂ ಆದ ಆತ್ಮನಲ್ಲಿ ಈ ಇಲ್ಲದ ನಿಯಮಕ್ಕೆ ಆಸ್ಪದವಿಲ್ಲ.

ವರವಿವೇಕದೆ ತನಗನ್ಯವೆನಿಸಿ ತೋರ್ಪ।
ಶರೀರಾದಿ ಕಡಿದು ಬಿಸುಟು ಬಿಟ್ಟ॥
ಕರಚರಣ ತೆರನದರ ಶುಭಾಶುಭಾ।
ಚರಣೆಯಿಂದೇನಾನು ಫಲಮುಂಟೆ ॥ 4 ॥

ತನ್ನಿಂದ ಬೇರ್ಪಟ್ಟು ಕಡಿದು ಬಿದ್ದ ತನ್ನ ಶರೀರದ ಭಾಗಗಳೆ ಆದ ಕರಚರಣಾದಿಗಳ ಆಗುಹೋಗುಗಳು ತನಗೆ ಹೇಗೆ ಸಂಬಂಧವಿಲ್ಲವೋ ಹಾಗೆ ನಿತ್ಯಾನಿತ್ಯರೂಪ ವಿವೇಕದಿಂದ ತಿಳಿದು ನೋಡಲು ಶರೀರದ ಅವಯವಗಳ ಶುಭಾಶುಭ ಕರ್ಮಾಚರಣೆಯಿಂದ ತನಗಾವ ಲಾಭಹಾನಿಗಳಿಲ್ಲ.

ತಿಳಿವಿನಿಂದುಳಿದ ಮನೋಧರ್ಮಾದಿಕವನು।
ನಿಲಿಸಲಾಯಾಸಗೊಂಬವನು ಬಿಟ್ಟ॥
ಮಲದ ದುರ್ವಾಸನೆಯನು ಕೆಡಿಸಲ್ಕೆ ಕೋ।
ಟಲೆಗೊಂಬ ಗಾಂಪನಿಗೆಣೆಯಕ್ಕು ॥ 5 ॥

ಬಿಟ್ಟ ಮಲದ ದುರ್ವಾಸನೆಯನ್ನು ಕೆಡಿಸಲಿಕ್ಕೆ ಆಯಾಸ ಪಡುವ ಮೂರ್ಖನಂತೆ, ತಿಳಿವಿಲ್ಲದ (ಜಡ) ಮನಸ್ಸಿನ ಇಲ್ಲದ ಸುಖದುಃಖಾದಿಗಳು ತನಗಾಗದಂತೆ ತಡೆಯಲು ಆಯಾಸ ಪಡುವ ಯೋಗಿಯು ಅಪಹಾಸ್ಯಕ್ಕೆ ಈಡಾಗುವನು.

ಮನವನಿಂದ್ರಿಯವ ನಾಮತಿಯ ನಿರೋಧಿಸ।
ನನಿತುಮಸತ್ಯವೆನಿಸುವವು ॥
ಕನಸಾರಿ ಕಲ್ಲು ಬಿಸಿಲುದೊರೆ ಸುರಧನು।
ಘನಜಾಲದಂತೆಂದು ತಿಳಿದಾತ ॥ 6 ॥

ಕನಸು ಆನೆಕಲ್ಲು ಮೃಗಜಲ, ಸುರಧನು, ಗಂಧರ್ವನಗರ (ಮೋಡದಲ್ಲಿಯ ಸುಂದರ ಆಕಾರ) ಗಳಂತೆ ಯೋಗಿವರನು ಇಂದ್ರಿಯ ಮನ ಬುದ್ಧಿ ಮೊದಲಾದವುಗಳನ್ನು ಪುಸಿದೋರಿಕೆಯೆಂದು ತಿಳಿದಿರುತ್ತಾನೆ. ಆದ್ದರಿಂದ ಅವನು ಇವುಗಳನ್ನು ನಿರೋಧಿಸುವದಿಲ್ಲ

ಲೇಸಿದು ಹೊಲ್ಲವೆಂಬೀಸುಮಾ ಭ್ರಾಂತಿಯಾ।
ಲೇಸು ಹೊಲ್ಲೆಯಮಿವು ಪುಸಿದೋರ್ಕೆ।
ಲೇಸಾಗಿ ಕೇಳೆಲೆ ನೀರೆ ಕನಸಿನೊಳು।
ಲೇಸು ಹೊಲ್ಲೆಂಬ ಭಾವನೆಯಂತೆ ॥ 7 ॥

ನಿರ್ಮಳ ಮನಸ್ಸಿನ ಮೈತ್ರೇಯಿ, ಚಿತ್ತಗೊಟ್ಟು ಕೇಳು, ಕನಸ್ಸಿನಲ್ಲಿ ತೋರುವ ಶುಭಾಶುಭ ಭಾವನೆಗಳಂತೆ, ನೆನಸಿನಲ್ಲಿಯ ಇಷ್ಟಾನಿಷ್ಟಭಾವನೆಗಳು ಕೂಡ ಪುಸಿದೋರಿಕೆಯಾಗಿರುತ್ತವೆ. ಆದ್ದರಿಂದ ಈ ದ್ವಂದ್ವಗಳೆಲ್ಲ ಬರಿಯ ಭ್ರಾಂತಿಯೆಂದು ತಿಳಿಯತಕ್ಕದ್ದು

ತನುವಿಗಿಂದ್ರಿಯಕೆ ಮಾನಸಕೆ ಚೇತನಕಿಷ್ಟ।
ಜನಕೆ ಲೋಕಕೆ ವೇದವಿಧಿಗಳ್ಗೆ॥
ಇನಿಸು ಕಿಂಕರನಲ್ಲ ವರಯೋಗಿ ನಿಜಬೋಧ।
ನನಘ ನಖಿಳಭಾವರಹಿತನು ॥ 8 ॥

ಆತ್ಮಜ್ಞಾನಿಯೂ, ನಿಷ್ಪಾಪನೂ, ಸರ್ವಭಾವ (ಅಹಮಾದಿ ದಶಭಾವ) ರಹಿತನೂ ಆದ ವರಯೋಗಿಯು ತನುವಿಗೆ, ಮನಸ್ಸಿಗೆ ಬುದ್ಧಿಗೆ ಆಪ್ತಜನರಿಗೆ, ಮೂರು ಲೋಕಕ್ಕೆ ಹಾಗು ವೇದೋಕ್ತ ವಿಧಿನಿಷೇಧಗಳಿಗೆ ಎಳ್ಳಷ್ಟೂ ಕಿಂಕರನಲ್ಲ, ಅರ್ಥಾತ್ ಅವನು ಸರ್ವಸ್ವತಂತ್ರನಿರುತ್ತಾನೆಂಬ ಭಾವವು.

ನೆನಸಿನೊಳ್ಬಿಧಿಗೆ ತೊಳ್ತೆನಿಸಿದಾತನ ಬಗೆ।
ಕನಸಿನ ಜನಪಂಗೆ ಬೆರಲಿತ್ತು॥
ನಿನಗೆ ನಾನೆಲೆ ವೆಲೆಯಾಳೆಂಬವನ ವೃತ್ತಿ।
ವನಿತೆ ಹಾಸ್ಯವೆ ನೋಡು ತಿಳಿದಂದು ॥ 9 ॥

ಕನಸಿನಲ್ಲಿ ಒಬ್ಬನು 'ನಾನಿಮ್ಮ ಸೇವಕ' ಎಂದು ಕನಸಿನ ರಾಜನಿಗೆ ವಚನಕೊಟ್ಟನು. ಎಚ್ಚತ್ತ ಬಳಿಕ ನೆನಸಿನ ರಾಜನ ಬಳಿ ಹೋಗಿ, 'ಸ್ವಾಮಿ, ನಾನಿಮ್ಮ ಸೇವಕ, ಯಾವ ಕೆಲಸ

ಮಾಡಲಿ ? ಎಂದು ಕೇಳಿದರೆ ರಾಜನು ಅವನ ವಿಚಿತ್ರ ವೃತ್ತಿಗೆ ನಗುವನು. ಇದೇ ರೀತಿ, ವನಿತೆ ಮೈತ್ರೇಯಿ, ತನ್ನ ನಿಜಸ್ವರೂಪದಲ್ಲಿ ಎಚ್ಚತ್ತ ವರಯೋಗಿಯು ಕನಸಿನಂತೆ ತೋರಿದ ಮೊದಲಿನ ವಿಧಿನಿಷೇಧಗಳಿಗೆ 'ನಾನು ಕಿಂಕರನೆಂದು ಬಗೆದರೆ ಆತನು ಅಪಹಾಸ್ಯಕ್ಕೆ ಈಡಾಗುತ್ತಾನೆ.

ನರಕ ನಾಕಾಮೃತ ಮರಣ ಜನನ ಪುಣ್ಯ।
ದುರಿತಾದಿಗಳ ಭೀತಿ ತನಗಿಲ್ಲ॥
ವರಯೋಗಿ ಗುಣಭಾವರಹಿತನಪ್ಪುದರಿಂದ।
ತರಳಾಕ್ಷಿ ನಂಬಿದು ನಿಜವೆಂದು ॥ 10 ॥

ವರಯೋಗಿಯು ತ್ರಿಗುಣರಹಿತನೂ, ಭಾವಾತೀತನೂ ಇರುವದರಿಂದ ನರಕ, ಸ್ವರ್ಗ, ಅಮೃತ, ಜನನ, ಮರಣ, ಪುಣ್ಯ ಪಾಪಾದಿ ದ್ವಂದ್ವಗಳ ಭೀತಿಯಿಲ್ಲದೆ, ತನ್ನಂತೆ ತಾನು ಇರುತ್ತಾನೆ. ಮನೋಹರ ಕಣ್ಣುಳ್ಳ ಮೈತ್ರೇಯಿ, ಇದು ನಿಜವೆಂದು ನಂಬು.

ತನುವಿಗೆ ಮನಕೆ ಚೇತನಕೆ ವಿಷಯವೃತ್ತಿ।
ಯೆನಿಪೆಡೆಯೊಳು ಜೀವಭಾವವ॥
ಇನಿತು ನಿವಾರಣೆಗೈವನೆ ಯೋಗಿ ಚಿ।
ದ್ಘನ ಸಾಕ್ಷಿ ತಾನೆಂದರಿದ ಮೇಲೆ ॥ 11 ॥

ವರಯೋಗಿಯು ಸಾಧಕ ದೆಶೆಯಲ್ಲಿಯೆ ಶರೀರ, ಇಂದ್ರಿಯ, ಮನ, ಬುದ್ಧಿ ಇವೇ ಮೊದಲಾದ ವಿಷಯಗಳಲ್ಲಿ 'ನಾನು ನನ್ನವೆಂದು' ವರ್ತಿಸುವ ಜೀವಭಾವವನ್ನು ನಿವಾರಣೆ ಮಾಡಿಕೊಂಡಿದ್ದಾನೆ. ಇಂತು ಕೃತಕೃತ್ಯನಾಗಿ ಚಿದ್ಘನ ಸಾಕ್ಷಿ ತಾನೆಂದು ತಿಳಿದ ಮೇಲೆ ಪುಸಿಯಾದ ಜೀವಭಾವವನ್ನು ನಿವಾರಿಸಲು ಆರೂಢನು ಹವಣಿಸುವದಿಲ್ಲ.

ಪ್ರಕೃತಿಯೆ ಹುಸಿ ನಾನಾವಿಕೃತಿ ಜಾಲಕ್ಕೆ ಕೌ।
ತುಕವನದೆಂತು ಕಾಣ್ಬನು ಯೋಗಿ॥
ಅಕಲಂಕ ನಿಜವೆ ತಾನಾಗಿ ಮಿಕ್ಕಿನ ಜಡ।
ಪ್ರಕೃತಿಗೆ ದಿಟವೆಳ್ಳ ಮರುಳಂತೆ ॥ 12 ॥

ನಿಜಯೋಗಿಯು ಸಚ್ಚಿದಾನಂದ ನಿಷ್ಕಲಂಕ ಪರಬ್ರಹ್ಮವೆ ತಾನಾಗಿರುವನು. ಉಳಿದ ಅಜ್ಞಾನಿಗಳು ಜಡ ಪ್ರಕೃತಿಯೆ ನಿಜವೆಂದು ತಿಳಿಯುತ್ತಾರೆ. ಪ್ರಕೃತಿಯೆ ಹುಸಿದೋರಿಕೆ ಎಂದು ತಿಳಿದ ಆರೂಢನು, ಈ ಅಜ್ಞಾನಿಗಳಂತೆ ಪ್ರಕೃತಿಯ ನಾನಾ ವಿಕಾರ ಸಮೂಹದಲ್ಲಿ ಕೌತುಕವನು ಎಂದೂ ಕಾಣಲಾರನು.

– ಇತಿ ಯೋಗೀಶ್ವರಂಗೆ ವಿಧಿ ನಿಷೇಧ ಅಭಾವ ನಿರೂಪಣೆ –

## 13ನೇ ಸೂತ್ರ

**ಪುಸಿನಿಯಮವನು ಬೋಧಿಸುವನೆ ನಿಜಗುರು।**
**ಪುಸಿದಿಟವೆಂಬ ಕರ್ಮಿಯವೋಲು ॥**

ಕರ್ಮಿಯು ಪುಸಿದೋರಿಕೆಯನ್ನೇ ದಿಟವೆಂದು ನಂಬಿ ಅದನ್ನೆ ಇತರರಿಗೆ ಬೋಧಿಸುವನು. ಆದರೆ ಸದ್ಗುರುವರನು ಪುಸಿ ನಿಯಮಗಳನ್ನು ಉಪದೇಶ ಮಾಡುವದಿಲ್ಲ, ಕಿಂತು 'ಸತ್ಯಸ್ವರೂಪನಾದ ಪರಮಾತ್ಮನೆ ನೀನಿರುವಿ' ಎಂದು ಯಥಾರ್ಥವಾದದ್ದನ್ನೇ ನೇರವಾಗಿ ಬೋಧಿಸುವನು.

ಕನಸಿನ ವಿಕೃತಿಯಂತಿರೆ ನೆನಸಿನ ಜಗ।
ವನಿವಾರ್ಯಮಿಂತು ಕಾಣಿಸುವದು ॥
ವನಿತೆ ಕೇಳ್ಪುಸಿ ನಿಯಮಂಗಳನದರಲ್ಲಿ।
ಮುನಿಮುಖ್ಯರೆಂತು ವಿಧಿಸುವರು ॥ 1 ॥

ಪರಮಾತ್ಮನದ್ವಯಾನಂತನಚ್ಯುತನಾಗಿ।
ಪರಿಕಿಸೆ ಜಗವಿದು ಪುಸಿಯಾಗಿ ॥
ಪರಮಾರ್ಥವೆಂದು ನಿಯಮ ವಿಧಿಗಳನಲ್ಲಿ।
ಗುರುವರನೆಂತು ಬೋಧಿಸುವನು ॥ 2 ॥

ಕನಸಿನ ವಿಕಾರಗಳಂತೆ ನೆನಸಿನ ಜಗತ್ತು ಅನಿವಾರ್ಯವಾಗಿ ತೋರುವದು. ಮೈತ್ರೇಯಿ ಕೇಳು, ಕನಸ್ಸಿನಂತೆ ಪುಸಿಯಾಗಿರುವ ಜಗತ್ತಿಗೆ ಆಧಾರವಾದ ಪರಮನು ಅದ್ವಯನೂ ಅನಂತನೂ, ಅಚ್ಯುತನೂ ಆಗಿರುವನು. ವಿಚಾರಿಸಿ ನೋಡಲು ಭೇದರೂಪದಿಂದ ಈ ಜಗವು ಕೆಡುವದರಿಂದ ಪರಮಾರ್ಥವಲ್ಲ (ಏಕರೂಪೇಣ ಹಿ ವ್ಯವಸ್ಥಿತಃ ಸ ಪರಮಾರ್ಥಃ) ಇಂತಹ ಜಗತ್ತಿನಲ್ಲಿ ಶ್ರೀ ಗುರುವರನು ನಿತ್ಯ ನೈಮಿತ್ತಿಕ ಯಾವ ಕರ್ಮಗಳನ್ನೂ ಬೋಧಿಸನು.

ತನುವಿದು ತಾನಲ್ತು ತನು ತನ್ನದಲ್ಲ ವಾ।
ತನುಮಿಥ್ಯೆಯದರಲ್ಲಿ ವಿಧಿಯನು।
ತನುವಿರಹಿತ ನಾದಾತ್ಮನಿಗೆಂತು ನಿಜತತ್ತ್ವ।
ವನು ಬಲ್ಲವರ್ ನೋಡಲೊರೆಗುಮೆ ॥ 3 ॥

ಈ ಶರೀರವು ತಾನಲ್ಲ ಮತ್ತು ತನ್ನದಲ್ಲ, ಅದು ಮಿಥ್ಯೆಯಾಗಿದೆ. ತನುರಹಿತರಾದ ನಿಜತತ್ತ್ವವನ್ನು ತಿಳಿದ ಜ್ಞಾನಿಗಳು, ವಿಚಾರಿಸಿ ನೋಡಿದರೆ, ಇಂಥ ಶರೀರದಲ್ಲಿ ತನಗೆ ನಿಯಮಗಳನ್ನು ವಿಧಿಸುವರೆ ? ವಿಧಿಸುವದಿಲ್ಲವೆಂಬ ಭಾವ.

ತನುವಿಲ್ಲದನಿಗೆ ಕೇಳ್ಮನವಿಲ್ಲದನಿಗೆ ಚೇ।
ತನವಿಲ್ಲದನಿಗೆ ನಿಯಮವನು ॥
ತನಗೆ ವಿಧಿಸಿ ಪೇಳಲರಿವರೆ ನಿಜನಿಷ್ಠ।
ರೆನಿಸುವ ಪರಮ ಸದ್ಗುರುಗಳು ॥ 4 ॥

ತನಗೆ ಎಂದರೆ ಆತ್ಮನಿಗೆ ಶರೀರವಿಲ್ಲ, ಮನವಿಲ್ಲ, ಮತಿಯಿಲ್ಲ, ಇಂತಹನಿಗೆ ನಿಜನಿಷ್ಠರಾದ ಪರಮ ಸದ್ಗುರುಗಳು ನಿಯಮಗಳನ್ನು ವಿಧಿಸಿ ಹೇಳುವರೆ ? ಹಾಗೆ ವಿಧಿಸಲಾರರೆಂಬ ಭಾವ.

ತನುವಿದು ತಾನೆಂಬ ತನು ತನ್ನದೆಂಬ ತೋ।
ರ್ಪನಿತು ಜಗವನಿದು ನಿಜವೆಂಬ ॥
ಘನ ಮೂಢನೆನಿಸುವಾತನೆ ಬೋಧಿಸುವನೈಸೆ।
ತನು ಮನೋನಿಯಮ ವಿಧಿಗಳನು ॥ 5 ॥

ಈ ಶರೀರವೆ ತಾನು ತನ್ನದೆಂದು, ತೋರುವ ಈ ನಾಮರೂಪಾತ್ಮಕ ಜಗತ್ತು ನಿಜವೆಂದು ತಿಳಿದ ಅತಿ ಮೂಡಾತ್ಮನು ಮಾತ್ರ ಶರೀರ, ಮನಸ್ಸು, ಬುದ್ಧಿಗಳಿಗೆ ಸಂಬಂಧ ಪಟ್ಟ ವಿಧಿ ನಿಷೇದಗಳನ್ನು ಬೋಧಿಸುವನು. (ಅವನು ಸಾಧಕನಿಗೆ ತಪ್ಪು ದಾರಿ ತೋರಿಸಿ ಅಹಿತವನ್ನೇ ಮಾಡುವನಲ್ಲದೆ ಕಲ್ಯಾಣ ಮಾಡಲಾರನೆಂಬ ಭಾವ.)

ಪರಿಕಿಸಲರಿಯದೆ ವರನಿರ್ಗುಣಾತ್ಮನ।
ನುರು ಕರ್ಮಗುಣಯೋಗಮುಸುರ್ವನು ॥
ಗುರುವರನವನಲ್ತು ಯಮ ಕಿಂಕರನೆ ಬಾಧಾ।
ಕರನಾಗಿ ತಿಳಿ ತೋರಮುಡಿಯಳೆ ॥ 6 ॥

ಪರಮನು ನಿರ್ಗುಣನು, ನಿರ್ದೇಹಿ ಆತ್ಮನನ್ನು (ತನ್ನನ್ನು) ಪರೀಕ್ಷಿಸಿ ತಿಳಿಯಲಾರದ ಕೇವಲ ಕರ್ಮ ಮತ್ತು ಗುಣಯೋಗವನ್ನು ಬೋಧಿಸುವವನು ಸದ್ಗುರುವರನಲ್ಲ, ನೀಳ ಮುಡಿಯುಳ್ಳ ಮೈತ್ರೇಯಿ, ಅಂತಹ ಗುರು ದುಃಖವನ್ನೆ ಕೊಡುವವನಾದ್ದರಿಂದ ಅವನು ಗುರುವರನಲ್ಲ ಯಮದೂತನೆ ಇರುವನೆಂದು ನೀನು ತಿಳಿ.

ಪರಮನೆ ನೀನು ನಿಷ್ಕ್ರಿಯನು ನೈರ್ಮಲ್ಯನೆಂ।
ದೊರೆವಾತನಧಿಕ ಸದ್ಗುರುವಕ್ಕು ॥
ಮರಳಿ ಜೀವನು ಕರ್ಮಿ ಮಲಿನನೆ ನೀನೆಂಬ।
ಗುರು ತಾನೆ ತನಗೆ ಬಾಧಕನೈಸೆ ॥ 7 ॥

'ನೀನು ಪರಮಾತ್ಮನೆ ಇರುವಿ. ನೀನು ನಿಷ್ಕ್ರಿಯನೂ, ನಿರ್ಮಲನೂ ಇರುವಿ' ಎಂದು ಬೋಧಿಸುವವನೆ ಪರಮ ಸದ್ಗುರುವಾಗಿದ್ದಾನೆ. ಇವನಿಂದ ಅಧಿಕ ಗುರು ಬೇರೊಬ್ಬನಿಲ್ಲ.

ಆದರೆ ನೀನು ಜೀವನು, ಕರ್ಮಿ, ಮಲಿನನು ಎಂದು ಬೋಧಿಸುವ ಗುರು ತಾನು ತನಗೆ ಬಾಧಾಕರನಾಗಿದ್ದಾನೆ.

– ಇತಿ ಯೋಗೀಶ್ವರಂಗೆ ವಿಧಿನಿಯಮ ಅಭಾವ ನಿರೂಪಣೆ –

## 14ನೇ ಸೂತ್ರ

ತನ್ನಭಾವವೆ ಕರ್ಮ ದೈವ ಬೋಧಾದಿ ಬೀ ।
ಜಂ ನಿಜವೆನೆ ಪರಾತ್ಮನು ತಾನೆ ॥

ಕರ್ಮಕಾಂಡ, ಉಪಾಸನಾಕಾಂಡ ಹಾಗೂ ಜ್ಞಾನಕಾಂಡವೆಂಬ ಈ ಮೂರು ಕಾಂಡಗಳಿಗೆ ಮೂಲ ತನ್ನ ಭಾವವೆ ಕಾರಣವಾಗಿದೆ. ವಿಚಾರ ಮಾಡಿ ನೋಡಿದರೆ ವಾಸ್ತವವಾಗಿ ತಾನು ಸಚ್ಚಿದಾನಂದ ನಿತ್ಯ ಪರಿಪೂರ್ಣ ಪರಮಾತ್ಮನೆ ಇದ್ದಾನೆ. (ಇದು ಸತ್ಯವಾದ ಮಾತು.)

ಕರ್ಮದಿಂದಖಿಳ ಸಂಸ್ಕೃತಿ ದುಃಖವಹುದಾಗಿ ।
ಕರ್ಮವೆ ಬಂಧವಂತದರಿಂದ ॥
ನಿರ್ಮಳ ಮೋಕ್ಷವಾಗದು ನಿಜವಿದು ತೋರ ।
ಸೋರ್ಮುಡಿಯಳೆ ಕೇಳು ಪರಮಾರ್ಥ ॥ 1 ॥

ದೊಡ್ಡ ನೀಳಾದ ಮುಡಿಯ ಮೈತ್ರೇಯಿ ಕೇಳು, ಕರ್ಮವೇ ಸಂಸಾರದ ಸರ್ವ ದುಃಖಗಳಿಗೆ ಕಾರಣವಾಗಿದೆ. ಆದ್ದರಿಂದ ಕರ್ಮವೆ ಬಂಧರೂಪವಾಗಿದೆ. ಅಂತಹ ಕರ್ಮದಿಂದ ಸದಮಲ ಮೋಕ್ಷವು ಹೇಗೆ ಪ್ರಾಪ್ತವಾದೀತು ? ಪ್ರಾಪ್ತವಾಗಲು ಸಾಧ್ಯವೆ ಇಲ್ಲ.

ಕರ್ಮಿ ಕರ್ಮವನು ಬ್ರಹ್ಮದೊಳರ್ಪಿಸುವದೆಲೆ ।
ನಿರ್ಮಳ ಮನದಿಂದವೆನೆ ವೇದ ॥
ಮರ್ಮವನರಿಯದೆ ಬರಿದೆ ಬಾಹ್ಯದೊಳಿಂತು ।
ದುರ್ಮತಿ ಮಾಳ್ಪನಾ ಕ್ರಿಯೆಗಳ ॥ 2 ॥

ಕರ್ಮಿಯು ಶುದ್ಧಾಂತಃಕರಣದಿಂದ ಕರ್ಮವನ್ನು ಬ್ರಹ್ಮಾರ್ಪಣ ಮಾಡಬೇಕೆಂದು ವೇದವು ವಿಧಿಸುತ್ತದೆ. ಆದರೆ ವೇದದ ಮರ್ಮವನ್ನು ಅಜ್ಞಾನಿಯು ತಿಳಿಯದೆ ಮುಂದೆ ಹೇಳುವಂತೆ ಬಾಹ್ಯದಲ್ಲಿಯೆ ವ್ಯರ್ಥವಾಗಿ ಕರ್ಮವನ್ನು ಮಾಡುತ್ತಾನೆ.

ಕರ್ಮವನಾ ಬ್ರಹ್ಮವನು ಕರ್ಮಿಯನು ಮಿಗೆ ।
ನಿರ್ಮಳ ಬುದ್ಧಿಯಿಂದರಿಯದೆ ॥
ದುರ್ಮತಿ ಬಿಡದನುದಿನದೊಳು ಮಾಳ್ಪನೀ ।
ಕರ್ಮವನಾ ಬ್ರಹ್ಮಾರ್ಪಣವೆಂದು ॥ 3 ॥

ಕರ್ಮದ ರಹಸ್ಯವನ್ನು ಬ್ರಹ್ಮದ ಸ್ವರೂಪವನ್ನು ಮತ್ತು ಕರ್ಮ ಮಾಡುವ ತನ್ನನ್ನು ನಿರ್ಮಲ ಬುದ್ಧಿಯಿಂದ ತಿಳಿಯದೆ ಮೂಢನು ಆ ಬ್ರಹ್ಮಾರ್ಪಣವೆಂದು ಕರ್ಮವನ್ನು ಚಾಚೂತಪ್ಪದೆ ಯಾವಾಗಲೂ ಮಾಡುತ್ತಾನೆ.

ಅರಿಯೆ ತಾನೆ ಬ್ರಹ್ಮವರಿಯದಿರ್ದೊಡರ್ಪಿಸ।
ಲರಿಯನಂತದರಿಂದೆ ಕರ್ಮವ ॥
ತೊರೆಯೆಂಬುದರ್ಥವಾ ಶ್ರುತಿಯ ನೀನರಿದೋರ್ಮೆ।
ಮರೆಯದಿರೆನ್ನಾತ್ಮ ಸುಖವಾರ್ಧಿ ॥ 4 ॥

ನನ್ನ ಆತ್ಮಸುಖಸಾಗರಳೇ ಆದ ಮೈತ್ರೇಯಿ, ತಾನಾರೆಂದು ತಿಳಿದರೆ ತಾನೆ ಬ್ರಹ್ಮನಿದ್ದಾನೆ. ತಿಳಿಯದಿದ್ದರೆ ಅರ್ಪಿಸಲರಿಯನು. ಆದ್ದರಿಂದ ಹೇಗೆ ವಿಚಾರ ಮಾಡಿದರೂ, ಕರ್ಮವನ್ನು ತೊರೆಯೆಂಬುದೆ ಶ್ರುತಿಯ ಅಭಿಪ್ರಾಯವಾಗಿದೆ. ನೀನು ಈ ರಹಸ್ಯವನ್ನೊಮ್ಮೆ ತಿಳಿದುಕೊಂಡ ಮೇಲೆ ಮತ್ತೆ ಮರೆಯಬೇಡ.

ಅರಿವಿಂದೆ ಕಲ್ಪಿಸಲರಿಯದಿರ್ದೊಡೆ ದೈವ।
ವರಸಿದೊಡೊಳ ಹೊರಗೆಲ್ಲಿಯು ॥
ಕುರುಹಿಡಲಿಲ್ಲಾವ ತೆರದಿಂದಲರಿವೊಂದು।
ಪೊರತಾಗಿ ಮಿಕ್ಕ ತೋರ್ಕೆಗಳುಂಟೆ ॥ 5 ॥

ತಾನು ಮೊದಲು ಬುದ್ಧಿಶಕ್ತಿಯಿಂದ ಪ್ರಯತ್ನ ಮಾಡುವನು. ಒಂದು ಹಂತದಲ್ಲಿ ತನ್ನ ಬುದ್ಧಿ ಸೋತನಂತರ ತನಗಿಂತ ಹೆಚ್ಚಿನ ದೈವವೊಂದಿರುವದೆಂದು ಒಪ್ಪಿಕೊಳ್ಳುವನು. ಆದರೆ ತನಗನ್ಯವಾದ ಬೇರೊಂದು ದೇವರ ಅಸ್ತಿತ್ವವು ಪರೀಕ್ಷಿಸಿ ನೋಡಲು ಒಳಹೊರಗೆಲ್ಲಿಯೂ ಯಾವ ರೀತಿಯಿಂದಲೂ ಸಿದ್ಧವಾಗುವದಿಲ್ಲ, ಆದ್ದರಿಂದ ಅರಿವು ಒಂದೇ ಅಲ್ಲದೆ ಬೇರೆ ದೇವತಾದಿ ತೋರಿಕೆಗಳು ಇರುವವೆ ? ಇರಲಾರವು. ದೇವತಾದಿಗಳು ತನ್ನ ಸದ್ಭಾವದಲ್ಲಿಯೆ ಇರುತ್ತವೆಂಬ ಭಾವ. ಸುಷುಪ್ತಿಯಲ್ಲಿ ದೇವತಾ ಭಾವವು ಅಡಗಿದಾಗಲೂ ತಾನಿದ್ದಾನೆ. ಎಚ್ಚತ್ತಕೂಡಲೆ ದೈವಗಳು ತನ್ನ ಭಾವದಲ್ಲಿ ತೋರಿಕೊಳ್ಳುತ್ತವೆ. ಆದ್ದರಿಂದ ತನ್ನ ಭಾವವೆ ದೈವಕಾಂಡಕ್ಕೆ ಆಧಾರವಾಗಿದೆ.

ಅದರಿಂದೆ ದೈವವಾನೆಂಬುದೆ ಶ್ರುತಿಸಿದ್ಧ।
ವಿದನುರೆ ನಂಬಿದ ಪುರುಷರ್ಗೆ ॥
ಸದಮಳ ಮುಕ್ತಿಯಪ್ಪುದು ಬೇರೆ ದೈವವೆಂ।
ಬುದು ದಿಟಕಿಲ್ಲಿದು ಪರಮಾರ್ಥ ॥ 6 ॥

ಆದ ಕಾರಣ ಆರಾಧ್ಯ ದೈವವು ನಾನೆಂಬುದೆ ಶ್ರುತಿಯ ತಾತ್ಪರ್ಯವಾಗಿದೆ. ಅಂದರೆ ತನ್ನ ಬಿಟ್ಟು ದೇವರಿಲ್ಲ ಮಣ್ಣು ಬಿಟ್ಟು ಮಡಕೆಯಿಲ್ಲವೆಂಬದು ಯಥಾರ್ಥವಾಗಿದೆ. ಇದನ್ನು ಚನ್ನಾಗಿ ನಂಬಿದ ಪುರುಷರಿಗೆ ನಿರ್ಮಲವಾದ ಮುಕ್ತಿ ತನ್ನಲ್ಲಿಯೆ ಸಿದ್ಧವಿದೆ. ತನಗೆ

ಭಿನ್ನವಾಗಿ ಬೇರೆ ದೇವರು ಇದ್ದಾನೆಂಬುದು ದಿಟವಾಗಿ ಸತ್ಯವಲ್ಲವು. ಇದೇ ಯಥಾರ್ಥವಾದ ಸಿದ್ಧಾಂತವು.

ಜ್ಞಾನವೆ ತನ್ನನಜ್ಞಾನವ ನರಿವುದೆಂ।
ಬೀ ನುಡಿಗರ್ಥವಿಂತಿದು ತಾನು ॥
ತಾನೆ ತನ್ನಿಂದನ್ಯವೇನು ಮಿಲ್ಲೆಂಬುದು।
ನೀನಿದನೆಳಸಿ ನೋಡೆಲೆ ನೀರೆ ॥ 7 ॥

ನಿರ್ಮಳ ವೃತ್ತಿಯುಳ್ಳ ಮೈತ್ರೇಯಿ, ಜ್ಞಾನವೆಂದರೆ ತನ್ನನ್ನು ಹಾಗೂ ಅಜ್ಞಾನವನ್ನು ಅರಿಯುವದು ಎಂಬ ಮಾತಿಗೆ ಅರ್ಥವಾಗಿದೆ. ತನ್ನನ್ನು ತಾನು ವಿಶೇಷ ಜ್ಞಾನದಿಂದ ತಿಳಿಯಲು ತನ್ನಿಂದ ಅನ್ಯವೇನೂ ಇಲ್ಲವೆಂದು ಸಿದ್ಧವಾಗುವದು. ಅಂದರೆ ತಾನೆ ತಾನಾಗಿ ಕೇವಲ ಅರಿವಾಗಿ ಉಳಿಯುವದು. ನೀನು ಇದನ್ನು ಮನದುಂಬಿ ತಿಳಿದು ನಿಶ್ಚಯಿಸು.

ಜ್ಞಾನದಿ ನೋಡಲಾ ಜ್ಞಾನದಿಂದನ್ಯವ।
ನೇನನು ಕಾಣಲರಿಯನಾಗಿ ॥
ಜ್ಞಾನವೆ ತಾನೆಂಬುದಿದು ಸಿದ್ದವರಿ ಪರ।
ಮಾನಂದರಸಪೂರ್ಣಹೃದಯಳೆ ॥ 8 ॥

ಪರಮಾನಂದರಸಪೂರ್ಣ ಹೃದಯಳಾದ ಮೈತ್ರೇಯಿಯೆ, ಪೂರ್ಣಜ್ಞಾನದೃಷ್ಟಿಯಿಂದ ನೋಡಲಾಗಿ ತಾನು ತನ್ನ ಅರಿವಿಗೆ ಭಿನ್ನವಾಗಿ ಬೇರೇನನೂ ಕಾಣಲರಿಯನು. ಆದ್ದರಿಂದ ಅರಿವೆ ತಾನಿದ್ದಾನೆಂಬುದೆ ಸಿದ್ಧಾಂತವೆಂದು ನೀನು ನಿಚ್ಚಳವಾಗಿ ತಿಳಿದುಕೊಳ್ಳಬೇಕು.

ಇಂತು ಕಾಂಡತ್ರಯಾರ್ಥಂ ತಾನೆ ತನ್ನನೋ।
ರಂತೆ ತನ್ನಿಂದರಿಯೆಂಬುದು ॥
ಕಾಂತೆ ಮೈತ್ರೇಯಿ ಭಾವಿಸು ಕರ್ಮದ್ವೈವ ಜ್ಞಾ।
ನಂ ತನಗಿಲ್ಲವದ್ವಯನಾಗಿ ॥ 9 ॥

ಈ ಪ್ರಕಾರ, ತಾನೆ ತನ್ನನ್ನು ತನ್ನಿಂದ ಚನ್ನಾಗಿ ಅರಿಯಬೇಕೆಂಬುದೆ ತ್ರಿಕಾಂಡಗಳ ರಹಸ್ಯವಾಗಿದೆ. ತಾನು ಅದ್ವಯನಾಗಿರುವದರಿಂದ ತನಗೆ ಕರ್ಮ ಉಪಾಸನೆ ಹಾಗೂ ಜ್ಞಾನ ಕಾಂಡಗಳೆಂಬವು ತಿಲಮಾತ್ರವೂ ಇಲ್ಲ, ಅಂದರೆ ಇವು ಅಧ್ಯಾಸದಲ್ಲಿ ಅಥವಾ ಕಾಲ್ಪನಿಕವಾಗಿ ತೋರಿವೆ. ಆದರೆ ಈ ತೋರಿಕೆಯಿಂದ ತನಗಾವ ಬಾಧೆಯಿಲ್ಲ.

– ಇತಿ ಕಾಂಡತ್ರಯಾರ್ಥ ವಿಶೇಷ ನಿರೂಪಣೆ –

## 15ನೇ ಸೂತ್ರ

**ಕರ್ಮದೆ ಜ್ಞಾನಕರ್ಮದೆ ಮುಕ್ತಿಘಟಿಸದು ।
ನಿರ್ಮಳಜ್ಞಾನದಿಂದಲ್ಲದೆ ॥**

ನಿಜಮುಕ್ತಿಯು ಕರ್ಮದಿಂದಾಗಲಿ, ಜ್ಞಾನ ಮತ್ತು ಕರ್ಮಗಳ ಸಮುಚ್ಚಯದಿಂದಾಗಲಿ ಪ್ರಾಪ್ತವಾಗದು. ಪರಂತು ನಿರ್ಮಲವಾದ ಆತ್ಮಜ್ಞಾನ ಮಾತ್ರದಿಂದವೆ ಲಭ್ಯವಾಗುತ್ತದೆ.

**ಈ ತನು ತಾನೆಂದೊಡಾತಂಗೆ ವಿಧಿ ಕರ್ಮ ।
ವೀ ತನು ತಾನಲ್ಲವಿದು ಮಿಥ್ಯೆ ॥
ಯೀತೆರದಿಂದಮೆಂದನುಭವದಿಂದ ಕಂ।
ಡಾತನು ಮಾಳ್ಪುಮೆ ಕ್ರಿಯೆಗಳ ॥ 1 ॥**

ಈ ಶರೀರವೆ ತಾನೆಂದು ಯಾವ ಪುರುಷನು ತಿಳಿದಿರುವನೊ, ಅವನಿಗೆ ಮಾತ್ರ ಕರ್ಮವು ವಿಧಿಸಲ್ಪಟ್ಟಿದೆ. ಈ ಶರೀರವು ತಾನಲ್ಲವೆಂದೂ, ಯಾವ ರೀತಿಯಿಂದ ವಿಚಾರಿಸಿದರೂ ಇದು ಮಿಥ್ಯೆಯೆಂದೂ ಯಾರು ಅನುಭವದಿಂದ ತಿಳಿದಿರುವರೊ ಅವರು ಕರ್ಮಗಳನ್ನು ಮಾಡುವರೆ ? ಸರ್ವಥಾ ಇಲ್ಲವೆಂಬ ಭಾವ.

**ತನುವಾತ್ಮನಲ್ಲವಾತ್ಮನು ತನುವಲ್ಲಾಗಿ।
ತನಗೆಂತು ಕರಣೀಯವದು ಕರ್ಮ ॥
ಜನನವಿಲ್ಲಾಗ್ಗಿ ವಿಪ್ರಾದಿ ಭಾವನೆಯಿಲ್ಲ।
ವೆನಿಪ ಚಿನ್ಮಯನೆ ತಾನಹನಾಗಿ ॥ 2 ॥**

ಶರೀರವು ಆತ್ಮನಲ್ಲ, ಆತ್ಮನು ಶರೀರವಲ್ಲ, ಆತ್ಮನಿಗೆ (ತನಗೆ) ಜನನವಿಲ್ಲದ್ದರಿಂದ ಶರೀರಕ್ಕೆ ಸಂಬಂಧಿಸಿದ ವಿಪ್ರಾದಿ ಭಾವನೆಗಳು ತನಗಿಲ್ಲ, ತಾನು ಚಿನ್ಮಯನಾಗಿದ್ದಾನೆ. ಆದ್ದರಿಂದ ಕರಣರಹಿತನಾದ ತನಗೆ ಯಾವ ಕರ್ಮಗಳೂ ಕರಣೀಯವಲ್ಲ.

**ಒಡಲಿಂದ ಕರ್ಮವನೆಡೆವಿಡದೆಸಗಲ್ಕೆ।
ಕೆಡಲರಿಯದು ಬಂಧವದರಿಂದ ॥
ಕುಡತೆಗಂಣಬಲೆ ನೀನರಿವುದು ಕರ್ಮವೆಂ।
ದೊಡೆ ಮೋಕ್ಷವಿಲ್ಲವಿಂತಿದು ಸತ್ಯ ॥ 3 ॥**

ಬಟ್ಟಲುಗಣ್ಣುಳ್ಳ ಮೈತ್ರೇಯಿ, ಒಡಲಿಂದ ಎಂದರೆ ತ್ರಿಕರಣಗಳಿಂದ ಕರ್ಮವನ್ನು ಸತತವಾಗಿ ಮಾಡಿದರೂ ಭವಬಂಧವು ನಾಶವಾಗಲರಿಯದು. ಆದ್ದರಿಂದ ಕರ್ಮದಿಂದ ಮೋಕ್ಷವು ಪ್ರಾಪ್ತಿಯಾಗುವದಿಲ್ಲ, ಈ ಸತ್ಯವನ್ನು ನೀನು ತಿಳಿ.

ಜನವೆಲ್ಲವಿಳೆಯೊಳಗನುದಿನದೊಳು ಕರ್ಮ।
ವನು ಮಾಳ್ಪುದನಿತರಿಂದವೆ ಬಂಧ।
ಎನಿತು ಪಿಂಗಿರದಾಗಿ ವನಜಾಸ್ಯೆ ಮೋಕ್ಷಸಾ।
ಧನವೆಂಬುದಹುದೆ ಪೇಳ್ಕ್ರಿಯೆಯಿಂದೆ ॥ 4 ॥

ಕಮಲಮುಖಿಯೆ, ಜಗತ್ತಿನಲ್ಲಿ ಸಕಲ ಜನರು ನಿರಂತರವಾಗಿ ಕರ್ಮವನ್ನು ಮಾಡುತ್ತಿರುವರು. ಅವೆಲ್ಲ ಕರ್ಮಗಳಿಂದ ಬಂಧನವು ಎಳ್ಳಿನಷ್ಟೂ ನಾಶವಾಗಿಲ್ಲ, ಆದ್ದರಿಂದ ಕರ್ಮವು ಮೋಕ್ಷ ಪ್ರಾಪ್ತಿಗೆ ಕಾರಣವಾಗುವದೆ ? ನೀನೆ ಹೇಳು, ಕರ್ಮವು ಮೋಕ್ಷಕ್ಕೆ ಸಾಧನವಲ್ಲವೆಂಬ ಭಾವ.

ಅರಿವಿನೊಳ್ಕೂಡಿ ತನ್ನರಿವಿಂದೆ ಕರ್ಮವ।
ನರಿವುಳ್ಳವರ್ ಮಾಡಿದೊಡೆ ಮುಕ್ತಿ ॥
ನೆರೆ ಸಿದ್ಧಿಸುವದೆಂದು ನುಡಿವರು ಲೋಕದೊ।
ಳರೆ ಮರುಳುಗಳಾದ ಜನರೆಲ್ಲ ॥ 5 ॥

ಜ್ಞಾನದಲ್ಲಿ ಕೂಡಿಕೊಂಡು ತಮ್ಮ ಜ್ಞಾನದಿಂದ ಕರ್ಮವನ್ನುಮಾಡಿದರೆ ಮುಕ್ತಿಯು ನಿಶ್ಚಯವಾಗಿ ಪ್ರಾಪ್ತವಾಗುವದೆಂದು ಹೇಳುವರು. ಲೋಕದೊಳಗೆ ಇಂತಹ ಜನರೆಲ್ಲ ಅರೆಮರುಳರೆಂದೆ ತಿಳಿಯಬೇಕು. ಯಾಕೆಂದರೆ ಜ್ಞಾನ ಮತ್ತು ಕರ್ಮ ಸಮುಚ್ಚಯ ವಾದಿಗಳು ಜಾಣರೂ ಅಲ್ಲ ಹುಚ್ಚರೂ ಅಲ್ಲ; ಕಿಂತು ಅರೆಹುಚ್ಚರಾಗಿರುವರು. ಕಾರಣ ವೇನೆಂದರೆ ಜ್ಞಾನದಿಂದ ಮುಕ್ತಿಯೆಂದು ಹೇಳುವವರು ಜಾಣರು; ಕರ್ಮದಿಂದ ಮುಕ್ತಿಯೆಂದು ಹೇಳುವವರು ಹುಚ್ಚರು. ಆದರೆ ಇವೆರಡರಿಂದ ಮುಕ್ತಿಯೆಂದು ಹೇಳುವವರು ಅರೆಹುಚ್ಚರಾಗಿರುವರು.

ರವಿಗೆ ತಾಮಸಕೆ ಪಾವಕನಿಗೆ ಶೀತಕ್ಕೆ।
ಹವಣೆಸದೆಂದು ಮೇಳನವದು ॥
ಯುವತಿ ಕೇಳೆಲೆ ಸಮುಚ್ಚಯ ವಾವತೆರದಿಂದೆ।
ಹವಣಿಸದಾ ಜ್ಞಾನಕ್ರಿಯೆಗಳ್ಗೆ ॥ 6 ॥

ರಮಣಿಯೆ ಕೇಳು, ಸೂರ್ಯಪ್ರಕಾಶ ಹಾಗೂ ಕತ್ತಲೆ, ಅಗ್ನಿ ಹಾಗೂ ಶೀತವು ಇವು ಒಂದಕ್ಕೊಂದು ವಿರೋಧಾತ್ಮಕ ಧರ್ಮವುಳ್ಳವುಗಳಾಗಿ ಅವುಗಳಲ್ಲಿ ಕೂಡುವಿಕೆಯು ಎಂದೂ ಸಂಭವಿಸುವದಿಲ್ಲ, ಅದರಂತೆಯೆ ಜ್ಞಾನ ಕ್ರಿಯೆಗಳಾದರೂ ವಿರೋಧ ಲಕ್ಷಣಗಳಿಂದ ಕೂಡಿರುವದರಿಂದ ಅವುಗಳಲ್ಲಿಯಾವ ರೀತಿಯಿಂದಲೂ ಸಮುಚ್ಚಯವು ಉಂಟಾಗಲಾರದು.

ಬ್ರಹ್ಮದೊಳರ್ಪಿತವಾಗಲಿಯೆಂದೊಡೆ।
ಬ್ರಹ್ಮಣೆ ಸ್ವಾಹಾಯೆಂದೊಡೆ ॥
ಬ್ರಹ್ಮವಿಜ್ಞಾನಮುದಿಸದಿರ್ಪಕತದಿಂದ।
ಬ್ರಹ್ಮಾರ್ಪಣದೊಳು ಕೇಳ್ ಫಲವಿಲ್ಲ ॥ 7 ॥

ತಾವು ಮಾಡಿದ ಕರ್ಮ ಫಲಗಳು ಬ್ರಹ್ಮನಿಗೆ ಅರ್ಪಿತವಾಗಲಿ, ಎಂದು ಕೆಲವು ಕರ್ಮನಿಷ್ಠರು ಹೇಳುವರು. ಹೀಗೆ ಜಡವಾದ ಕರ್ಮಗಳನ್ನು ಮಾಡುವದರಿಂದ ಅವರಿಗೆ ಅಜಡ ಅಂದರೆ ಚೈತನ್ಯಮಯ ಬ್ರಹ್ಮನ ವಿಶೇಷ ಜ್ಞಾನವುಂಟಾಗುವದೇ ? ಎಂದೂ ಆಗದು, ಏಕೆಂದರೆ ತನ್ನ ಇರುವು, ಅರಿವು ಆನಂದಮಯ ಚಿದಾತ್ಮನನ್ನು ಅರಿದೊಡೆ, ಸಚ್ಚಿದಾನಂದಮಯ ಬ್ರಹ್ಮವೇ ತಾನಿರುವನು. ಇದನ್ನೆ ಕೆಲವೇ ಶಬ್ದಗಳಲ್ಲಿ ಪುನಃ ಹೇಳುವದಾದರೆ, 'ಅರಿದೊಡೆ ತಾನೇ ಬ್ರಹ್ಮ ಅಂದಮೇಲೆ ಕರ್ಮ ಫಲ ಯಾರಿಗೆ ಅರ್ಪಿಸುವನು ? ಮತ್ತುಬ್ರಹ್ಮನೆಂದರೆ ಯಾರು ? ಎಂಬುದು ತನಗೆ ಅರಿವು ಇಲ್ಲದಿರ್ದರೆ ಕರ್ಮಫಲ ಯಾರಿಗೆ ಅರ್ಪಿಸುವನು ? ಅರ್ಪಿಸಲರಿಯನು. ಆದ್ದರಿಂದ ಮೈತ್ರೇಯಿ ಕೇಳು, ಬ್ರಹ್ಮಾರ್ಪಣದೊಳು ಕಿಂಚಿತ್ತೂ ಹುರುಳಿಲ್ಲ.

– ಇತಿ ಕಾಂಡತ್ರಯ ವಿಷಯ ವಿಭಾಗ ನಿರೂಪಣೆ.

ಈಗ ಜ್ಞಾನದ ಹಿರಿಮೆಯನ್ನು ನಿರೂಪಿಸುತ್ತಾರೆ –

## 16ನೇ ಸೂತ್ರ

ಪರಿಯದು ಕರ್ಮದಿಂದಬಲೆ ಸಂಸೃತಿ ತನ್ನ ।
ನರಿದೊಡೆಮುಕ್ತಿ ಮರೆಯೆಬಂಧ ॥

ಮೈತ್ರೇಯಿ, ಕರ್ಮಗಳಿಂದ ಸಂಸಾರ ದುಃಖ ಪರಂಪರೆಯು ನಾಶವಾಗುವದಿಲ್ಲ. ಪರಂತು ತನ್ನ ನಿಜಸ್ವರೂಪವನ್ನು ಅರಿಯುವದರಿಂದ ಮಾತ್ರ ಮುಕ್ತಿಯಾಗಿ ಸಂಸಾರ ದುಃಖ ನಾಶವಾಗುವದು. ಯಾಕೆಂದರೆ ಸ್ವಸ್ವರಪವನ್ನು ಮರೆತಿರುವದರಿಂದ ಬಂಧ ಉಂಟಾಗಿದೆ.

ಅನೃತವೀ ಜಗವೆಂದ ಬಳಿಕಾದ ಕರ್ಮವೆ।
ಕನಸಿನೊಳುದಿಸಿದ ತನುಜಂಗೆ ॥
ಮನವಾರೆ ಜಾತಕರ್ಮವನು ಸಂಭ್ರಮದಿಂದೆ।
ನೆನಸಿನೊಳಗೆ ಮಾಳ್ಪತೆರನಂತೆ ॥ 1 ॥

ಕನಸಿನಲ್ಲಿ ಹುಟ್ಟಿದ ಮಗುವಿಗೆ ಮನಮುಟ್ಟಿ ನಾಮಕರಣವನ್ನು ಜಾಗ್ರದಲ್ಲಿ ಸಂಭ್ರಮದಿಂದ ಮಾಡುವದು ಹಾಸ್ಯಾಸ್ಪದವಾಗುವದು. ಅದರಂತೆ ಈ ದೃಶ್ಯರೂಪ ಪ್ರಪಂಚವು ಪುಸಿ ದೋರಿಕೆಯೆಂದು ತಿಳಿದ ಮೇಲೆ ಅದಕ್ಕಾಗಿ ಮಾಡುವ ಕರ್ಮವು ವ್ಯರ್ಥವಾಗುವದು.

ತನುಭಾವವಳಿಯೆ ನಿರ್ಮಳ ಮುಕ್ತಿ ಕರ್ಮವೆ।
ತನುಮೂಲವದರಿಂದೆ ಬಂಧನ ॥
ತನಗೆಂತು ಮೋಕ್ಷಸಾಧನವಹುದಾ ಕರ್ಮ ।
ಏನಿಯಳೆ ಕೇಳಿದು ಪರಮಾರ್ಥ ॥ 2 ॥

ದೇಹಭಾವವು ನಾಶವಾದರೆ ಸರ್ವಕರ್ಮಗಳಿಂದ ತಾನು ಮುಕ್ತನಾಗುವನು. ಏಕೆಂದರೆ ಶರೀರ ಬರಲಿಕ್ಕೆ ಕರ್ಮವೆ ಮೂಲ ಕಾರಣವಾಗಿದೆ. ಈ ಕರ್ಮದಿಂದಲೇ ಬಂಧನವು ಉಂಟಾಗಿದೆ. ಎಂದ ಮೇಲೆ ಕರ್ಮವು ತನಗೆ ಮೋಕ್ಷಕ್ಕೆ ಎಂತು ಸಾಧನವಾದೀತು ? ಸಾಧನವಾಗಲಾರದೆಂಬ ಭಾವವು.

ಛಲವನುಳಿದು ಕಾಂತೆ ಕೇಳು ನೀನೆಲೆ ಕರ್ಮ ।
ಫಲ ಮುತ್ಪಾದ್ಯ ಪ್ರಾಪ್ಯ ವೈಕಾರ್ಯ ॥
ಬಳಿಕ ಸಂಸ್ಕಾರ್ಯವೆಂಬೀ ನಾಲ್ಕು ತೆರನಿವ ।
ರೊಳಗೊಂದು ಮಲ್ಲವಾ ನಿಜಮುಕ್ತಿ ॥ 3 ॥

ಘಟ ಪುರ ತಂಡುಲ ಮುಕುರವೆಂಬಿವನು ಸಂ ।
ಘಟಿಸಿ ಮಾಡಿದ ನೈದಿದನು ಮತ್ತೆ ॥
ಪಟುವೆನೆ ಪಚಿಸಿದನುರೆ ಬೆಳಗಿದನೆಂಬ ।
ನಟನೆ ತತ್ಫಲ ನಾಲ್ಕರನುಭಾವ ॥ 4 ॥

ಕಾಂತೆಯೆ, ನೀನು ಛಲವನ್ನು ಬಿಟ್ಟು ಕೇಳು, ಯಾವದೇ ಕರ್ಮಕ್ಕೆ ಫಲಗಳು ನಾಲ್ಕು. ಅವು ಯಾವವೆಂದರೆ ಉತ್ಪಾದ್ಯ, ಪ್ರಾಪ್ಯ, ವೈಕಾರ್ಯ ಮತ್ತು ಸಂಸ್ಕಾರ್ಯಗಳೆಂಬಿವು. ಆದರೆ ನಿರ್ಮಳ ಮುಕ್ತಿಯು ಕರ್ಮದ ಈ ನಾಲ್ಕು ಫಲಗಳಲ್ಲಿ ಯಾವದೂ ಅಲ್ಲ. ಕ್ರಮವಾಗಿ ಘಟವನ್ನು ಮಾಡಿದೆನೆಂಬದು ಉತ್ಪಾದ್ಯವು. ಪಟ್ಟಣಕ್ಕೆ ತಲುಪಿದೆನೆಂಬುದು ಪ್ರಾಪ್ಯವು. ಅಕ್ಕಿಯನ್ನು ಪಾಕ ಮಾಡಿದೆನೆಂಬದು ವೈಕಾರ್ಯವು. ಕನ್ನಡಿಯನ್ನು ಬೆಳಗಿದೆನೆಂಬದು ಸಂಸ್ಕಾರ್ಯವು. ಹೀಗೆ ಈ ನಾಲ್ಕು ದೃಷ್ಟಾಂತಗಳು ಕರ್ಮದ ಫಲಗಳನ್ನು ಸೂಚಿಸುತ್ತವೆ.

ಅದರಿಂದ ಮಿದರೊಳಾವುದುಮೆನಲಿಲ್ಲವಾ ।
ಸದಮಳ ನಿಷ್ಕಳ ವಿಭು ನಿತ್ಯ ॥
ಪದವಾದ ಮೋಕ್ಷವದು ಕರ್ಮದಿಂದ ಮೆಂ ।
ಬುದು ಪುಸಿ ತನ್ನನರಿಯೆ ಮುಕ್ತಿ ॥ 5 ॥

ಆ ಸದಮಳ ನಿಷ್ಕಳವಾದ ಹಾಗೂ ವಿಭು ನಿತ್ಯಪದವಾದ ಮೋಕ್ಷವು ಈ ನಾಲ್ಕು ಫಲಗಳಲ್ಲಿ ಯಾವದೂ ಅಲ್ಲ. ಮೋಕ್ಷವು ಯಾವ ಕರ್ಮದಿಂದಲೂ ಫಲಿಸಲರಿಯದು. ತನ್ನ ನಿಜ ಸ್ವರೂಪವನ್ನು ಯಾವನು ಮರೆತಿರುವನೋ ಅವನೇ ಅದನ್ನು ತಿಳಿದರೆ ಮುಕ್ತನಾಗುವನು.

ಸೊಡರಿಂದಲ್ಲದೆ ಕೆಡದು ಕತ್ತಲೆಯಂತೆ ।
ಮಡದಿ ಕೇಳ್ಕೋಟಿ ಸತ್ಕ್ರಿಯೆಯಿಂದ ॥
ಕೆಡದಲರಿಯದು ಬಂಧವದು ತನ್ನನರಿದೊಡೆ ।
ಕೆಡುಗು ಮಿಂತಿದು ಸಿದ್ಧವಸಿಯಳೆ ॥ 6 ॥

ಪ್ರಿಯಳೆ, ದೀಪದಿಂದಲ್ಲದೆ ಇನ್ನಾವ ಸಾಧನ (ಕರ್ಮ) ದಿಂದಲೂ ಕತ್ತಲೆ ಹೇಗೆ ನಾಶವಾಗುವದಿಲ್ಲವೋ ಹಾಗೆ ಕೋಟಿ ಸತ್ಕ್ರಿಯೆಗಳನ್ನು ಮಾಡಿದರೂ, ಅಜ್ಞಾನವು ನಾಶವಾಗುವದಿಲ್ಲ. ಆದರೆ ಬಂಧವೆಂಬ ಕತ್ತಲೆಯು ತನ್ನ ಸ್ವರೂಪಜ್ಞಾನವೆಂಬ ಜ್ಯೋತಿಯಿಂದ ಕೆಡುವದು. ಇದು ಅನುಭವದಿಂದ ಸಿದ್ಧವಾದುದು.

ಕೊರಡಿನ ಚೋರ ಭೀತಿಯು ಮದ್ದುಗುಡಿದೊಡೆ।
ಪರಿವುದೆ ತಿಳಿದಲ್ಲದಿಳೆಯೊಳು॥
ಪರಿಭವ ಕಾರಣಾವಿದ್ಯೆ ಕೆಡದು ತನ್ನ।
ಪರಿಯನರಿಯದೆ ಸತ್ಕ್ರಿಯೆಯಿಂದ ॥ 7 ॥

ಮೋಟಮರದಲ್ಲಿ ತೋರಿದ ಚೋರನ ಭೀತಿಯು ಮೋಟಮರವನ್ನು ತಿಳಿದಲ್ಲದೆ ಲೋಕದೊಳಗೆ ಔಷಧೋಪಚಾರದಿಂದ ಕೆಡಲಾರದು. ಅದರಂತೆ ಸಂಸಾರ ದುಃಖಕ್ಕೆ ಮೂಲ ಕಾರಣವಾದ ಅವಿದ್ಯೆಯು ತನ್ನ ಸ್ವರೂಪವನ್ನು ತಿಳಿಯುವದರಿಂದ ಮಾತ್ರ ನಾಶವಾಗುತ್ತದೆ. ಪರಂತು ಸತ್ಕರ್ಮಗಳನ್ನು ಮಾಡುವದರಿಂದ ನಾಶವಾಗದು.

ಒಂದು ಕರ್ಮದೆ ಮೋಕ್ಷವೆಂದೊಡುಳಿದ ಕರ್ಮ।
ವಂದು ನಿರರ್ಥವೆಲ್ಲವರಿಂದೆ।
ಎಂದೊಡೋರ್ವನಿಗಳವಡದು ತದ್ವಿಧಿಯದ।
ರಿಂದೆ ಮುಕ್ತಿಗೆ ಸಾಧನವೆಯಲ್ಲ॥ 8 ॥

ಒಂದು ವಿಶಿಷ್ಟ ಕರ್ಮದಿಂದ ಮೋಕ್ಷ ಪ್ರಾಪ್ತವಾಗುತ್ತದೆ ಎಂದದ್ದಾದರೆ, ಉಳಿದ ಕರ್ಮಗಳೆಲ್ಲ ನಿರರ್ಥಕವಾಗುತ್ತವೆ. ಇನ್ನು ಸಕಲ ಕರ್ಮಗಳನ್ನು ಮಾಡಿದಾಗ ಮೋಕ್ಷವೆಂದರೆ ಒಬ್ಬನಿಗೆ ಎಲ್ಲ ಕರ್ಮಗಳನ್ನು ಮಾಡಲು ಸಾಧ್ಯವಿಲ್ಲ. ಆದ ಕಾರಣ ಯಾವ ಕರ್ಮವೂ ಮುಕ್ತಿಗೆ ಸಾಧನವಲ್ಲ.

ತನಗೆಲ್ಲ ಕರ್ಮದೊಳಿನಿಸೇನು ಕರ್ತೃವಿ।
ಲ್ಲೆನೆ ಕಂಡಾತನೆ ಯೋಗಿಯೆನಿಪನು॥
ವನಿತೆ ಕೇಳೇನಾನು ಕರ್ತವ್ಯ ಮುಂಟೆಂದು।
ತನಗರಿದವನರೆಮರುಳಲ್ತೆ ॥ 9 ॥

ಸ್ತ್ರೀಯಳೆ ಕೇಳು, ಯಾವ ಕರ್ಮದಲ್ಲಿಯೂ ತನಗೆ ಎಳ್ಳಷ್ಟು ಕರ್ತವ್ಯವಿಲ್ಲವೆಂದು ಯಾವನು ತಿಳಿಯುವನೊ, ಅವನೆ ನಿಜಯೋಗಿಯೆನಿಸುವನು. ತನಗೆ ಏನಾದರೂ ಕರ್ತವ್ಯವುಂಟೆಂದು ತಿಳಿದವನು ಅರೆ ಮರುಳನೆ ಸರಿ.

ಅರಿವಿನಹಂಭಾವ ಕ್ರಿಯೆ ಪರಿದಲ್ಲದೆ।
ಪರಿಯದು ಭವಬಂಧವೆಂಬಲ್ಲಿ॥
ನೆರೆತಿಂಗಳೆನೆಮೊಗದಳೆ ಕೇಳು ವರಯೋಗಿ।
ಮರೆದೊಮ್ಮೆ ಮಾಳ್ಪನೆ ಕ್ರಿಯೆಗಳ ॥ 10 ॥

ಚಂದ್ರಮುಖಿಯೆ ಕೇಳು ಅರಿವಿನ ಅಹಂಭಾವದಿಂದ ಜನಿಸುವ ಕರ್ತೃತ್ವಮತಿಯು ನಿರಸನವಾಗದೆ ಸಂಸಾರಬಂಧನವು ಪರಿಹಾರವಾಗದು. ಹೀಗಿರುವಲ್ಲಿ ವರಯೋಗಿಯು ಮರೆತಾದರೂ ಒಮ್ಮೆಯೂ ಕರ್ಮವನ್ನು ಮಾಡುವನೇ ? ಮಾಡನೆಂಬ ಭಾವ.

ತನಗೆ ಧರ್ಮಾಧರ್ಮವೆರಡು ಮಧರ್ಮವೆಂ।
ದೆನಿಪವು ಜನನವೀವುದರಿಂದೆ॥
ಮುನಿವನಿತಾಜನವಂದಿತೆ ತತ್ಕರ್ಮ।
ವನು ಬಲ್ಲವರ್ ಮಾಡಲೊಲಿವರೆ॥ 11 ॥

ಮುನಿಪತ್ನಿಯರಿಂದ ವಂದಿತಳಾದ ಮೈತ್ರೇಯಿ, ತನಗೆ ಧರ್ಮಾಧರ್ಮಗಳೆರಡೂ ಅಧರ್ಮಗಳೆ ಆಗಿರುವವು. ಯಾಕೆಂದರೆ ಅವುಗಳೆರಡೂ ಪುನರ್ಜನ್ಮಕ್ಕೆ ಕಾರಣಗಳಾಗಿರುತ್ತವೆ. ಆದ್ದರಿಂದ ಜ್ಞಾನಿಗಳು ಅಂಥ ಕರ್ಮಗಳನ್ನು ಮಾಡಲು ಎಂದೂ ಒಲಿಯುವದಿಲ್ಲ.

ಮೊದಲು ಪುಣ್ಯದ ಫಲವದು ತಾನೆ ಬಳಿಕ ಪಾ।
ಪದ ಫಲವಾ ಪಾಪ ಫಲವದು॥
ಮೊದಲು ದುಃಖವ ನೀವುದದು ತಾನೆ ತಿಳಿಯಲ್ಕೆ।
ತುದಿಯೊಳೊಂದಿಸುವದು ಸುಖದಲ್ಲಿ॥ 12 ॥

ಉಪಭೋಗ ಕಾಲದೊಳತಿಶಯ ಸುಖವಹುದು।
ನಿಪತಿತಂಗೆ ದುಃಖವೆಲೆ ಮತ್ತೆ॥
ಉಪಮಿಸೆ ನಾಕದೊಳಹುದಿಂತಿವೆರಡರ।
ವಿಪರೀತವ್ವೆಸೆ ನರಕದೊಳು॥ 13 ॥

ಮೊದಲು ಪುಣ್ಯದ ಫಲವಾದ ಸುಖವು ಪ್ರಾಪ್ತವಾಗುತ್ತದೆ. ನಂತರ ಅದೇ ಪಾಪದ ಫಲವಾದ ದುಃಖವಾಗುತ್ತದೆ. ಪಾಪದ ಫಲವು ಮೊದಲು ದುಃಖವನ್ನು ಕೊಟ್ಟು ಕೊನೆಯಲ್ಲಿ ಸುಖವನ್ನು ಕೊಡುತ್ತದೆ. ಇದನ್ನು ಹೋಲಿಸಿ ನೋಡಲು ಸ್ವರ್ಗದಲ್ಲಿ ಈ ಪ್ರಕಾರ ಫಲವಿದ್ದು ನರಕದಲ್ಲಿ ಇದರ ವಿರುದ್ಧ ಫಲಗಳಿವೆ ಎಂದರೆ ಸ್ವರ್ಗದಲ್ಲಿ ಮೊದಲು ಪುಣ್ಯದ ಫಲವಾದ ಸುಖವನ್ನು ಭೋಗಿಸಿ ಅನಂತರ ಪುಣ್ಯ ಕ್ಷಯವಾಗುವದಲ್ಲ ಎಂಬ ದುಃಖ, ಸಾತಿಶಯ ದುಃಖ ಹಾಗೂ ಪತನವಾಗುವ ದುಃಖಗಳನ್ನು ಭೋಗಿಸ ಬೇಕಾಗುತ್ತದೆ. ಇನ್ನು ನರಕದಲ್ಲಿ ತದ್ವಿಪರೀತವಾಗಿ ಮೊದಲು ಪಾಪದ ಫಲವಾದ ದುಃಖವನ್ನು ಅನುಭವಿಸಿ ನಂತರ ಪಾಪ ಕ್ಷಯವಾಗಿ ಈ ದುಃಖದಿಂದ ಬಿಡುಗಡೆ ಹೊಂದುವೆನೆಂಬ ಸುಖವುಂಟಾಗುವದು. ಇದಕ್ಕೆ ಒಂದು ದೃಷ್ಟಾಂತ. ಒಬ್ಬ ದುಷ್ಟ ಮಗ, ಒಬ್ಬ ಶಿಷ್ಟ ಮಗ ಹೀಗೆ ಇರುತ್ತಾರೆ. ಇವರು ಕ್ರಮವಾಗಿ ದುಃಖ ಮತ್ತು ಸುಖವನ್ನುಂಟು ಮಾಡುವರು. ಅಕಸ್ಮಾತ್ ದುಷ್ಟಮಗ ಸತ್ತರೆ ಮೈಖಜ್ಜಿ ಹೋದಂತೆ ಎನ್ನುವರು. ಅದಕ್ಕೆ

ವಿಪರೀತವಾಗಿ ಶಿಷ್ಯಮಗ ಸತ್ತರೆ ದುಃಖವಾಗುವದು. ಇದೇ ಅರ್ಥದಲ್ಲಿ ಸರ್ವಜ್ಞ ಮೂರ್ತಿಯು–ಸಜ್ಜನರು ಸತ್ತೊಡನೆ ನಿರ್ಜರರು ಮರಗುವರು। ದುರ್ಜನರು ಸಾಯೆ ತನ್ನ ಮೈ ಖಜ್ಜಿ ಹೋದಂತೆ ಸರ್ವಜ್ಞ॥ ಎಂದಿದ್ದಾನೆ.

– ಇತಿ ಜ್ಞಾನೋತ್ಕರ್ಷ ನಿರೂಪಣೆ.

ಇನ್ನು ಯೋಗೀಶ್ವರನಿಗೆ ಕರ್ಮಕ್ಕೆ ಅಧಿಕಾರವಿಲ್ಲವೆಂದು ಹೇಳುತ್ತಾರೆ –

## 17ನೇ ಸೂತ್ರ

ಶ್ರುತಿ ನೀನೆವಿಪ್ರನೆಂದೆನೆ ಮಾಳ್ಕೆ ವಿಧಿಗಳ ।
ಶ್ರುತಿ ಬ್ರಹ್ಮವೆನೆ ಮಾಳ್ಪುದಹುದೆಂತು ॥

ಶ್ರುತಿಯು ನೀನು ಬ್ರಾಹ್ಮಣ (ವರ್ಣಕ್ಕೆ ಸೇರಿದವ)ನೆಂದು ಅಂಗೀಕರಿಸಿದರೆ ನೀನು ಕರ್ಮಗಳನ್ನು ಮಾಡಬೇಕು. ಪರಂತು ಆ ಶ್ರುತಿಯು ನೀನು ಬ್ರಹ್ಮನೆಂದು ಹೇಳಿರುವದರಿಂದ ನೀನು ಕರ್ಮಗಳನ್ನು ಹೇಗೆ ಮಾಡಬಲ್ಲೆ? ಮಾಡಲಾರೆ ಎಂಬ ಭಾವ.

ತನಗೆ ಕರ್ಮದಿನಾದ ಭವಬಾಧೆಯದರಿಂದೆ।
ಘನವಪ್ಪುದಲ್ಲದೆ ಪರಿಯದು ॥
ವನಿತೆ ಕೇಳೆಲೆ ದುಃಖಮೊಗೆದುದರಿಂದೆ।
ಘನವಪ್ಪುದದು ಪಿಂಗದಿಹಪಾಂಗು ॥ 1 ॥

ನಿನಗೆ ಕರ್ಮದಿಂದಲೇ ಭವಬಂಧವಾಗಿರುವದು. ಆದ್ದರಿಂದ ಪುನಃ ಕರ್ಮಮಾಡುವದರಿಂದ ಬಂಧನವು ಮತ್ತಷ್ಟು ಗಟ್ಟಿಗೊಳ್ಳುವದಲ್ಲದೆ, ಆದರಿಂದ ಬಂಧನವು ನಾಶವಾಗುವದಿಲ್ಲ. ಮಡದಿಯೆ ಕೇಳು, ಕರ್ಮದಿಂದ ದುಃಖೋತ್ಪತ್ತಿಯಾಗುವದರಿಂದ ಪುನಃ ಅದರಿಂದ ದುಃಖವೆ ವೃದ್ಧಿಯಾಗುವದಲ್ಲದೆ, ಅದು ಪರಿಹಾರವಾಗದು.

ಅನಲನಿಂದಾದ ನೋವದು ಮೇಣನಲನಿಂದೆ।
ಘನವಹುದದು ಕೆಡಲರಿಯದು ॥
ಇನಿಯಳೆ ನೋಡು ಕರ್ಮದೊಳಾದ ಭವವದು।
ಘನವಕ್ಕುಮಳಿಯದಾಕ್ರಿಯೆಯಿಂದ ॥ 2 ॥

ಪ್ರಿಯಳೆ, ಬೆಂಕಿಯಿಂದಾದ ಗಾಯವು ಪುನಃ ಅದಕ್ಕೆ ಬೆಂಕಿ ತಗುಲಿದರೆ ನೋವು ಘನವಾಗುವದಲ್ಲದೆ ಮಾಯದು. ಹಾಗೆಯೆ ಕರ್ಮದಿಂದಾದ ಭವದುಃಖವು ಪುನಃ ಕರ್ಮವನ್ನೇ ಮಾಡುವದರಿಂದ ನಾಶವಾಗದೆ ದುಃಖವು ಅಧಿಕವಾಗುತ್ತದೆ.

ತನುವೆ ನೀನೆಲೆ ಮನುಜನೆ ನೀನು ವಿಪ್ರ ನೀ।
ನೆನೆ ಶ್ರುತಿ ಕರ್ಮವೆ ಕರಣೀಯ॥
ತನು ಜಾತಿ ರಹಿತ ನೀನಾ ಪರಬ್ರಹ್ಮಮೆಂ।
ದೆನಲೆಂತು ರಚಿಪನಾ ಕ್ರಿಯೆಗಳ ॥ 3 ॥

ಶ್ರುತಿಯು, ನೀನು ಶರೀರ, ನೀನು ಮನುಷ್ಯನು, ನೀನು ಬ್ರಾಹ್ಮಣನು ಎಂದು ಹೇಳಿದರೆ ಕರ್ಮ ಮಾಡುವದು ನಿನ್ನ ಕರ್ತವ್ಯವು. ಆದರೆ ನೀನು ನಿರ್ದೇಹಿ ಜಾತಿರಹಿತನಾದ ಪರಬ್ರಹ್ಮನೆಂದು ಶ್ರುತಿಯು ವಿಧಿಸಿರಲು ನೀನು ಕರ್ಮಗಳನ್ನು ಹೇಗೆ ಮಾಡುವೆ ?

ತನುವಿದು ತಾನೆಂಬ ತನು ತನ್ನದೆಂದೆಂಬ।
ತನು ಮೂಲವಾಗಿ ರಚಿಸುವದು॥
ತನುವಿಲಕ್ಷಣ ನಿತ್ಯಮುಕ್ತನೆ ತಾನೆಂಬ।
ವನು ಮಾಳ್ಪನೆಂತು ತತ್ಕ್ರಿಯೆಗಳ ॥ 4 ॥

ಈ ಶರೀರ ತಾನು ಶರೀರ ತನ್ನದು ಎಂದರೆ ಶರೀರದ ಮೂಲಕ ಕರ್ಮ ಘಟಿಸುವದು. ಆದರೆ ತಾನು ತನುವಿಲಕ್ಷಣನು ನಿತ್ಯಮುಕ್ತನು ಎಂದರೆ ಆ ಕರ್ಮಗಳನ್ನು ಹೇಗೆ ಮಾಡುವನು ? ಮಾಡಲಾರನೆಂಬ ಅಭಿಪ್ರಾಯ.

ತನುವಿದು ತಾನುಮೀ ಜಗವಿದು ನಿಜವೆಂಬ।
ಮನುಜಂಗೆ ಕರ್ಮವೆ ಕರಣೀಯ।
ತನುಮೊದಲೆನಿಸುವಿದನು ಪುಸಿಯೆಂದೆಂಬ।
ವನೆಂತು ಮಾಳ್ಪನಾ ಕ್ರಿಯೆಗಳ ॥ 5 ॥

ಈ ಶರೀರ ತಾನು, ಈ ಜಗತ್ತು ಸತ್ಯವೆಂದು ತಿಳಿದ ಮನುಷ್ಯನಿಗೆ ಕರ್ಮವು ಕರ್ತವ್ಯವಾಗಿದೆ. ಶರೀರ ಮೊದಲ್ಗೊಂಡು ನಾಮರೂಪಾತ್ಮಕ ಜಗತ್ತೆಲ್ಲವೂ ಪುಸಿದೋರಿಕೆಯೆಂದು ತಿಳಿದ ಪುರುಷನು ಕರ್ಮಗಳನ್ನು ಹೇಗೆ ಮಾಡಿಯಾನು ?

ದುರಿತವನುರೆ ಪರಿಹರಿಸುವೆಡೆಗೆ ಕರ್ಮ।
ಕರಣೀಯ ಮತಿಶಯದುಷ್ಕೃತಿ॥
ಕರವದು ತಾನೆಂದು ತಿಳಿದ ನಿರ್ಮಳ ಬುದ್ಧಿ।
ವರನೆಂತು ಮಾಳ್ಪನಾ ಕ್ರಿಯೆಗಳ ॥ 6 ॥

ಪಾಪ ಪರಿಹಾರಕ್ಕಾಗಿ ಕರ್ಮವು ಮಾಡತಕ್ಕದ್ದಾಗಿದೆ. ಆದರೆ ಕರ್ಮದಿಂದ ಅತ್ಯಧಿಕ ಪಾಪ ಘಟಿಸುವದೆಂದು ತಿಳಿದ ಯೋಗಿವರನು ಅಂತಹ ಕರ್ಮಗಳನ್ನು ತಾನೆ ಹೇಗೆ ಮಾಡುವನು ? ಮಾಡಲಾರನು.

– ಇತಿ ಯೋಗೀಶ್ವರಂಗೆ ಕರ್ಮಾಧಿಕಾರ ನಿಷೇಧ ನಿರೂಪಣೆ –



ಈಗ ಯೋಗಿವರನಿಗೆ ಕರ್ಮ ಪರತೆಯನ್ನು ನಿರೂಪಿಸುತ್ತಾರೆ.

## 18ನೇ ಸೂತ್ರ

ಕರ್ಮದೆ ಭವದುಃಖವೆಂತೆಸಗುವನು ನಿ- ।
ಷ್ಕರ್ಮಿನಿತ್ಯಾನಂದನಿಜಯೋಗಿ ॥

(ಪುಣ್ಯ–ಪಾಪ) ಯಾವದೇ ಕರ್ಮವು ಜನನ–ಮರಣ ದುಃಖಕ್ಕೆ ಕಾರಣವಾಗುವದೆಂದು ತಿಳಿದ ನಿಜಯೋಗಿ ಮತ್ತೆಕರ್ಮವನ್ನೆಂತು ಮಾಡುವನು ? ತಾನೆ ನಿಷ್ಕ್ರಿಯನು, ನಿತ್ಯಾನಂದನು, ಗತಿಗೆ (ಟಿ) ಗತಿಯಾದವನು ಮರೆತಾದರೂ ಕರ್ಮ ಮಾಡನು.

ಭವಬಂಧವಳಿಯದ ಭವಿಯೆನಿಸುವನನು-।
ದಿವಸವೆಸಗುವೀ ಕರ್ಮಂಗಳು ॥
ಭವದುಃಖ ಬೀಜವದಹುದೆಂದು ತಿಳಿದನು-।
ಭವಿಯೆಂತು ಮಾಳ್ಪನಾಕ್ರಿಯೆಗಳ ॥ 1 ॥

ಅನುದಿನವು ತಾನೆಸಗುವ ಕರ್ಮಗಳಿಂದ ಭವ ಬಂಧನವು ಅಳಿಯದೆ ಮತ್ತಷ್ಟು ವೃದ್ಧಿಯಾಗುವದು, ಎಂಬುದನ್ನರಿಯದವ ಮೂಢನೆನಿಸುವನು. ಲೌಕಿಕ, ವೈದಿಕ ಕರ್ಮಗಳು ಜನನ ಮರಣ ದುಃಖಗಳಿಗೆ ಬೀಜವಾಗಿವೆ. ಎಂದು ತಿಳಿದ ಅನುಭಾವಿಯು ಜಡವಾದ ಕರ್ಮಗಳನ್ನು ಹೇಗೆ ಮಾಡುವನು ? (ಮಾಡಲಾರನೆಂಬ ಭಾವ)

ತನು ಮಾನಸೇಂದ್ರಿಯಾದಿಗಳಿಗಧಿಕ ಬಾಧೆ।
ಜನಿಸುಗುಮಾ ಕರ್ಮ ಕೃತಿಯಿಂದ ॥
ಇನಿತೆಲ್ಲವನು ತನ್ನನುಭವದಿಂದರಿ-
ದವನೆಂತು ಮಾಳ್ಪನಾ ಕ್ರಿಯೆಗಳ ॥ 2 ॥

ಕರ್ಮಗಳನ್ನು ಮಾಡುವದರಿಂದ ಶರೀರ, ಮನಸ್ಸು, (ದಶ) ಇಂದ್ರಿಯಗಳಿಗೆ ಅಧಿಕ ಬಾಧೆಯುಂಟಾಗುವದು. ಇದನ್ನು ತನ್ನ ಅನುಭವದಿಂದ ಅರಿದ ಯೋಗೀಶ್ವರನು ಆ ಕ್ರಿಯೆಗಳನೆಂತು ಮಾಳ್ಪನು ? (ಮಾಡಲಾರನೆಂಬ ಭಾವ).

''ಮನದಿಂದ ಕರ್ಮವ ನೆನೆದೊಡೆ ದುಃಖ ಸಂ-
ಜನಿಪುದೆಂದೆನೆ ಕರ್ಮವದು ನೋಡೆ ॥
ಇನಿತುಮಾನಂದ ಜನಕವಲ್ಲಮೆಂದು ಬ-
ಲ್ಲನದೆಂತು ಮಾಳ್ಪನಾ ಕ್ರಿಯೆಗಳ ॥ 3 ॥

[ ಟಿಪ್ಪಣಿ :– ಆಧೇಯ ಮಾಯೆಯ ಕ್ರಿಯಾ ಕಲಾಪಗಳು ಮರೆಯಾಗಿ ಆಧಾರವಾದ ಬ್ರಹ್ಮವೆ ತಾನಾದ ಕೃತಕೃತ್ಯ ಜ್ಞಾನಿಯು ಯಾವದನ್ನು ಕಾಮಿಸಿ, ಯಾರ ಪ್ರೀತಿಗೋಸುಗ ಶರೀರಭಾವದಿಂದ ದುಃಖಿ ಪಡುವನು? 'ಕಿಮಿಚ್ಛನ್ ಕಸ್ಯ ಕಾಮಾಯ ಶರೀರ ಮನುಸಂಜ್ವರೇತ್ ! (ಬೃ. ಉಪ.) ]

ತನುವೆ ನೀನೆಲೆ ಮನುಜನೆ ನೀನು ವಿಪ್ರ ನೀ।
ನೆನೆ ಶ್ರುತಿ ಕರ್ಮವೆ ಕರಣೀಯ ॥
ತನು ಜಾತಿ ರಹಿತ ನೀನಾ ಪರಬ್ರಹ್ಮಮೆಂ।
ದೆನಲೆಂತು ರಚಿಪನಾ ಕ್ರಿಯೆಗಳ ॥ 3 ॥

ಶ್ರುತಿಯು, ನೀನು ಶರೀರ, ನೀನು ಮನುಷ್ಯನು, ನೀನು ಬ್ರಾಹ್ಮಣನು ಎಂದು ಹೇಳಿದರೆ ಕರ್ಮ ಮಾಡುವದು ನಿನ್ನ ಕರ್ತವ್ಯವು. ಆದರೆ ನೀನು ನಿರ್ದೇಹಿ ಜಾತಿರಹಿತನಾದ ಪರಬ್ರಹ್ಮನೆಂದು ಶ್ರುತಿಯು ವಿಧಿಸಿರಲು ನೀನು ಕರ್ಮಗಳನ್ನು ಹೇಗೆ ಮಾಡುವೆ ?

ತನುವಿದು ತಾನೆಂಬ ತನು ತನ್ನದೆಂದೆಂಬ।
ತನು ಮೂಲವಾಗಿ ರಚಿಸುವದು ॥
ತನುವಿಲಕ್ಷಣ ನಿತ್ಯಮುಕ್ತನೆ ತಾನೆಂಬ।
ವನು ಮಾಳ್ಪನೆಂತು ತತ್ಕ್ರಿಯೆಗಳ ॥ 4 ॥

ಈ ಶರೀರ ತಾನು ಶರೀರ ತನ್ನದು ಎಂದರೆ ಶರೀರದ ಮೂಲಕ ಕರ್ಮ ಘಟಿಸುವದು. ಆದರೆ ತಾನು ತನುವಿಲಕ್ಷಣನು ನಿತ್ಯಮುಕ್ತನು ಎಂದರೆ ಆ ಕರ್ಮಗಳನ್ನು ಹೇಗೆ ಮಾಡುವನು ? ಮಾಡಲಾರನೆಂಬ ಅಭಿಪ್ರಾಯ.

ತನುವಿದು ತಾನುಮೀ ಜಗವಿದು ನಿಜವೆಂಬ।
ಮನುಜಂಗೆ ಕರ್ಮವೆ ಕರಣೀಯ।
ತನುಮೊದಲೆನಿಸುವಿದನು ಪುಸಿಯೆಂದೆಂಬ।
ವನೆಂತು ಮಾಳ್ಪನಾ ಕ್ರಿಯೆಗಳ ॥ 5 ॥

ಈ ಶರೀರ ತಾನು, ಈ ಜಗತ್ತು ಸತ್ಯವೆಂದು ತಿಳಿದ ಮನುಷ್ಯನಿಗೆ ಕರ್ಮವು ಕರ್ತವ್ಯವಾಗಿದೆ. ಶರೀರ ಮೊದಲ್ಗೊಂಡು ನಾಮರೂಪಾತ್ಮಕ ಜಗತ್ತೆಲ್ಲವೂ ಪುಸಿದೋರಿಕೆಯೆಂದು ತಿಳಿದ ಪುರುಷನು ಕರ್ಮಗಳನ್ನು ಹೇಗೆ ಮಾಡಿಯಾನು ?

ದುರಿತವನುರೆ ಪರಿಹರಿಸುವೆಡೆಗೆ ಕರ್ಮ।
ಕರಣೀಯ ವತಿಶಯದುಷ್ಕೃತಿ ॥
ಕರವದು ತಾನೆಂದು ತಿಳಿದ ನಿರ್ಮಳ ಬುದ್ಧಿ।
ವರನೆಂತು ಮಾಳ್ಪನಾ ಕ್ರಿಯೆಗಳ ॥ 6 ॥

ಪಾಪ ಪರಿಹಾರಕ್ಕಾಗಿ ಕರ್ಮವು ಮಾಡತಕ್ಕದ್ದಾಗಿದೆ. ಆದರೆ ಕರ್ಮದಿಂದ ಅತ್ಯಧಿಕ ಪಾಪ ಘಟಿಸುವದೆಂದು ತಿಳಿದ ಯೋಗಿವರನು ಅಂತಹ ಕರ್ಮಗಳನ್ನು ತಾನೆ ಹೇಗೆ ಮಾಡುವನು ? ಮಾಡಲಾರನು.

– ಇತಿ ಯೋಗೀಶ್ವರಂಗೆ ಕರ್ಮಾಧಿಕಾರ ನಿಷೇಧ ನಿರೂಪಣೆ –

ಈಗ ಯೋಗಿವರನಿಗೆ ಕರ್ಮ ವಿರತಿಯನ್ನು ನಿರೂಪಿಸುತ್ತಾರೆ.

## 18ನೇ ಸೂತ್ರ

ಕರ್ಮದೆ ಭವದುಃಖವೆಂತೆಸಗುವನು ನಿ- ।
ಷ್ಕರ್ಮಿನಿತ್ಯಾನಂದನಿಜಯೋಗಿ ॥

(ಪುಣ್ಯ–ಪಾಪ) ಯಾವದೇ ಕರ್ಮವು ಜನನ–ಮರಣ ದುಃಖಕ್ಕೆ ಕಾರಣವಾಗುವದೆಂದು ತಿಳಿದ ನಿಜಯೋಗಿ ಮತ್ತೆಕರ್ಮವನ್ನೆಂತು ಮಾಡುವನು ? ತಾನೆ ನಿಷ್ಕ್ರಿಯನು, ನಿತ್ಯಾನಂದನು, ಗತಿಗೆ (ಟಿ) ಗತಿಯಾದವನು ಮರೆತಾದರೂ ಕರ್ಮ ಮಾಡನು.

ಭವಬಂಧವಳಿಯದ ಭವಿಯೆನಿಸುವನನು-।
ದಿವಸವೆಸಗುವೀ ಕರ್ಮಂಗಳು ॥
ಭವದುಃಖ ಬೀಜವದಹುದೆಂದು ತಿಳಿದನು-।
ಭವಿಯೆಂತು ಮಾಳ್ಪನಾಕ್ರಿಯೆಗಳ ॥ 1 ॥

ಅನುದಿನವು ತಾನೆಸಗುವ ಕರ್ಮಗಳಿಂದ ಭವ ಬಂಧನವು ಅಳಿಯದೆ ಮತ್ತಷ್ಟು ವೃದ್ಧಿಯಾಗುವದು, ಎಂಬುದನ್ನರಿಯದವ ಮೂಢನೆನಿಸುವನು. ಲೌಕಿಕ, ವೈದಿಕ ಕರ್ಮಗಳು ಜನನ ಮರಣ ದುಃಖಗಳಿಗೆ ಬೀಜವಾಗಿವೆ. ಎಂದು ತಿಳಿದ ಅನುಭಾವಿಯು ಜಡವಾದ ಕರ್ಮಗಳನ್ನು ಹೇಗೆ ಮಾಡುವನು ? (ಮಾಡಲಾರನೆಂಬ ಭಾವ)

ತನು ಮಾನಸೇಂದ್ರಿಯಾದಿಗಳಿಗಧಿಕ ಬಾಧೆ।
ಜನಿಸುಗುಮಾ ಕರ್ಮ ಕೃತಿಯಿಂದ ॥
ಇನಿತೆಲ್ಲವನು ತನ್ನನುಭವದಿಂದರಿ-
ದವನೆಂತು ಮಾಳ್ಪನಾ ಕ್ರಿಯೆಗಳ ॥ 2 ॥

ಕರ್ಮಗಳನ್ನು ಮಾಡುವದರಿಂದ ಶರೀರ, ಮನಸ್ಸು, (ದಶ) ಇಂದ್ರಿಯಗಳಿಗೆ ಅಧಿಕ ಬಾಧೆಯುಂಟಾಗುವದು. ಇದನ್ನು ತನ್ನ ಅನುಭವದಿಂದ ಅರಿದ ಯೋಗೀಶ್ವರನು ಆ ಕ್ರಿಯೆಗಳನೆಂತು ಮಾಳ್ಪನು ? (ಮಾಡಲಾರನೆಂಬ ಭಾವ).

"ಮನದಿಂದ ಕರ್ಮವ ನೆನೆದೊಡೆ ದುಃಖ ಸಂ-
ಜನಿಪುದೆಂದೆನೆ ಕರ್ಮವದು ನೋಡೆ ॥
ಇನಿತುಮಾನಂದ ಜನಕವಲ್ಲಮೆಂದು ಬ-
ಲ್ಲನದೆಂತು ಮಾಳ್ಪನಾ ಕ್ರಿಯೆಗಳ ॥ 3 ॥

[ ಟಿಪ್ಪಣಿ :– ಆಧೇಯ ಮಾಯೆಯ ಕ್ರಿಯಾ ಕಲಾಪಗಳು ಮರೆಯಾಗಿ ಆಧಾರವಾದ ಬ್ರಹ್ಮವೆ ತಾನಾದ ಕೃತಕೃತ್ಯ ಜ್ಞಾನಿಯು ಯಾವದನ್ನು ಕಾಮಿಸಿ, ಯಾರ ಪ್ರೀತಿಗೋಸುಗ ಶರೀರಭಾವದಿಂದ ದುಃಖ ಪಡುವನು? 'ಕಿಮಿಚ್ಛನ್ ಕಸ್ಯ ಕಾಮಾಯ ಶರೀರ ಮನುಸಂಜ್ವರೇತ್ ! (ಬೃ. ಉಪ.) ]

(ಕರ್ಮಮಾಡದೆ) ಮನಸ್ಸಿನಿಂದ ಕರ್ಮ (ಹಾಗೂ ಅದರ ಫಲ) ನೆನೆದರೆ ಸಾಕು, ಅದು ದುಃಖಗೊಡುವದು. ಮಾನಸಿಕ ಕರ್ಮವೂ ಸಹ 'ಆನಂದಜನಕ'ವಲ್ಲ ಎಂದು ಬಲ್ಲವನೆಂತು ಕ್ರಿಯೆಗಳನ್ನು ಮಾಳ್ಪನು.

ಏತೆರದಿಂದೆ ದುಃಖಾತಿಶಯವೆ ಕರ್ಮ।
ಜಾತವೀ ತ್ರೈಲೋಕ್ಯದೊಳು ಪರಿ॥
ಪೂತಮಾನಸೆ ಕೇಳು ಸುಖವಿಲ್ಲವೆಂದರಿ- ।
ದೇತಕ್ಕೆ ಮಾಳ್ಕುಮಾ ಕ್ರಿಯೆಗಳ ॥ 4 ॥

ನಿರ್ಮಲ ಮನದ ಮೈತ್ರೇಯಿ, ಕೇಳು, ಈ ರೀತಿ ಅಪರಿಮಿತ ದುಃಖಗೊಡುವ ಕರ್ಮಗಳಿಂದ ಈ ಮೂರು ಲೋಕಗಳು (ಅಂತಃಕರಣ, ಬಾಹ್ಯದಶೇಂದ್ರಿಯ ಮತ್ತು ಪಂಚಭೂತಗಳು) ಹುಟ್ಟಿರುವವು. ಇಲ್ಲಿ ಕಿಂಚಿತ್ ಸುಖವಿಲ್ಲ, ಎಂದು ಅರಿತ ಸುವಿವೇಕಿಯು ಏತಕ್ಕೆ ಕರ್ಮಗಳನ್ನು ಮಾಡುವನು ? (ನಿಷ್ಕಾರಣವಾಗಿ ಕರ್ಮ ಮಾಡನೆಂಬ ಭಾವ)

ಎಳ್ಳಿನನಿತು ಸುಖವಿಲ್ಲವಂತದು ಬೆಟ್ಟ।
ದಲ್ಲಿಂದೆ ಪಿರಿದೆನಿಸುವ ದುಃಖ ॥
ವುಳ್ಳುದಾಗಿಯೇ ಕರ್ಮ ತತಿಯೊಳು ತಿಳಿ।
ಪುರುಳಿಲ್ಲೆಂತು ಮಾಳ್ಕುಮಾ ಕ್ರಿಯೆಗಳ ॥ 5 ॥

ಕರ್ಮಜಾಲದಲ್ಲಿ ಎಳ್ಳಷ್ಟೂ ಸುಖವಿಲ್ಲ, (ಅದರ ಬದಲು) ಬೆಟ್ಟಕ್ಕಿಂತಲೂ ಹಿರಿದಾದ ದುಃಖವಿರುವದು, ಹಪ್ಪಳ ಹುಡಿಯಷ್ಟೂ ಕರ್ಮದಲ್ಲಿಸುಖವಿಲ್ಲವೆಂದು ತಿಳಿದ ಜಾಣರ ದೇವನು ಆ ಕ್ರಿಯೆಗಳನ್ನು ಹೇಗೆ ಮಾಡುವನು ? (ಮಾಡನೆಂಬ ಭಾವ)

ಇಲ್ಲದೊಡೆ ಸುಖಮುಳ್ಳಾಶೆಯನು ತೋರಿ।
ಬಲ್ಲರ ನಾನಾ ಗೋಲೆಯೊಳು ನಿಂತು ॥
ಕೊಲ್ಲದೆ ಬಿಡದಿಳೆಯೊಳು ಕರ್ಮವದರಿಂದೆ।
ಪೊಲ್ಲೆಂತು ಮಾಳ್ಪನಾ ಕ್ರಿಯೆಗಳ ॥ 6 ॥

ಸುಖವಿಲ್ಲದಿದ್ದರೂ (ಇಂದ್ರಿಯಗಳು) ಸುಖದಾಶೆಯನ್ನು ತೋರಿ ಕರ್ಮವೆನಿಸಗುವಂತೆ ಬಲ್ಲವರನ್ನು (ಬ್ರಹ್ಮ ಇಂದ್ರಾದಿ ದೇವತೆಗಳನ್ನು) ನಾನಾ ರೀತಿ ಚಿತ್ರ ಹಿಂಸೆಗೆ ಗುರಿ ಮಾಡುವವು. ಕರ್ಮ ಭೂಮಿಯಲ್ಲಿ ಜನ್ಮತೊಡುವದಕ್ಕೆ (ಪುನರ್ಜನ್ಮ) ಧರ್ಮಾಧರ್ಮರೂಪ ಉಭಯ ಕರ್ಮಗಳು ಕಾರಣವಾಗಿವೆ. ಆದ್ದರಿಂದ ಕರ್ಮವು ಪೊಲ್ಲ ಅಂದರೆ ಹೇಯವಾದುದು. ಇದನ್ನರಿತ ಯೋಗಿವರನು ಕ್ರಿಯೆಗಳನ್ನೆಂತು ಮಾಡುವನು ? (ಮಾಡಲಸಾಧ್ಯ)

ಇಂತು ಕರ್ಮವನೆಸಗಿದೊಡೆ ಬಾಧೆಯದು ದಿ-।
ಗಂತಮಾಗಿರೆ ಪಸರಿಪುದಾಗಿ ॥
ಕಾಂತೆಯೊಂದಿನಿಸು ದುಃಖವನು ಸೈರಿಸದವ-।
ನೆಂತು ಮಾಳ್ಪನು ಪೇಳು ಕ್ರಿಯೆಯನು ॥ 7 ॥

ಇಂತು ಕರ್ಮಮಾಡಿದ್ದಾದರೆ ಅದರ ಬಾಧೆಯು ಅಷ್ಟದಿಕ್ಕುಗಳಲ್ಲಿ ಪಸರಿಸುವದು. ಆದ್ದರಿಂದ (ಕರ್ಮದ ಫಲವಾದ) ದುಃಖವನ್ನು ಸ್ವಲ್ಪಾದರೂ ಸಹನಮಾಡಿಕೊಳ್ಳದವನು ಕ್ರಿಯೆಯನ್ನು ಎಂತು ಮಾಡಬಲ್ಲನು ? ಕಾಂತೆ ನೀನೆ ಹೇಳು.

ಪರಮನೆ ನಿರವಯವನು ಪರಿಪೂರ್ಣನು ।
ನಿರುಪಾಧಿಕನು ನಿರುಪಮನಾಗಿ ॥
ಪರಿಕಿಸುಪಾಯಮೊಂದಿನಿಸಿಲ್ಲವೆನೆ ಯೋಗಿ ।
ವರನೆಂತು ಮಾಳ್ಪನಾ ಕ್ರಿಯೆಗಳ ॥ 8 ॥

ಪರಮಾತ್ಮನೇ ಆಗಿ ವರಯೋಗೀಶ್ವನಿರುವನು. ಅವನ ಲಕ್ಷಣಗಳು.:– 'ನಿರವಯವನು' ಅಂದರೆ ದೇಹ ಇಂದ್ರಿಯ, ಮನಾದಿಕರಣರಹಿತನು. ಗುಣ ಜಾತಿ ಕರ್ಮಾದಿರಹಿತತ್ವದಿಂದ, ಗಗನದಂತೆ ಸ್ವಗತ, ಸಜಾತಿ ವಿಜಾತಿ ಭೇದವಿಲ್ಲದ ಕತದಿಂದ ಪೂರ್ಣನಹನು. ಮಾಯೆ ವಿದ್ಯೆ, ಅವಿದ್ಯೆಗಳೆಂಬ ಉಪಾಧಿಯಿಲ್ಲದವನು. 'ತನು ಬಾಹ್ಯವೆಲ್ಲವನು ಅರಿವುದರಿಂದ, ಮನ ಮಾತುಗಳನು ಮೀರಿರುವದರಿಂದ, ಇನಿತನಿತೆಂದು ಊಹಿಸಬಾರದಿರುವದರಿಂದ, ಅವಿರಳನು, ಅನುಪಮನು. (ಜ್ಞಾನ, ಪ್ರತಿ, ಸ್ಥಳ 32) ಇಂತಹ ಪರಮನನ್ನು ಪರಿಭಾವಿಸುವ ಉಪಾಯ–ಸಾಧನೆಗಳು ಇಹಪರದಲ್ಲಿ ಒಂದಾದರೂ ಇರುವದಿಲ್ಲ, ಇಂತು ಪರಮನಾಗಿ ವರಯೋಗಿ ಇರಲಾಗಿ ಕ್ರಿಯೆಗಳನ್ನು ಎಂತು ಮಾಡುವನು ? (ಮರೆತಾದರೂ ಮಾಡಲಾರನು.)

ತಾನುಳ್ಳೊಡುಂಟು ಕರ್ಮಾನೀಕವರಿದಂದು ।
ತಾನೆಂಬುದಿಲ್ಲವಂತದರಿಂದ ॥
ಆನಂದನಿಧಿಯಾದ ನಿಜನಿಷ್ಠನೆನಿಪಾತ-।
ನೇನೆಂದು ಮಾಳ್ಪನಾ ಕ್ರಿಯೆಗಳ ॥ 9 ॥

ಅನೇಕ ಕರ್ಮಗಳು ತಾನು ಉಳ್ಳೊಡೆ ( ಇದ್ದರೆ) ಉಂಟು. ತನ್ನ ತಾನು ಸದ್ಗುರು ಮುಖದಿಂದ ಅರಿದಾಗಳೆ ತನ್ನಲ್ಲಿ ತಾನು, ಎಂಬುದಿಲ್ಲ, ತನಗೆ ಅನ್ಯವಾದ ಯಾವುದೇ ವಸ್ತು ದೇಶಕಾಲ ಕಾಣಲಿಲ್ಲ, ಮತ್ತು ಮಾತೃಮಾನಾದಿ ಪ್ರಮಾಣಗಳು ತನ್ನಲ್ಲಿ ಸುಳಿಯಲಿಲ್ಲ, ಆದುದರಿಂದ 'ಆನಂದನಿಧಿ' ತಾನಾದ ಮತ್ತು ನಿಜಸ್ವರೂಪದಲ್ಲಿಯೆ ನಿಷ್ಠೆ(ನೆಲೆ) ಯುಳ್ಳ ವರಯೋಗಿಯು, ಏನೆಂದು ಏತಕ್ಕಾಗಿ (ಯಾರಿಗಾಗಿ) ಕ್ರಿಯೆಗಳನ್ನು ಮಾಡುವನು ?

(ಟಿಪ್ಪಣಿ:- ಕಲ್ಪಿತ ಪುರುಷನ ಅಹಂಭ್ರಾಂತಿ ಆರಂಭ ಕ್ರಿಯೆಯೆನಿಸುವದು. ಅನಂತ, ಅದ್ವಯ, ಜನನಾದಿವಿದೂರನು, ಮಾಯಾಸಾಕ್ಷಿ, ಬ್ರಹ್ಮತಾನಾದ ಯೋಗಿವರಗೆ ಅನ್ಯಕರ್ಮವೊಂದಿಲ್ಲ)

– ಇತಿ ಯೋಗೀಶ್ವರಂಗೆ ಕರ್ಮೋಪರತಿ ನಿರೂಪಣೆ –

## 19ನೇ ಸೂತ್ರ

ಮುನಿಪತಿ ನಿರ್ಗುಣಾಷ್ಟಾಂಗಯೋಗವನಿಂತು ।
ವನಿತೆಮೈತ್ರೇಯಿಗೆ ತಿಳುಪಿದ ॥

ಮುನಿಪತಿಯಾಜ್ಞವಲ್ಕ್ಯರು ತನ್ನ ಸತಿ (ವನಿತೆ) ಮೈತ್ರೇಯಿಗೆ ನಿರ್ಗುಣ ಅಷ್ಟಾಂಗ ಯೋಗದ ಹೆಸರುಗಳನ್ನು ಮೊದಲು ಹೇಳಿ, ಮುಂದಿನ ಸೂತ್ರದಲ್ಲಿ ಅವುಗಳ ವಿವರಣೆ ತಿಳಿಸುತ್ತಾರೆ.

ಇದು ತಾನೆ ಸುಜ್ಞಾನ ನಿರ್ಯೋಗವಿದು ತಿಳಿ ।
ಯದವರ್ಗೆ ಮುದದಿಂದ ಗುರುಗಳು ॥
ಅದಕೆ ಕಾರಣವೆನಿಸುವ ನಿರ್ಗುಣಾಷ್ಟಾಂಗ ।
ಪದವಿಂತುಂಟೆಂದು ಬೋಧಿಸುವದು ॥ 1 ॥

ಇಲ್ಲಿಯವರೆಗೆ ಹೇಳಿದುದು ಯಾವ ಯೋಗದಪೇಕ್ಷೆಯಿಲ್ಲದ ಸಹಜವಾಗಿ ಅರುವು, ಆನಂದ ನಿಧಿಯಾಗಿ ಇರುವ ಸ್ವರೂಪಬೋಧೆ. ಇದು ಯೋಗ ವಿಯೋಗವಿಲ್ಲದ ಸಮ್ಯಗ್ ಜ್ಞಾನದ ಸ್ಥಿತಿ,(ಟಿ) ಇದು ತಿಳಿಯದ ಮಧ್ಯಮ ಅಧಿಕಾರಿಗಳಿಗೆ ಇದಕ್ಕೆ ಕಾರಣವಾದ ಎಂಟು ಅಂಗಗಳಿಂದ ಕೂಡಿದ ಅಷ್ಟಾಂಗ ಪದವನ್ನು ನಿರ್ಗುಣಪರವಾಗಿ ಪ್ರೀತಿಯಿಂದ ಸದ್ಗುರುಗಳು ಬೋಧಿಸಬೇಕು.

ಎನೆ ಕೇಳ್ದು ಮೈತ್ರೇಯಿ ವಿನಯ ವಿನತೆಯಾಗಿ ।
ಮುನಿಪಂಗೆ ನಿರ್ಗುಣಾಷ್ಟಾಂಗದ ॥
ಅನುವನೆನಗೆ ಪರಿವಿಡಿದರುಪೆನಲು ತಂ-
ನಿನಿಯಳ್ಗೆ ತಿಳುಪಿದನವನಿಂತು ॥ 2 ॥

ಇಂತು ಬೋಧಿಸಿದುದನ್ನು ಮೈತ್ರೇಯಿ ಕೇಳಿದ ಬಳಿಕ, ವಿನಯದಿಂದ ವಿನೀತಳಾಗಿ ಮುನಿಪತಿಗೆ ನಿರ್ಗುಣ ಅಷ್ಟಾಂಗಯೋಗದ ಕ್ರಮವನ್ನು ತನಗೆ ಅರುಹಲು ಬಿನ್ನವಿಸಿದಳು. ಆಗ ಮುನಿವರನು ಕೆಳಗಿನಂತೆ ತನ್ನ ಪ್ರಿಯಮಡದಿಗೆ ತಿಳಿಸಿದನು.

[ ಟಿಪ್ಪಣಿ :—ನಿರ್ಯೋಗಕ್ಕೆ ಅಸ್ಪರ್ಶಯೋಗವೆನ್ನುವರು. ಇದರರ್ಥವೆಂದರೆ ತನ್ನಲ್ಲಿ ತಾನು ಕೂಡಲಿಲ್ಲ ತನ್ನ ನಿಜದಿಂದ ತಾನು ಅಗಲಲಿಲ್ಲ ಇದೆ ನಿರ್ಯೋಗ ಜ್ಞಾನ ಸಂಪತ್ತು ಇದಕ್ಕೆ ಸಾಧನವೆಂದರೆ ಚಿತ್ತವೃತ್ತಿಯನ್ನು ನಿರ್ಗುಣ ಬ್ರಹ್ಮಪದದಲ್ಲಿ ನಿಲ್ಲಿಸುವದು.]

ಮೊದಲೊಳು ಯಮವನಂತರದಿಂದೆ ನಿಯಮವಂ।
ತದರಿಂದಾಸನವನಂತರದರಿಂದ॥
ಒದವಿದ ಪ್ರಾಣಾಯಾಮವ ಪ್ರತ್ಯಾಹಾರವ।
ನದರಿಂದೆ ಕೇಳು ಮನ್ಮನದನ್ನೆ॥ 3 ॥

ಅದರಿಂದೆ ಧಾರಣೆಯದರಿಂದೆ ಧ್ಯಾನವಂ-
ತದರಿಂದೆ ವರ ಸಮಾಧಿಗಳನು॥
ಪದಪಿಂದೆ ತಿಳಿ ನೀನು ನಿರ್ಯೋಗ ಜ್ಞಾನ ಸಂ-
ಪದಕಿಂತಿವಾದಿಕಾರಣವಕ್ಕು॥ 4 ॥

ಮೇಲೆ ಹೇಳಿದ ಎರಡು ಪದ್ಯಗಳಲ್ಲಿ ನಿರ್ಗುಣ ಅಷ್ಟಾಂಗಯೋಗದ ನಾಮಕರಣ ನಿರೂಪಿಸಿದ್ದಾರೆ. ಮೊದಲು ಯಮ, ನಿಯಮ, ಆಸನ ಪ್ರಾಣಾಯಾಮ, ಇವು ಬಾಹ್ಯದ ತನು, ಪ್ರಾಣಾದಿಗಳ ಪರಿಶುದ್ಧಿಗಾಗಿ. ಆ ಮೇಲೆ ಉಳಿದ ನಾಲ್ಕು ಅಂಗಗಳು ಮನಾದಿ ಅಂತಃಕರಣ ಶೋಧನೆಗಾಗಿ. ಯಾವವೆಂದರೆ ಪ್ರತ್ಯಾಹಾರ, ಧಾರಣೆ ಧ್ಯಾನ ಮತ್ತು ಸಮಾಧಿ (ಅಥವಾ ಮನೋಮೌನ) ಈ ಎಂಟು ಅಂಗಗಳು ನಿರ್ಯೋಗ ಜ್ಞಾನ ಸಂಪಾದನೆಗೆ ಮೂಲ ಕಾರಣಗಳು, ಎಂದು ಮನದನ್ನೆ ತಿಳಿ ನೀನು.

– ಇತಿ ನಿರ್ಗುಣಾಷ್ಟಾಂಗ ನಾಮಕ್ರಮ ನಿರೂಪಣೆ –

## 20ನೇ ಸೂತ್ರ

### ಚೈತನ್ಯಯೋಗವೆ ನಿರ್ಗುಣಾಷ್ಟಾಂಗವಾ-
### ಚೈತನ್ಯಕ್ರಿಯೆಯಳಿದುದೆ ಬೊಮ್ಮ ॥

ಯಮ ನಿಯಮಾದಿ ಅಷ್ಟಾಂಗ ಯೋಗವನ್ನು ಜ್ಞಾನಪರವಾಗಿ ಅರಿವುದೇ ನಿರ್ಗುಣ ಅಷ್ಟಾಂಗಯೋಗ. ಆ ಜ್ಞಾನದ ಕ್ರಿಯೆ ಅಳಿದು ಉಳಿದುದೆ ಬ್ರಹ್ಮ.

ತನು ಮಾನಸೇಂದ್ರಿಯ ಅಸುನಿಕಾಯಾದಿಗ -
ಳೆನಿಸಿ ತೋರ್ಪಖಿಳ ವಿಷಯದೊಳು॥
ತನಗೆ ವಿರತಿ ಪುಟ್ಟದೊಡೆಯದೆ ಯಮವೆಂದು।
ಘನನಿತಂಬಿನಿ ನೀನು ತಿಳಿವುದು॥ 1 ॥

ಹಿರಿದಾದ ಪೃಷ್ಟವುಳ್ಳ ಮೈತ್ರೇಯಿ, ದೇಹ, ಮನಸು, ಇಂದ್ರಿಯ ಮತ್ತು ಪಂಚ ಪ್ರಾಣ ಈ ಯಾವತ್ತೂ ವಿಷಯಗಳು ಅರಿಸಿಕೊಳ್ಳವದರಿಂದ ಜಡವಾಗಿವೆ. ಇವನ್ನು ಎದಿರಿಟ್ಟು ಅರಿವವ ತಾನು ಚೇತನನು, ಎಂದು ನಿಶ್ಚಯಿಸಬೇಕು. ಈ ವಿಷಯಗಳು ಪುಸಿಯಾಗಿ ತೋರುವವು, ಅವು ತಾನಲ್ಲ ಎಂಬ ನಿಶ್ಚಯವೇ ವಿರತಿಯೆನಿಸುವದು. ಇದಕ್ಕೆ ಇನ್ನೊಂದು ಹೆಸರು ಯಮ, ವೆಂದು ತಿಳಿ.

ತನಗೆಲ್ಲ ವಿಷಯದೊಳುದಿಸಿದ ವಿರತಿ ಕೇಳ್ ।
ಮನದಲ್ಲಿ ನಿಲಲದು ದೃಢಮಾಗಿ ॥
ಮುನಿಜನ ರೊಲುಮೆಯ ನಿಯಮವೆನಿಪುದೆಂದು ॥
ವನಿತೆ ಮೈತ್ರೇಯಿ ನೀನರಿವುದು ॥ 2 ॥

ಮೇಲೆ ಹೇಳಿದ ಅಖಿಳ ವಿಷಯಗಳಲ್ಲಿ ವಿರತಿ ಕೇವಲ ಮಾತುಗಳಲ್ಲಿ ತೋರದೆ ತನ್ನ ಸುಮನದಲ್ಲಿ ದೃಢವಾಗಿ ನಿಲ್ಲಬೇಕು. ಇದುವೆ ಮನನಶೀಲ ಮುನಿಗಳಿಗೆ ಪ್ರಿಯವಾದ ನಿಯಮವೆಂದು, ವನಿತೆ ಮೈತ್ರೇಯಿ, ನೀನು ತಿಳಿ.

ರತಿಯುಮಾ ವಿರತಿಯುಮಖಿಳ ವಿಷಯದೊಳ-
ತ್ಯತಿಶಯದಿಂದ ಮಿಲ್ಲೆನೆ ಕೆಟ್ಟು॥
ಮತಿಯೊಳುದಾಶೀನ ಸ್ಥಿತಿಯಾಗಲಾಸನ।
ಗತಿಯದು ತಾನೆಂದು ತಿಳಿ ನೀರೆ ॥ 3 ॥

ಚಲುವೆ ಮೈತ್ರೇಯಿ, ವಿಷಯಾದಿಗಳಲ್ಲಿ ಸುಖದ ಬುದ್ಧಿ(ರತಿ) ಮತ್ತು ಸುಖವಿಲ್ಲೆಂಬ ಬುದ್ಧಿ (ಇದು ವಿರತಿ)ಇವೆರಡೂ ಬುದ್ಧಿಯ ವೃತ್ತಿಗಳು. ಅರಿಸಿಕೊಳ್ಳುವದರಿಂದ ಅವು ಜಡವೆಂದರಿದು, ಬುದ್ಧಿಯಲ್ಲಿ ಉದಾಸೀನ ಭಾವ ಸಂಜನಿಸಲು ಅದೇ ಆಸನವೆಂದು ತಿಳಿ.

ತನುಮೊದಲಾಗಿ ತೋರ್ಪನಿತನು ಪುಸಿಯೆಂದು ।
ತನಗಲ್ಲಿ ಚೇಷ್ಟೆಯಳಿದು ನಿಲ್ಲೆ॥
ಅನಿಲ ನಿರೋಧನವದು ತಾನೆ ಮೈತ್ರೇಯಿ ।
ಮುನಿಮತವೆಂದು ನಿಶ್ಚಯಿಪುದು ॥ 4 ॥

ಮೈತ್ರೇಯಿ, ತನುಮುಖ್ಯವಾಗಿ ತೋರುವ ಇಹಪರ ಲೋಕದ ಸರ್ವವಿಷಯಗಳು ಮಿಥ್ಯೆ (ಪುಸಿದೋರಿಕೆ) ಎಂದು ನಿಶ್ಚಯಿಸಲು, ಇಂದ್ರಿಯ ಸಂಸ್ಪರ್ಶಜ ಭೋಗವು ಸ್ಥಗಿತವಾಗುವದು. ಮನುಮುನಿಗಳ ಅಭಿಪ್ರಾಯದಂತೆ ಇಂದ್ರಿಯಗಳ ಚೇಷ್ಟೆನಿಂತ ಸ್ಥಿತಿಯೆ ಪ್ರಾಣಾಯಾಮವೆಂದು ನೀ ನಿಶ್ಚಯಿಸು.

ಪುಸಿಯಾದ ಜಗವಿದು ಪುಸಿ ದುಃಖಕರವೆಂದು ।
ಪುಸಿ ನೋಟವನು ತೆಗೆದುದರಿಂದ ॥
ಒಸೆದರಿವಂತರ ಮುಖವಾಗಲದಕೆ ತಾ-।
ನೆಸೆವುದು ಪ್ರತ್ಯಾಹರಣನಾಮ ॥ 5 ॥

ಜಗವಿದು ಪುಸಿ, ದುಃಖ ದಾಯಕ ವಿಷಯಗಳು ಪುಸಿ ಮತ್ತು ಅವನ್ನು ನೋಡುವ ಇಂದ್ರಿಯಗಳ ನೋಟವೂ ಪುಸಿ ಎಂದು ತನಗೆ ನಿಶ್ಚಯವಾಗಲು, ನಿಜವಾದ ಅರಿವು ಅಂತರ್ಮುಖವಾಗುವದು. ಹೊರಗಿನ ವಿಷಯಗಳಲ್ಲಿ ಎರಗಿದ ಮನವು ಒಳಮುಖವಾದರೆ ಈ ಯೋಗಾಭ್ಯಾಸಕ್ಕೆ ಪ್ರತ್ಯಾಹಾರವೆಂಬ ಹೆಸರು ಸಲ್ಲುವದು.

ಅರಿವಂತರವೆಯಾಗಿ ಪೊರಗೇನನಾರಯ್ಯದಂ-
ತರಿವಿನೊಳಡಗಿ ಸುಸ್ಥಿರಮಾಗಿ ॥
ಕರಿಗೊಂಡು ನಿಲಲದು ಧಾರಣೆಯೆಂದು ನೀ-।
ನರಿವುದು ಕೈರವಾಯತನೇತ್ರೆ ॥ 6 ॥

ಕಮಲಾಕ್ಷಿ ಮೈತ್ರೇಯಿ, ಮನೋವೃತ್ತಿಯು ಅಂತರ್ಮುಖವಾಗಲು ಬಾಹ್ಯಜಡದುಃಖಕರ ವಿಷಯಗಳನ್ನು ಬಯಸದು. (ಹಾಲುಂಡ ಬಳಿಕ ಮೇಲೆ ಹುಳಿ ಮಜ್ಜಿಗೆ ಬಯಸನು) ತನಗಾಶ್ರಯವಾದ ಶುದ್ಧಹೃದಯನಳಿನದಲ್ಲಿಮನಸ್ಸು ಲೀನಮಾಗಿ, ಸುಸ್ಥಿರಮಾಗಿ, ತನ್ನಲ್ಲಿ ತಾನು ಕರಿಗೊಂಡು ನಿಲ್ಲುವದು. ಈ ಯೋಗ ವೃತ್ತಿಗೆ ಧಾರಣೆ ಎಂದು ನೀನು ತಿಳಿ.

ಭಾವದ ಬಳಕೆ ಬೇರುದಿಸದೆ ಪರಿಪೂರ್ಣ।
ಕೇವಲ ಚೈತನ್ಯ ತಾನೆಂದು ॥
ಭಾವಿಸುತಿರಲದು ತಾನೆ ತಧ್ಯಾನ ಮಂ-
ದಾವಗಮಿದನೆ ಭಾವಿಸು ಕಾಂತೆ ॥ 7 ॥

ಪ್ರಶಾಂತ ಮನೋವೃತ್ತಿಯು ತನ್ನೊಳು ಧಾರಣೆಯಾದ ಬಳಿಕ ಪುಸಿಯಾದ ಜಗತ್ತಿನ ಉತ್ಪತ್ತಿ ಸ್ಥಿತಿಯ ಕಲ್ಪನೆಗಳ ಸಂಚಾರ ಮತ್ತೆ ತನ್ನಲ್ಲಿ ಉದಿಸದು. ಆಗ ಯೋಗಿಯು ಪರಿಪೂರ್ಣವಾದ (ಟಿ–1) ಕೇವಲ ಶುದ್ಧ ಅರಿವು ತಾನೆಂದು ಪರಿಭಾವಿಸುವನು. ಇಂತು ಪರಮನೆ ತಾನೆಂಬ ಅನುಸಂಧಾನವೆ ಧ್ಯಾನವೆಂದು, ಕಾಂತೆ ಮೈತ್ರೇಯಿ ನೀನರಿ.

ಭಾವಕಿ ಶುದ್ಧ ಚಿತ್ತಾನೆಂದು ತೋರುವೀ।
ಭಾವನೆ ತನ್ನೊಳು ಲಯಮಾಗಿ ॥
ತೀವಿ ನಿಜಾನಂದದುಳುಮೆಯಾದರಿವಿನ।
ಭಾವನೆ ಸುಸಮಾಧಿಯೆನಿಪುದು ॥ 8 ॥

ಭಾವಜ್ಞಳೇ, ಕಲ್ಪನಾ ರಹಿತ ಶುದ್ಧ ಚೈತನ್ಯ (ಅರಿವು) ತಾನೆಂದು ಧ್ಯಾನಿಸುವವನ ಧ್ಯಾನ ವೃತ್ತಿಯು ಅರುಹಿಸಿಕೊಳ್ಳುವದರಿಂದ (ತೋರುವದರಿಂದ) ಜಡವೆಂದು, ಧ್ಯಾತೃವಿನ ಅಹಂಭಾವವು ಶೂನ್ಯವಾಗುವದು. ಆಗಳೆ ನಿಜಾನಂದದ ಉಳುಮೆ (ಟಿ–2) ಯಾದ ಕೇವಲ ಅರಿವಿನಲ್ಲಿ ತನ್ನ ಮನ ಮುಳುಗುವದು– ಮೌನವಾಗುವದು.ಇದೇ ನಿರ್ಗುಣ ಸಮಾಧಿಯೆನಿಸುವದು. (ಟಿ. ಪುಟ 198)

1. [ಟಿಪ್ಪಣಿ :– ಗುಣಜಾತಿ ರಹಿತ, ಕರ್ಮವಿರಹಿತ ಮತ್ತುಕರಣವಿಡಿಯದೆ ಇರುವ ಅರಿವು ಅದ್ವಯ ಅಥವಾ ಪೂರ್ಣವಾಗಿದೆ.]

2. [ಟಿಪ್ಪಣಿ:– ಕಾಲಲ್ಲಿನಟ್ಟಿರುವ (ಹಳೇ) ಮುಳ್ಳನ್ನು ಬೇರೊಂದು (ಹೊಸ, ನೀಟಾದ) ಮುಳ್ಳಿನಿಂದ ತೆಗೆಯುವರು. ಬಳಿಕ ಅದನ್ನೂ ಒಗೆಯುವರು. ಇದೇ ರೀತಿ ತುರ್ಯ (4ನೇ ಅವಸ್ಥೆ– ಯೋಗಾಭ್ಯಾಸದ ಫಲ)ವೆಂಬ ಮುಳ್ಳಿನಿಂದ ಭವರೋಗವೆಂಬ ಕಂಟಕ (ಮುಳ್ಳು)ವನ್ನು ತೆಗೆದ ಬಳಿಕ ಅದೂ ಪುಸಿಯೆಂದು ತಿಳಿದು, ನೀನು ಕಲಿತ ಬ್ರಹ್ಮವಿದ್ಯೆಯನ್ನು ಮರೆತು, ಸಹಜ ನಿರಾಭಾರಿ ಸ್ಥಿತಿಯಲ್ಲಿ ನಿರಹಂಕಾರಿಯಾಗಿ ಉಳಿಯಬೇಕು.]

ಅದು ತಾನೆ ತುರ್ಯವೀ ನಿರ್ಗುಣಾಷ್ಟಾಂಗಯೋ।
ಗದ ಕಾರ್ಯವಹುದಾಗಿ ಪುಸಿಯದು ॥
ಎದಿತಮೆಂದರಿದದನುರೆ ಮರೆದುಳುಮೆಯಾ-
ದುದು ತುರ್ಯಾತೀತವಂತದು ನಿಜ ॥ 9 ॥

ಮೇಲೆ ಹೇಳಿದ ಜ್ಞಾನಪರ ಸಮಾಧಿಯೆ ತುರ್ಯವು. ಅದು ನಿರ್ಗುಣಷ್ಟಾಂಗ ಯೋಗದ ಕಾರ್ಯವು. ಆದ್ದರಿಂದ ಅದಾದರೂ ಪುಸಿ ಎಂದು ತಿಳಿ. ಇದು ಶ್ರುತಿ ಸಿದ್ಧವೆಂದರಿದು ತುರೀಯವನ್ನು ಮರೆದು ಉಳಿದುದೇ ತುರ್ಯಾತೀತವು. ಇದೇ ನಿಜವಾಗಿ ಭಾವಾತೀತವಾದ, ನಿತ್ಯಾನಂದ ನಿಧಿಯಾದ ಬ್ರಹ್ಮಪದವು.

ವನಿತೆ ಸುಷುಪ್ತಿ ತುರ್ಯಪದದೊಳಡಗಿದಹ-।
ಮೆನಿಸುವೆಲ್ಲಾ ವಿಷಯದ ತೋರ್ಕೆ ॥
ಇನಿಸಿಲ್ಲದಾನಂದ ನಿಜವಾಗಿ ತಾನಿರ್ಪು-
ದನುಭವಸಿದ್ಧವಿಂತಿದನಂಬು ॥ 10 ॥

ವನಿತೆ ಮೈತ್ರೇಯಿ, ಸುಪ್ತಿ ಹಾಗೂ ತುರ್ಯಾವಸ್ಥೆಗಳಲ್ಲಿ ಅಹಂವೃತ್ತಿ ಅಡಗಲು ಹಮ್ಮಿಗೆ ವಿಷಯವಾದ ಸಕಲ ತೋರಿಕೆಯ ಜಗತ್ತೂ ಲಯವಾಗುವದು. ಆಗ ತನ್ನಲ್ಲಿರುವದು ಕೇವಲ ತನ್ನ ಸ್ವರೂಪದ ನಿಜಾನಂದವು. ಎಲ್ಲರೂ ''ನಾನು ಇಲ್ಲಿಯವರೆಗೆ ಏನೊಂದರಿಯದೆ ಸುಖವಾಗಿ ಮಲಗಿದ್ದೆ'' ಎಂದು ಎಚ್ಚತ್ತು ಹೇಳುವರು. (ಆದರೆ) ಅಭ್ಯಾಸ ಸಂಜನಿತವಾದ ತುರ್ಯದಲ್ಲಿ ಮರವೆಯಿರದೆ, ಅರಿವು ಸಹಿತ ಆನಂದದ ಅನುಭಾವವಿರುವದು.

[ ಟಿಪ್ಪಣಿ :– ಬ್ರಹ್ಮಾಕಾರ ತಯಾ ವೃತ್ತಿಃ ನಿರ್ವಿಕಾರ ತಯಾ ಸ್ಥಿತಿ ಃ ವೃತ್ತಿವಿಸ್ಮರಣಂ ಸಮ್ಯಕ್ ಸಮಾಧಿಃ ಜ್ಞಾನಸಂಜ್ಞಕಂ ॥ ]

– ಇತಿ ನಿರ್ಗುಣ ಅಷ್ಟಾಂಗಯೋಗೆ ನಿರೂಪಣೆ –

## 21ನೇ ಸೂತ್ರ

### ಯುವತಿ ಮೇಲ್ಬೈದುಭಾವನೆ ನಿರಾವರಣ ಮೊ।
### ಪ್ಪುವ ನಿಸ್ಸಮಾಧಿಯೆ ಪರಬ್ರಹ್ಮ।

ಮೈತ್ರೇಯಿ ಕೇಳು ಅಭ್ಯಾಸದಿಂದ ಪ್ರಾಪ್ತವಾದ ಐದು ಅವಸ್ಥೆಗಳು : (1) ವರ ಜಾಗ್ರ (2)ವರಸ್ವಪ್ನ, (3)ವರಸುಪ್ತಿ (4) ದರ ತುರ್ಯ (5) ತುರ್ಯಾತೀತ (6) ನಿರಾವರಣ ಸಮಾಧಿ ಮತ್ತು (7) ನಿಃಸಮಾಧಿ ಇವುಗಳಲ್ಲಿ ನಿಸ್ಸಮಾಧಿ (ಸಮಾಹಿತನಾನೆಂಬ ಭಾವವಿಲ್ಲದ) ಸಹಜ ಸ್ಥಿತಿಯೆ ಪರಬ್ರಹ್ಮ ಸ್ವರೂಪವು.

ಅರಿವು ತಾನೆಂದಿದನರಿಯೆ ಜಾಗರಣವಾ –।
ನರಿಯೆ ನಾನಾರೆಂಬರಿವು ಸ್ವಪ್ನ।
ನೆರೆ ತನ್ನನರಿವೆಂದರಿಯದಿರಲದು ಸುಷ್ಪ್ತಿ।
ಮರೆಯದಿರಂಬುಜಾನನೆ ॥ 1 ॥

ಅರಿವು (ಕಲ್ಪನಾರಹಿತ ಬಚ್ಚಬರೆ ಅರಿವು) ತಾನೆಂದು ಅರಿಯಲದೆ ವರಜಾಗ್ರವು, 'ನಾನಾರು' ಎಂಬುದನು ನಾನರಿಯೆ', ಎಂಬ ಅರಿವು ವರಸ್ವಪ್ನ, ಬಳಿಕ ತಾನು ಅರಿವು ಎಂಬುದನು ಅರಿಯದೆ ಸಮುಮ್ಮನಿರಲದೆ ವರಸುಪ್ತಿ, ಕಮಲ ಮುಖಿ ಮೈತ್ರೇಯಿ, ಈ ಎಚ್ಚತ್ತ ಸ್ಥಿತಿ ಮರೆಯದಿರು.

ಬರಿಯರಿವಾನೆಂಬ ತಿಳಿವು ತನ್ನೊಳು ತೋರಿ।
ಕರಿಗೊಂಡು ದೃಢಮಾಗಲದು ತುರ್ಯ ॥
ನೆರೆ ಮರೆದದನು ನಿಂದೊಡೆ ತುರ್ಯಾತೀತ।
ವರಿ ನಿಜವದು ತಾನೆ ಪರಮಾತ್ಮ ॥ 2 ॥

(ಅರಿಸಿಕೊಳ್ಳದೆ ಇರುವ) ಬರೆ ಅರಿವು ನಾನು' ಎಂಬ ತಿಳಿವು ತನ್ನೊಳು ತೋರಿ ಕರಿಗೊಂಡು, ದೃಢವಾಗಲು ಅದೇ ತುರ್ಯವೆನಿಸುವದು. 'ನಾನು ತುರೀಯನು' ಎಂಬುದನ್ನು ಚನ್ನಾಗಿ ಮರೆದು ಮೌನವಾಗಿರಲು ಅದೇ ತುರ್ಯಾತೀತವು. ಅದೇ ತಾನು, ಅದೇ ಪರಮಾತ್ಮ

ಪರಮಾತ್ಮನಾನೆಂದು ಪರಿಕಿಸೆ ಜಗವಿದು।
ಪರಮಾರ್ಥದಿಂದವೆ ಪುಸಿಯೆಂದು ॥
ಪರಮಾನುಭವದಿಂದರಿದು ನಿಲಲದು ನಿರಾ–।
ವರಣ ಸಮಾಧಿಯೆಂದೆನಿಪುದು ॥ 3 ॥

"ಪರಮಾತ್ಮನೇ" ನಾನು ಇರುವೆ, ನನ್ನ ಹೊರತು (ನನಗನ್ಯವಾಗಿ ತ್ರಿಭುವನದಲ್ಲಿ) ಏನೊಂದಿಲ್ಲ ಎಂದು ಪರೀಕ್ಷಿಸಿ ಅರಿಯಲು, ಜಗವಿದು ಪರಮಾರ್ಥವೆನಿಸದೆ ಪುಸಿ ಎನಿಸುವದು. ಇದೇ ಪರಮಾನುಭವ. ಈ ಅನುಭಾವದಲ್ಲಿ ತಾನು ಅರಿದು ನಿಲ್ಲಲು, ಅದೇ ನಿರಾವರಣ ಸಮಾಧಿ ಎನಿಸುವದು. (ಈ ಸ್ಥಿತಿಯಲ್ಲಿ ಗುರು, ಲಿಂಗ, ಜಂಗಮಾದಿ ಅಷ್ಟಾವರಣಗಳಿಲ್ಲ).

ಇದು ಪರಬ್ರಹ್ಮವೆಂದಿದು ಸತ್ಯವೆಂದು ತಾ।
ನಿದರಲ್ಲಿ ನಿಶ್ಚಲೀಕೃತಮಾಗಿ ॥
ಪದಪಿಂದೆ ನಿಲೆ ನಿರ್ಮಲಾಂಗಿ ನೀನರಿದು ನಂ।
ಬಿದು ನಿಸಮಾಧಿಯೆಂದೆನಿಪುದು ॥ 4 ॥

ಇದೇ ಬ್ರಾಹ್ಮೀ ಸ್ಥಿತಿ, ಇದೇ ಸತ್ಯವಾದ ಅದ್ವೈತ ಪದ, ಇದರಲ್ಲಿ ತಾನು ನಿಸ್ಸಂಶಯವಾಗಿ, ನಿಶ್ಚಲಬುದ್ಧಿಯಿಂದ, ಹದುಳದಿಂದ ನೆಲೆ ನಿಲ್ಲಲು, ನಿರ್ಮಲಾಂಗಿ ಮೈತ್ರೇಯಿ, ಅದೇ ನಿಸ್ಸಮಾಧಿ ಎಂದು ತಿಳಿದು ನಂಬು.

ಬರಿಯರಿವಿನೊಳು ಭಾವನೆ ಲಯಿಸಿ ಬೇರೇನು ।
ವರಿಯದಂತಡಗಿ ತಾನಿರಲದು ॥
ಮರೆಯದರಿಯದವಿಳ ಪರಬ್ರಹ್ಮವೆಂ ।
ದರಿದಿಹುದಂಗನೆ ಸುಖದೊಳು ॥ 5 ॥

ಬರೆ ಅರಿವಿನೊಳು (ಬಯಲಿಗೆ ಬಯಲಾದ ಮಹಾಬಯಲಲ್ಲಿ) ನಾನು–ನೀನು ಎಂಬ ನಾನಾಕಲ್ಪನೆಗಳು ನಾಶವಾಗಿ ತನಗನ್ಯವಾಗಿ ಬೇರೊಂದು ವಿಷಯ ಅಥವಾ ವ್ಯಕ್ತಿಯನ್ನು ಅರಿಯದಂತೆ ತಾನು ಮಹಾಮೌನವಾಗಿರಲು ಅದೇ ಪರ ಬ್ರಹ್ಮವೆನಿಸುವದು. ಅರಿಯದ ಮರೆಯದ ಅವಿರಳ ಪರಿಪೂರ್ಣ ಸ್ಥಿತಿಯೆನಿಪುದು. ಅಂಗನೇ, ಅದನರಿದು ನಿನ್ನೊಳು ನೀನು ಸಹಜ ಸುಖ ಅನುಭವಿಸು.

ಇದನಾವನರಿದು ನಂಬಿದನವನದರಿಂದೆ ।
ಯೊದವಿ ನಿರ್ಗುಣಯೋಗಿ ಯೆನಿಪನು ॥
ಸುದತಿ ಕೇಳಿದು ತಾನೇ ಸುಜ್ಞಾನ ನಿರ್ಯೋಗ ।
ದುದಯಕ್ಕೆ ಪರಮ ಕಾರಣವಕ್ಕು ॥ 6 ॥

ಈ ಸುಖಾನುಭವನ್ನು ಯಾವನು ಅರಿದು ನಂಬುವನೋ ಅದರಿಂದವನು ನಿರ್ಗುಣಯೋಗಿ ಎನಿಸುವನು. ಸುದತಿ ಮೈತ್ರೇಯಿ, ಕೇಳು. ಇದೇ ಸುಜ್ಞಾನ ನಿರ್ಯೋಗದ ಉತ್ಪತ್ತಿಗೆ ಪರಮಕಾರಣವು.

– ಇತಿ ನಿಜಾನುಭವಯೋಗ ನಿರೂಪಣೆ –

## 22ನೇ ಸೂತ್ರ

ತಾನಖಂಡಾದ್ವೈತ ಚೈತನ್ಯವೆಂದು ತ ।
ಧ್ಯಾನಾದಿಗಳನೆಂತು ಮಾಳ್ಪನು ॥

ಅಖಂಡವಾದ (ಪರಿಪೂರ್ಣ) ಅದ್ವಯವಾದ (ಎರಡಿಲ್ಲದ) ಅರಿವು ತಾನು ಎಂದು ದೃಢವಾಗಿ ತಿಳಿದ ಮಹಿಮನು ಧ್ಯಾನ, ಧಾರಣ, ಸಮಾಧಿಯೋಗಗಳ ಅನುಷ್ಠಾನವನ್ನು ಹೇಗೆ ಮಾಡುವನು ? ಮಾಡುವದಿಲ್ಲ, ಎಂಬ ಭಾವ.

ಪರಿಕಿಸದ್ವೈತಕ್ಕೆ ಪರಮಾರ್ಥವೆನೆ ನೋಡೆ।
ಕರಣೀಯವಿನಿತಿಲ್ಲವದರಿಂದ॥
ಸರಸಿಜಮುಖಿ ತಿಳಿದಂಗೆ ತಧ್ಯಾನಾದಿ।
ಪರಿಕರದೊಳು ಕೃತವಹುದೆಂತು ॥ 1 ॥

ವಿಚಾರಿಸಲು ಅಕಲಂಕವಾದ ಅದ್ವೈತ ತತ್ತ್ವವೇ ಪರಮಾರ್ಥವು, ಅದೇ ಶ್ರವಣ ಮನನ ಮಾಡಿ ತಿಳಿಯಲು ವಿಹಿತವಾದ ಪುರುಷಾರ್ಥ. ಕಮಲಮುಖಿಯೆ, ಗುರುಮುಖದಿಂದ ತತ್ತ್ವಮಸಿವಾಕ್ಯದರ್ಥವ ತಿಳಿದವನು ದ್ವೈತ ಬುದ್ಧಿಗೆ ಸಲ್ಲುವ ಧ್ಯಾನ, ಧಾರಣ, ಸಮಾಧಿ ಎಂಬ ಅಷ್ಟಾಂಗಯೋಗಗಳನ್ನು ಹೇಗೆ ಆಚರಿಸಬಲ್ಲನು ? ಕರಣೀಯವಲ್ಲ ಎಂಬ ಭಾವ.

ಧ್ಯಾತೃ ತಧ್ಯಾನವಾ ಧೇಯವೆಂಬೀ ಭ್ರಾಂತಿ।
ದ್ವೈತಕ್ಕೆ ಸಲ್ಲುದ್ವೈಸಲ್ಲದೆ॥
ಖ್ಯಾತಮಾದದ್ವೈತಪದದೊಳು ಘಟಿಸದೆಂ।
ದೋತು ನೀನರಿ ತಾನೆ ಚಿದಖಂಡ ॥ 2 ॥

ಧ್ಯಾತೃ, ಧ್ಯಾನ, ಧ್ಯೇಯ ಈ ತ್ರಿಪುಟಿ ಸತ್ಯವೆಂಬ ಭ್ರಾಂತಿಯು ದ್ವೈತ (ಭೇದ) ಬುದ್ಧಿಯುಳ್ಳ ಸಾಧಕರಿಗೆ ಸಲ್ಲಬಹುದು. ತ್ರಿಪುಟಿಗೆ ಆದಿಯಾದ ಬರಿ ಅರಿವು ತಾನೆಂಬ ಅಭೇದ, ಅಖಂಡಾದ್ವಯ ಶುದ್ಧ ಮತಿಯುಳ್ಳ ಉತ್ತಮ ಸಾಧಕರಿಗೆ ಪ್ರಖ್ಯಾತಮಾದ ಅದ್ವೈತ ತತ್ತ್ವವೆ ಸಲ್ಲುವದು. ಸುದತಿ, ನೀನು ಸುಜ್ಞಾನ ನಿರ್ಯೋಗದಲ್ಲಿನೆಲಸಿದ ಬಳಿಕ, ನೀನೆ ಅಖಂಡ ಅರಿವು (ಚಿನ್ಮಯನು) ಎಂದು ನಿಸ್ಸಂದೇಹವಾಗಿ ತಿಳಿದ ಬಳಿಕ, ಅಷ್ಟಾಂಗ ಯೋಗಗಳ ಅಭ್ಯಾಸ ನಿನಗೆ ಉಚಿತವಲ್ಲ. (ನೀನೆ ಚಿದಖಂಡನು ಎಂಬ ಸಿದ್ಧಾಂತ ನುಡಿಯನ್ನು ಪುನಃ ಪುನಃ ಮುಂಬರುವ ನಾಲ್ಕು ಪದಗಳಲ್ಲಿ ಹೇಳುತ್ತಾರೆ ನಿಜಗುಣ ಯೋಗಿಗಳು).

ತಾನೆ ತನ್ನಿಂದನ್ಯಮೇನುಮಿಲ್ಲಾಗಿ ತ।
ಧ್ಯಾನ ಸಮಾಧಿ ಸತ್ಕ್ರಿಯೆಗಳ॥
ತಾನೆಂತು ಮಾಡಲರಿಯನದ್ವಯ ತನ್ನ।
ತಾನೆ ನಿಜಾನಂದ ಚಿದಖಂಡ ॥ 3 ॥

ಎಲ್ಲೆಡೆಯಲ್ಲಿ ನಿರಂತರ ತಾನೆ ಇರುವನು. ತನ್ನ ಬಿಟ್ಟು ಬೇರೊಂದು ಸತ್ಯವಾಗಿ ಇರುವ ವಸ್ತು ಇಲ್ಲವೇ ಇಲ್ಲ. ಅಂದರೆ ತಾನೆ ಅದ್ವಯನು, ಅಖಂಡ ಚಿನ್ಮಯನು. ಅಂದ ಮೇಲೆ ಧ್ಯಾನ ಸಮಾಧಿ ಸತ್ಕ್ರಿಯೆಗಳನ್ನು ಯಾತಕ್ಕೆ, ಯಾರಿಗೋಸ್ಕರ ಮಾಡುವನು ? ಸ್ವಯಂ ತಾನೆ ನಿಜಾನಂದನು. ಅಖಂಡ ಅರಿವು ಇರುವನು.

ಎರಡೆಂಬೀ ಭೇದ ಭಾವನೆಗಕ್ಕುಮಾಧ್ಯಾನ।
ವೆರಡಳಿದದ್ವೈತ ನಿಜದೊಳು॥
ದೊರಕೊಳ್ಳಲರಿಯದಾವನುಎಂದೆ ತಾನೆ ಸು-
ಸ್ಥಿರವೆನಿಸುವ ಚಿದಖಂಡ॥ 4 ॥

ಎರಡೆಂಬ ಭೇದಭಾವನೆಯುಳ್ಳವಗೆ ಧ್ಯಾನ ಹೇಳಬಹುದು. ಎರಡಳಿದ ಅದ್ವೈತ (ಅಭೇದ) ಸ್ಥಿತಿಯು, ನಿಜನಿಷ್ಠೆಯು ಪ್ರಾಪ್ತವಾದ ಬಳಿಕ ಸಾಧಕನು ಸುಸ್ಥಿರವಾಗಿ ಸ್ವಸ್ವರೂಪದಲ್ಲಿ ತಾನಿರುವಂತೆ ತಾನಿರುವನು. ಅವನೀಗ ತಾನೆ ಚಿದಖಂಡನು.

ತಾನಿದಿರೆಂಬರಿವೇನಾನು ಮುಳ್ಳೊಡಾ।
ಧ್ಯಾನಾದಿ ಕರ್ತವ್ಯವಲ್ಲದೆ॥
ತಾನಲ್ಲದನ್ಯವಿಲ್ಲಾಗಿ ತಧ್ಯಾನವಿ।
ಲ್ಲಾನಂದನಿಧಿ ತಾನೆ ಚಿದಖಂಡ॥ 5 ॥

ತಾನು–ಇದಿರು, ಎಂಬ ದ್ವೈತದ ಅರಿವು ಇದ್ದರೆ ಯೋಗಿಗೆ ಏನಾದರೂ ಧ್ಯಾನಾದಿಗಳ ಕರ್ತವ್ಯವನ್ನು ಹೇಳಬಹುದು. ತಾನು ಅದ್ವಯನು, ಅಖಂಡಾನಂದ ಚಿನ್ಮಯನು. ತನ್ನಲ್ಲಿ ತಾನೆಂಬುದಿಲ್ಲ, ತಾನು ಅನ್ಯವಸ್ತು ಕಾಣಲಿಲ್ಲ, ತಾನೆ ಪರಿಪೂರ್ಣವಾಗಿರುವ ನಿಜನಿಷ್ಠನೆನಿಪಾತನು ಬೇರೊಂದು ಯೋಗದಲ್ಲಿ ಬಳಲುವ ಕಾರಣವಿಲ್ಲ.

ತಾನುಳ್ಳೊಡುಂಟು ತದ್ಧ್ಯಾನಾದಿ ತನ್ನೊಳು।
ತಾನೆಂಬುದಿಲ್ಲಾಗ್ಗಿ ತಿಳಿದಂದು॥
ತಾನೆಂತು ಮಾಳ್ಪನಾ ಧ್ಯಾನಾದಿಯನು ತನ್ನ।
ತಾನೆ ತಾನನುಪಮ ಚಿದಖಂಡ॥ 6 ॥

ತಾನು ಇದ್ದರೆ ಧ್ಯಾನಾದಿ ಸಾಧನಗಳುಂಟು. ತನ್ನ ತಾನು ಅರಿದಂದು ತನ್ನಲ್ಲಿ ತಾನೆಂಬುದಿಲ್ಲ, ಜಗದೀಶನಿಲ್ಲ, ಧ್ಯಾನಾದಿ ವಿಧಿಗಳಿಲ್ಲ, ತನಗನ್ಯವಾಗಿ ಏನೊಂದನು ಊಹಿಸಲೆಡೆಯಿಲ್ಲ, ತಾನೆ ಪರಿಪೂರ್ಣ, ಅನುಪಮ ಚಿದ್ಘನನಿರುವನು.

ಇದು ತಾನೆ ನಿರ್ಗುಣಾಭ್ಯಾಸವಿಂತಿದು ತಿಳಿ।
ಯದ ಪುರುಷರ್ಗಿದು ಜನಿಸಲು॥
ಒದವಿ ಸಗುಣಯೋಗವನು ಗುರುವರರು ಸಂ।
ಮುದದಿಂದೆ ಬೋಧಿಪುದಲಸದೆ॥ 7 ॥

ಇಲ್ಲಿಯವರೆಗೆ ತಿಳಿಸಿ ಹೇಳಿದುದು ನಿರ್ಗುಣಯೋಗಾಭ್ಯಾಸವು. ಇದು ತಿಳಿಯದ ಸಾಧಕರಿಗೆ ಸಗುಣಯೋಗವು ಜನಿಸುವಂತೆ ಮತ್ತು ಅದು ಸರಳವಾಗಿ ತಿಳಿವಂತೆ ಸದ್ಗುರುಗಳು ಪ್ರೀತಿಯಿಂದ ಬೋಧಿಸಬೇಕು.

ಎನೆ ಕೇಳ್ದು ಮೈತ್ರೇಯಿ ವಿನಯದಿಂದವೆ ತನ್ನ।
ಮನದನ್ನನಿಗೆ ಮತ್ತೆ ಮಣಿದಂದು ॥
ಮುನಿಪ ಸಗುಣಯೋಗಾಂಗವನೆನಗೆ ಪೇ -
ಳೆನುತ ಬಿನ್ನೈಸಿದಳೊಲವಿಂದ ॥ 8 ॥

ಇಂತು ಮೈತ್ರೇಯಿ ಶ್ರವಣ ಮಾಡಿದ ನಂತರ ತನ್ನ ನಲ್ಮೆಯ ಮುನಿಪತಿಗೆ ವಿನಯದಿಂದ ಮಣಿದು, ಸಗುಣಯೋಗದ ಅಷ್ಟಾಂಗಗಳನ್ನು ತನಗೆ ಪೇಳೆಂದು ಒಲವಿನಿಂದ ಬಿನ್ನೈಸಿದಳು.

ಇದು ನಿಜಗುಣಯೋಗಿ ಮುದದಿಂದೆ ತಿಳಿಯ ಪೇ-।
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ।
ಒದವಿದ ಸಂವಾದದೊಳು ನಾಲ್ಕನೆಯ ಸಂಧಿ।
ಸದಮಳ ಪರಮಾನುಭವ ಬಂಧಿ ॥ 9 ॥

– ಇತಿ ನಿಜ ಸ್ಥಿತಿ ನಿರೂಪಣೆ –

ಸಂಧಿ ನಾಲ್ಕು ಸೂತ್ರ 22 ಕ್ಕೆ ಸಂಪೂರ್ಣ

ಮಂಗಳಮಸ್ತು

****

ಶ್ರೀಗುರು ಶಂಭುಲಿಂಗಾಯ ನಮಃ

ಪರಮಾನುಭವ ಬೋಧೆ

## 5ನೇ ಸಂಧಿ

# ಸಗುಣ ಯೋಗ

## 1ನೇ ಸೂತ್ರ

ಸಗುಣಯೋಗಾಷ್ಟಾಂಗವನು ತನು ಮಾನಸಾ ।
ದಿಗಳೊಡನೊಂದಿ ಪೇಳ್ವೆನು ಕೇಳು

ಶರೀರ ಮನಾದಿ ಅಂತಃಕರಣ ಸಹಿತವಾಗಿ ಸಗುಣ ಯೋಗದ ಎಂಟು ಅಂಗಗಳನ್ನು ವಿವರಿಸಿ ಹೇಳುವೆನು. ಅದನ್ನು ನೀನು ಲಕ್ಷ್ಯಗೊಟ್ಟು ಕೇಳು.

ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ ।
ಧಾಮಂಗೆ ಸತ್ಯಚಿದ್ರೂಪಂಗೆ ॥
ಕಾಮಿತಜನ ಕಲ್ಪಭೂಜಂಗೆ ಶಂಭುವಿಂ ।
ಗಾಮೋದದಿಂದೆ ವಂದಿಸುವೆನು ॥ 1 ॥

ಉಮಾಸಹಿತನೂ, ಪೂರ್ಣಸುಖಧಾಮನೂ, ಸದ್ರೂಪ ಚಿದ್ರೂಪನೂ, ಬೇಡಿದವರಿಗೆ ಬೇಡಿದ್ದನ್ನು ಕೊಡುವ ಕಲ್ಪವೃಕ್ಷ ಸ್ವರೂಪನೂ, ಮಹಾದೇವನೂ ಆದ ಶ್ರೀ ಶಂಭುಲಿಂಗನಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸುವೆನು.

ಶ್ರೀಮದನಂತ ವಿದ್ಯಾಮೂರ್ತಿ ಭಕ್ತ ಚಿಂ ।
ತಾಮಣಿ ಸುಜ್ಞಾನ ಶರನಿಧಿ ॥
ತಾಮಸದೂರ ನುತ್ತಮನು ಯಾಜ್ಞ್ಯವಲ್ಕ್ಯ ಮ ।
ಹಾಮುನಿಪತಿ ದಯಾಪೂರ್ಣನು ॥ 2 ॥

ಅಷ್ಟೈಶ್ವರ್ಯಸಹಿತನೂ, ವಿದ್ಯೆಯೇ ಮೂರ್ತಿವೆತ್ತವನೂ, ಭಕ್ತಜನರಿಗೆ ಬೇಡಿದ್ದನ್ನು ಕೊಡುವ ಚಿಂತಾಮಣಿಯೂ, ಆತ್ಮಜ್ಞಾನ ಸಾಗರನೂ, ಅಜ್ಞಾನರೂಪ ತಮಸ್ಸಂಟದವನೂ, ಸರ್ವಶ್ರೇಷ್ಠನೂ ಮುನಿಪತಿಯೂ ಆದ ಯಾಜ್ಞವಲ್ಕ್ಯನು ದಯಾರಸ ಪೂರ್ಣನಾಗಿದ್ದನು.

ಅನುರಾಗದಿಂದೆ ತನ್ನಿನಿಯಳ ಮನಕಹು ।
ದೆನೆ ಸಗುಣಾಷ್ಟಾಂಗ ಯೋಗವ ॥
ವಿನುತ ವೇದಾಗಮಾದಿಗಳನುಮತವಾಗಿ ।
ಮುನಿಜನರೊಪ್ಪೆ ಪೇಳ್ದನಿಂತು ॥ 3 ॥

ಪರಮ ಪ್ರೇಮದಿಂದ ತನ್ನ ಪತ್ನಿಯ ಮನಸ್ಸಿಗೆ ಒಪ್ಪಿತವಾಗುವಂತೆ ಸಗುಣಾಷ್ಟಾಂಗ ಯೋಗವನ್ನು ವಿಶೇಷವಾಗಿ ನುತಿಸಲ್ಪಟ್ಟ ವೇದ ಆಗಮಗಳ ಅನುಸಾರವಾಗಿ ಮುನಿ ಜನರು ಒಪ್ಪಿ ಅಹುದೆನ್ನುವಂತೆ ಈ ಪ್ರಕಾರವಾಗಿ ವಿವರಿಸಿದನು.

**ಯಮ ನಿಯಮಂಗಳನಾಸನ ಪ್ರಾಣಸಂ।**
**ಯಮ ಪ್ರತ್ಯಾಹಾರ ಧಾರಣೆಗಳ॥**
**ವಿಮಳ ತಧ್ಯಾನ ಸಮಾಧಿಗಳಿರವನೀ।**
**ಕ್ರಮದಿಂದ ಪೇಳ್ವೆನಾಲಿಸು ನೀರೆ॥ 4 ॥**

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ ಶುದ್ಧವಾದ ಆತ್ಮಧ್ಯಾನ ಸಮಾದಿಗಳ ಸ್ವರೂಪವನ್ನು ಈ ಕ್ರಮದಿಂದ ವಿವರವಾಗಿ ಹೇಳುವೆನು ಶುದ್ಧವೃತ್ತಿಯ ಮೈತ್ರೇಯಿ, ನೀನು ಲಕ್ಷ್ಯಗೊಟ್ಟು ಕೇಳು.

**ಯುವತಿ ಕೇಳೆಂಟಾರು ನಾಲ್ಕೆರಡಂಗವಾ।**
**ದಿವರೊಳೆಲ್ಲಾಗಳಭ್ಯಾಸಿಪ॥**
**ಜೀವರುಗಳಧಮ ಮಧ್ಯೋತ್ತಮೋತ್ತಮರೆನಿ॥**
**ಸುವರನುಗತಿವಿಡಿದು ನಿಜ॥ 5 ॥**

ಚುರುಕಾದ ವೃತ್ತಿಯುಳ್ಳವಳೆ ಕೇಳು, ಸಗುಣಯೋಗದ ಎಂಟೂ ಅಂಗಗಳನ್ನು ಅಭ್ಯಾಸ ಮಾಡುವ ಯೋಗಿಗಳು ಕನಿಷ್ಠರು, ಕೊನೆಯ ಆರು ಅಂಗಗಳನ್ನು ಅಳವಡಿಸಿಕೊಳ್ಳುವವರು ಮಧ್ಯಮರು. ಉಳಿದ ನಾಲ್ಕು ಅಂಗಗಳನ್ನು ಮಾತ್ರ ಸಾಧಿಸಿದವರು ಉತ್ತಮರು. ಕೊನೆಯ ಎರಡಂಗಗಳನ್ನೆ ಅಭ್ಯಾಸಿಸುವವರು ಉತ್ತಮೋತ್ತಮರೆನಿಸುವರು. ಈ ಕ್ರಮದಿಂದವರು ಭಿನ್ನಭಿನ್ನವಾಗಿ ಕರೆಯಿಸಿಕೊಳ್ಳುವರು ಇದು ಸತ್ಯಸಂಗತಿಯಾಗಿರುವದು.

— ಇತಿ ಸಗುಣಯೋಗಾಷ್ಟಾಂಗ ನಾಮ ನಿರ್ದೇಶನ ನಿರೂಪಣೆ—

## 2ನೇ ಸೂತ್ರ

ಯಮದಶಗುಣವಿಲ್ಲದವನಿಗೆ ನಿಜಮುಕ್ತಿ ।
ಸಮನಿಸದಬಲೆ ಕೇಳಿದು ಸತ್ಯ ॥

ಯಮಾಂಗದ ದಶಗುಣಗಳನ್ನು ಅಳವಡಿಸಿಕೊಳ್ಳದವನಿಗೆ ನಿಜಮುಕ್ತಿ ಪ್ರಾಪ್ತವಾಗಲಾರದು. ಇದು ಸತ್ಯವಾದ ಸಂಗತಿಯೆಂದು ಮೈತ್ರೇಯಿ, ನೀನು ತಿಳಿ.

ತನು ಮನೋವಚನ ಕರ್ಮನಿಕಾಯದಿಂದೋರ್ಮೆ ।
ಜನರಿಗೆ ನೋವನಡರಿಸದೆ ॥
ವಿನಯದಿಂದಿರಲದು ತಾನೆಯಹಿಂಸೆಯೆಂ ।
ದೆನಿಪುದು ನೂಪುರಾಂಚಿತ ಪಾದೆ ॥ 1 ॥

ಶರೀರ ಮನಸ್ಸು ಮಾತು ಕ್ರಿಯೆ ಇವಾವುದರಿಂದಲೂ ಜನರಿಗೆ ಒಮ್ಮೆಯೂ ನೋವನ್ನು ಉಂಟುಮಾಡದೆ ವಿನಯದಿಂದ ವರ್ತಿಸುತ್ತಿರುವದೇ ಅಹಿಂಸೆಯೆನಿಪುದೆಂದು ನೂಪುರವನ್ನು ಧರಿಸಿದ ಪಾದವುಳ್ಳ ಮೈತ್ರೇಯಿ ನೀನು ತಿಳಿ.

ಇದು ಪರಮಾರ್ಥವಿಂತಿದು ಧರ್ಮವಿದು ಸೇವ್ಯ ।
ವಿದು ಪರಹಿತವಿದು ಸಮುಚಿತ ॥
ಇದು ನೀತಿಮತವೆನಲಖಿಳಾತ್ಮರೊಳು ನುಡಿ ॥
ವುದು ಸತ್ಯವೆನಿಪುದಂಗನೆ ಕೇಳು ॥ 2 ॥

ಇದು ಅತ್ಯಂತ ಶ್ರೇಷ್ಠ ಪುರುಷಾರ್ಥವು, ಹೀಗಿದು ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಆಚಾರ ವಿಚಾರವು ಸ್ವೀಕರಿಸಲು ಯೋಗ್ಯವಾದುದು. ಅನ್ಯರಿಗೆ ಹಿತಕರವಾದುದು, ಮನಸ್ಸೊಪ್ಪುವಂಥದು, ನೀತಿ ಸಮ್ಮತವಾದುದು ಎನ್ನುವ ಹಾಗೆ ಸರ್ವರೊಳು ನುಡಿವುದು ಸತ್ಯವೆಂದು ಮಾನಿನಿ, ನೀನು ತಿಳಿ.

ತನಗೆನಿತಾಪತ್ತು ಜನಿಸಿದೊಡೇನಲ್ಲಿ ।
ತನು ಮನೋವಚನದೊಳನ್ಯರ ॥
ಧನದಾಶೆ ದೋರದಿರಲು ತಾನದಸ್ತೇಯ ।
ವೆನಿಪುದು ಗುಣಮಣಿಭೂಷಣಿ ॥ 3 ॥

ತನಗೆ ಎಷ್ಟೇ ಕಷ್ಟಗಳು ಒದಗಿ ಬಂದರೂ ಆ ಪ್ರಸಂಗದಲ್ಲಿ ಶರೀರ, ಮನಸ್ಸು, ಮಾತು ಈ ತ್ರಿಕರಣಗಳಿಂದ ಪರರ ಧನದಾಶೆಯನ್ನು ಮಾಡದಿರಲು ಅದು ಅಸ್ತೇಯವೆಂದೆನಿಸುವದೆಂದು ಸದ್ಗುಣಮಣಿ ಭೂಷಿತೆಯಾದ ಮೈತ್ರೇಯಿ ನೀನು ನಂಬು.

ಭುವನದೊಳುಳ್ಳ ಸ್ತ್ರೀ ನಿವಹದೊಳೆಂತು ಸಂ ।
ಗವನೊಲ್ಲದಿರಲದು ತಾನೆ ॥
ಯುವತಿ ನೀನರಿ ಬ್ರಹ್ಮಚರ್ಯವೆನಿಪುದು ಸಾ ।
ಧ್ಯವೆ ನೋಡು ಸಾಮಾನ್ಯ ಜನಕಿದು ॥ 4 ॥

ಲೋಕದೊಳಿರುವ ಸಕಲ ಸ್ತ್ರೀಯರಲ್ಲಿ ಯಾವ ರೀತಿಯಿಂದಲೂ ಸಂಗವನ್ನು ಬಯಸದಿರುವದೇ ಬ್ರಹ್ಮಚರ್ಯವೆಂದು ಪರಿಶುದ್ಧವೃತ್ತಿಯ (ಯುವತಿ) ಮೈತ್ರೇಯಿ ನೀನು ತಿಳಿ. ಹೀಗಿರುವದು ಸಾಮಾನ್ಯ ಜನರಿಗೆ ಸಾಧ್ಯವೆ? ವಿಚಾರಿಸಿ ನೋಡು.

ಋತುಮತಿಯಾದ ಕಾಲವನು ಮೀರದೆ ನಿಜ।
ಸತಿಯೊಳು ರತಿಸುಖ ಪಡೆವುದು॥
ನುತ ಬ್ರಹ್ಮಚರ್ಯವೆನಿಪುದೆಂದು ತಿಳಿ ನೀನು।
ಶ್ರುತಿಮತವಿದು ಸಾರಹೃದಯಳೆ॥ 5॥

ತನ್ನ ಸತಿಯು ಋತುಮತಿಯಾದ ಕಾಲವನ್ನು ತಿಳಿದು ಆ ಕಾಲವು ಮೀರದೆ ಅವಳೊಡನೆ ಕೂಡಿ ರತಿ ಸುಖವನ್ನು ಪಡೆಯುವದು ಸ್ತುತ್ಯವಾದ ಬ್ರಹ್ಮಚರ್ಯವೆನಿಸಿ ಕೊಳ್ಳುವದೆಂದು ನೀನು ತಿಳಿ. ಭಕ್ತಿರಸ ತೀವಿದ ಹೃದಯವುಳ್ಳವಳೆ ಇದು ಶ್ರುತಿ ಸಮ್ಮತವಾಗಿದೆ.

ಸ್ತುತಿ ನಿಂದೆಗಳೊಳು ಸಂತಸವಿಲ್ಲ ನೋವಿಲ್ಲ।
ವತಿಶಯಮೆನೆ ತನಗೆನಿಸುವ।
ಸ್ಥಿತಿಯನೆ ಕ್ಷಮೆಯೆಂದು ತಿಳಿವುದು ನೀನತಿ।
ಹಿತವಿದು ಸಕಲ ಸಜ್ಜನರಿಗೆ॥ 6॥

ಜನರು ತನ್ನನ್ನು ಸ್ತುತಿಸಿದರೆ ಹಿಗ್ಗೂ ಇಲ್ಲ ನಿಂದಿಸಿದರೆ ಕುಗ್ಗೂ ಇಲ್ಲ, ಇಂಥ ಅಸಾಮಾನ್ಯ ಸ್ಥಿತಿಯು ತನಗೆ ಪ್ರಾಪ್ತವಾದದ್ದೇ ಕ್ಷಮೆಯೆಂದು ನೀನು ತಿಳಿಯಬೇಕು. ಇದು ಸರ್ವ ಸಜ್ಜನರಿಗೆ ಅತ್ಯಂತ ಹಿತಕಾರಿಯೂ ಮತ್ತು ಭೂಷಣವೂ ಆಗಿದೆ.

ಧನಧಾನ್ಯ ಸುತ ಮಿತ್ರ ವನಿತಾದಿ ಹಾನಿಯೊ।
ಳನಿತರಾಗಮನದೊಳಗೆ ತನ್ನ॥
ಮನಕೆ ವಿಕೃತಿ ದೋರದಿರಲದೆ ಧೃತಿಯೆಂದು।
ವನಿತೆ ನೀನವಧರಿಸೊಲವಿಂದೆ॥ 7॥

ಧನ, ಧಾನ್ಯ, ಹೆಂಡತಿ, ಮಕ್ಕಳು ಮಿತ್ರ ಮೊದಲಾದ ವಿಷಯಗಳ ಅಳಿವಿ (ನಾಶ)ನಲ್ಲಿ ಕೊರಗಿನಿಂದ ಕುಗ್ಗುವದು ಮತ್ತು ಇವೆಲ್ಲವುಗಳ ಪ್ರಾಪ್ತಿಯಲ್ಲಿ ಆನಂದದಿಂದ ಹಿಗ್ಗುವದು ಹೀಗೆ ತನ್ನ ಮನಸ್ಸು ವಿಕಾರ ಹೊಂದದಿರುವದೇ ಧೃತಿ ಅಥವಾ ಧೈರ್ಯವೆಂದು ಎಲೈ ಸತಿಯಳೆ, ನೀನು ಮನದೊಲವಿಂದ ನಿಶ್ಚಯಿಸು.

ಪಗೆ ಕೆಳೆ ಸತಿ ಸುತಾದಿಗಳಲ್ಲಿ ಕ್ಲೇಶಂಗ।
ಳೊಗೆಯೆ ರಕ್ಷಿಪೆನೆಂಬೀ ಮತಿ ತನ್ನ॥
ಬಗೆಯೊಳುದಿಸಲದು ದಯೆಯೆಂದು ತಿಳಿ ನೀನು।
ನಗೆ ಮೊಗದರಸಿ ಸಂತಸದಿಂದೆ॥ 8॥

ವೈರಿ, ಮಿತ್ರ ಸತಿ ಸುತಾದಿ ಯಾರೇ ಇರಲಿ ಅವರು ಆಪತ್ತಿಗೊಳಗಾದರೆ ಅವರನ್ನು ನಾನು ರಕ್ಷಿಸುವೆನೆಂಬ ಸದ್ಬುದ್ಧಿ ತನ್ನ ಮನದಲ್ಲಿ ಉಂಟಾದರದೇ ದಯೆಯೆಂದೆನಿಸುವದು. ನಗೆಮುಗದ ಹಾಗೂ ಶ್ರೀಮಂತ ಹೃದಯದ ಸ್ತ್ರೀಯಳೆ ನೀನು ಇದನ್ನು ಸಂತೋಷದಿಂದ ತಿಳಿದುಕೊಳ್ಳಬೇಕು.

ಸಕಲ ನಿವೃತ್ತಿಗಳೊಳು ಪ್ರವೃತ್ತಿಗಳೊಳು।
ಸಕಲ ಧರ್ಮಾಧರ್ಮದೆಡೆಯೊಳು॥
ಸಕಲ ವಿಷಯದೊಳು ಸಮಬುದ್ಧಿಯದು ತನ।
ಗಲಂಕವೆನಿಸುವಾರ್ಜವವಕ್ಕು॥ 9 ॥

ಸರ್ವ ನಿವೃತ್ತಿ ಪ್ರವೃತ್ತಿಗಳಲ್ಲಿ ಸರ್ವ ಧರ್ಮಾಚರಣೆ ಅಧರ್ಮಾಚರಣೆಗಳಲ್ಲಿ ಮತ್ತು ಸರ್ವ ವಿಷಯಗಳಲ್ಲಿ ಸಮಬುದ್ಧಿ ಇರುವದೇ ನಿಷ್ಕಲಂಕವಾದ ಸರಳತನದ (ಆರ್ಜವ) ಗುಣವಾಗಿರುವದು.

ಉದರಾರ್ಧವನ್ನದಿಂದದರರ್ಧಮುದುಕದೊ।
ಳ್ಪುದಿದಿರಲುಂಬ ಸದ್ವಿಧಿಯದು॥
ಸುದತಿ ಕೇಳೆಲೆ ಮಿತಾಹಾರವೆನಿಸುಗುಮಿಂ।
ತಿದು ಯೋಗವೃತ್ತಿಯೊಳಗೆ ಮುಖ್ಯ॥ 10 ॥

ಉದರದ ಅರ್ಧಭಾಗವನ್ನು ಅನ್ನದಿಂದ, ಕಾಲುಭಾಗವನ್ನು ಜಲದಿಂದ ಭರಿಸಿ ಉಣ್ಣುವ ಸದ್ವಿಧಿಯು ಮಿತಾಹಾರವೆನಿಸುವದು. ಇದು ಯೋಗಾಭ್ಯಾಸದಲ್ಲಿಮುಖ್ಯವಾದ ನಿಯಮವೆಂದು ಸುಂದರ ದಂತಪಂಕ್ತಿಯುಳ್ಳ ಮೈತ್ರೇಯಿ ನೀನು ಅವಧರಿಸು.

ಉದಕ ಮೃತ್ತಿಕೆಗಳಿಂದವೆ ತನ್ನ ತನುವಿನೊ।
ಳುದಿಸಿದ ಮಲವಿಶುದ್ಧತೆಯಾಗಿ।
ಸುದತಿ ಕೇಳ್ಬಾಹ್ಯ ಶೌಚವೆನಿಪುದದು ಪುಣ್ಯ।
ಪದಸಿದ್ಧಿಗಳನಾಗು ಮಾಳ್ಪುದು॥ 11 ॥

ತನ್ನ ಶರೀರದಲ್ಲಿ ಉಂಟಾದ ಮಲ ಮೂತ್ರ ಬೆವರು ಮುಂತಾದ ಮಲಿನತೆಯನ್ನು ಜಲದಿಂದಾಗಲೀ ಮಣ್ಣಿನಿಂದಾಗಲೀ ತೊಳೆದುಕೊಂಡು ಶರೀರವನ್ನು ಪರಿಶುದ್ಧವಾಗಿಡುವದೇ ಬಾಹ್ಯ ಶೌಚವೆಂದು ಹೇಳಿಸಿಕೊಳ್ಳುವದು. ಇದು ನಿತ್ಯಕರ್ಮವಾದರೂ, ಪವಿತ್ರವಾದ ಪದವಿಯನ್ನೂ ಉತ್ತಮಲೋಕವನ್ನೂ ಕೊಡುವದಾಗಿದೆ ಎಂದು ಸುದತಿ ನೀನು ತಿಳಿ.

ಮನದೊಳೊಂದಿನಿಸು ಪೊಲ್ಲವೆಯನು ನೆನೆಯದೆ।
ಜನರಿಗೊಲವನೆ ಬಯಸುತಿರ್ಪ॥
ಅನುವಳವಡೆ ತನ್ನೊಳಂತರ ಶೌಚವೆಂ।
ದೆನಿಪುದು ವೇದಾನುಮತದಿಂದೆ॥ 12 ॥

ಮನಸಿನೊಳಗೆ ಎಳ್ಳಷ್ಟೂ ಕೆಟ್ಟ ವಿಚಾರಗಳಿಗೆ ಆಸ್ಪದ ಕೊಡದೆ ಸರ್ವಜನರಿಗೆ ಹಿತವನ್ನೇ ಬಯಸುತ್ತಿರುವ ಮನೋವೃತ್ತಿ ತನ್ನೊಳಗೆ ಅಳವಟ್ಟರೆ ಅಂತರ ಶೌಚವೆನಿಸುವದು. ಇದು ವೇದ ಸಮ್ಮತವಾಗಿರುವದು.

## 3ನೇ ಸೂತ್ರ

ತಾಪಸವೃತ್ತಿವಮುಂತಾದಗುಣಂಗಳಿಂ ।
ದಾ ಪರವುಕ್ತಿಸಿದ್ಧಿಸುವದು ॥

ತಪಸ್ಸು ಸಂತೊಷ ಆಸ್ತಿಕ್ಯ ವೊದಲಾದ ಸದ್ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳುವದರಿಂದ ಚಿತ್ತಶುದ್ಧಿಯಾಗುವದು. ಅದರ ಮೂಲಕ ತನಗೆ ಪರಮಾತ್ಮಪದರೂಪ ಮುಕ್ತಿ ಪ್ರಾಪ್ತವಾಗುವದು.

ಯಮದಶ ವಿಧವನೀ ಪರಿಯೊಳು ತಿಳುಪಿ ನಿ।
ಯಮದೊಳು ದಶಗುಣ ಭೇದವ ॥
ಕ್ರಮದಿಂದ ಪೇಳ್ವೆನಾನೆಲೆ ನೀರೆ ನೀನವ।
ನಮಳ ಬುದ್ಧಿಯೊಳವಧರಿಪುದು ॥ 1 ॥

ಯಮಾಂಗದಲ್ಲಿಯ ಹತ್ತು ಪ್ರಕಾರದ ಸದ್ಗುಣಗಳನ್ನು ಈ ಪ್ರಕಾರವಾಗಿ ತಿಳಿಸಿ, ನಿಯಮಾಂಗದಲ್ಲಿರುವ ಹತ್ತು ಸದ್ಗುಣಗಳ ರಹಸ್ಯವನ್ನು ನಾನು ಕ್ರಮವಾಗಿ ವಿವರಿಸುವೆನು. ಮೃದುವೃತ್ತಿಯುಳ್ಳ ಮೈತ್ರೇಯಿ ನೀನು ಅದನ್ನು ಶುದ್ಧಬುದ್ಧಿಯಲ್ಲಿ ನಿಶ್ಚಯಿಸು.

ಉಪವಾಸ ಕೃಛ್ರ ಚಾಂದ್ರಾಯಣಾದಿಗಳಿಂದ।
ವಪರಿಮಿತ ಕ್ಲೇಶದೊಳು ತನ್ನ॥
ವಪುರಿಂದ್ರಿಯಗಳನುರೆ ನಿರೋಧಿಸಲದು।
ತಪವೆಂಬ ನಿಯಮವೆಂದೆನಿಪುದು ॥ 2 ॥

ಏಕಾದಶಿ, ಸೋಮವಾರ, ಶಿವರಾತ್ರಿಯಲ್ಲಾಗಲೀ ಅಥವಾ ಪರ್ವಕಾಲಗಳಲ್ಲಿ ಯಾಗಲಿ ಊಟ ಮಾಡದೆ ಶರೀರವನ್ನು ಒಣಗಿಸುವದು ಉಪವಾಸವು. ಮೂರು ದಿನ ಹಾಲು ಹಣ್ಣಿನಿಂದ, ಮೂರು ದಿನಗಳವರೆಗೆ ಕೇವಲ ನೀರು ಸೇವಿಸುವಿಕೆ, ಮೂರು ದಿನ ಕೇವಲ ವಾಯು ಸೇವನೆ ಇತ್ಯಾದಿ ಕಠಿಣ ವ್ರತವೆ ಕೃಚವು. ಚಂದ್ರನು ಅಮವಾಸ್ಯೆಯಿಂದ ಹುಣ್ಣಿಮೆವರೆಗೆ ವೃದ್ಧಿಸುತ್ತ ಅಲ್ಲಿಂದ ಅಮವಾಸ್ಯೆವರೆಗೆ ಕ್ಷಯಿಸುವಂತೆ ತುತ್ತನ್ನು ಹೆಚ್ಚಿಸುತ್ತಮತ್ತುಕಡಿಮೆ ಮಾಡುತ್ತಹೋಗುವದು ಚಾಂದ್ರಾಯಣವೆನಿಸುವದು. ಹೀಗೆ ಶರೀರ ಮತ್ತುಇಂದ್ರಿಯಗಳನ್ನು ಕುಗ್ಗಿಸುವ ನಿಯಮಾಂಗವೇ ತಪಸ್ಸೆಂಬ ಸದ್ಗುಣವಾಗಿರುವದು.

ದೊರಕಿದ ಲಾಭವೆನಿತು ತನಗನಿತನೆ।
ಪರಿಣಮಿಸುವ ಬುದ್ಧಿ ಘಟಿಸಲು ॥
ಹರುಷ ಲಕ್ಷಣಮಾದ ಪರಮ ಸಂತೋಷವೆಂ।
ಬರು ಮುನಿವರರದನೆಲೆ ನೀರೆ ॥ 3 ॥

ಉದ್ಯೋಗದಲ್ಲಿ ತನಗೆ ಎಷ್ಟು ಪ್ರಾಪ್ತಿಯಾಗುವದೋ ಅಷ್ಟರೊಳಗೆ ತೃಪ್ತನಾಗಿ ಇರುವದೆ ಪರಮ ಸಂತೋಷವೆನಿಸುವದು.ಇದು ಮುನಿಶ್ರೇಷ್ಠರ ಮತವು. ದೊರಕಿದುದರಲ್ಲಿ ಸಮಾಧಾನ ಹೊಂದಬೇಕೆಂಬ ಭಾವ.

ಇದು ಧರ್ಮವಿದಧರ್ಮ ವಿದು ಕಾರ್ಯವಿದಕಾರ್ಯ।
ವಿದು ನಿಜವೆಂದಾಗಮೋಕ್ತದಿ॥
ಪದಪಿಂದೆ ತಿಳಿದು ನಂಬಿರಲದಾಸ್ತಿಕ್ಯವೆಂ।
ಬುದು ಕೇಳು ಕಂಜದಳಾಂಬಕಿ ॥ 4 ॥

ಇದು ಪುಣ್ಯವು, ಇದು ಪಾಪವು. ಇದು ಮಾಡತಕ್ಕದ್ದು ಇದು ಮಾಡತಕ್ಕದಲ್ಲ, ಇದು ಸತ್ಯವಾದದ್ದೆಂದು ಆಗಮ ಪ್ರಮಾಣದಂತೆ ಪ್ರೀತಿಯಿಂದ ತಿಳಿದು ನಿಶ್ಚಯಿಸಬೇಕಲ್ಲದೆ ಇವುಗಳನ್ನು ಪ್ರತ್ಯಕ್ಷ ನೋಡಲು ಬರುವದಿಲ್ಲ. ಪುಣ್ಯ ಪಾಪಗಳನ್ನು ಅನುಭವಿಸಿ ಹಾಗೂ ವೇದ ಪ್ರಮಾಣದಿಂದ ನಿರ್ಧಸಿ ನಂಬುವದೇ ಆಸ್ತಿಕ್ಯವೆಂದು ಹೇಳಿಸಿಕೊಳ್ಳುವದು.

ಧನ ಧಾನ್ಯ ವಸ್ತ್ರವಾಹನ ವನಿತಾದಿಗ।
ಳನು ನೀತಿಯುಡಗದೆ ಸತ್ಪಾತ್ರ ॥
ಜನಕನುರಾಗದಿಂದೀವುದೆ ದಾನವೆಂ।
ದೆನಿಪುದು ಮಿಸುನಿ ವಣ್ಣದಗಾತ್ರೆ ॥ 5 ॥

ಧನ ಧಾನ್ಯ ವಸ್ತ್ರ ವಾಹನಾದಿಗಳನ್ನು ನೀತಿ ನಿಯಮಗಳಿಗನುಸರಿಸಿ ಸತ್ಪಾತ್ರದಲ್ಲಿ ದಾನ ಮಾಡುವದು ಅಂದರೆ ಬಡವರಿಗೆ ಧನದಿಂದ, ಹಸಿದವರಿಗೆ, ಅನ್ನವನ್ನು ಕೊಟ್ಟು, ಪ್ರಯಾಣಿಕನಿಗೆ ವಾಹನವನ್ನು ಒದಗಿಸುವದು ಯೋಗ್ಯವರನಿಗೆ ಕನ್ಯಾದಾನ ಮಾಡುವದು. ಇದೆಲ್ಲವು ದಾನವೆಂದೆನಿಸುವದು.

– ಇತಿ ನಿಯಮದಲ್ಲಿಯ ಚತುರ್ಭೇದ ನಿರೂಪಣೆ –

## 4ನೇ ಸೂತ್ರ

ಶಿವನೆ ತಾನೆಂದು ಮಾನಸದೊಳು ಪೂಜಿಸ-।
ದವನಿಗೆ ಭವಬಂಧವಳಿವುದೆ ॥

ಪರಮಾತ್ಮನೆ ತಾನೆಂದು ಮನಸ್ಸಿನಲ್ಲಿ ತಿಳಿದು ಯಾವನು ಪೂಜಿಸುವದಿಲ್ಲವೋ ಅವನಿಗೆ ಜನನ ಮರಣರೂಪ ಸಂಸಾರ ದುಃಖವು ನಿವೃತ್ತಿಯಾಗಲಾರದು.

ತನು ವಚೋಮಾನಸ ವಿನಿತರಿಂದೀಶ್ವರಾ।
ರ್ಚನೆ ಮೂರು ತೆರನಲ್ಲಿ ಕ್ರಮದಿಂದ॥
ವನಿತೆ ಕನಿಷ್ಠ ಮಧ್ಯೋತ್ತಮವೆನಿಸಿ ಭ।
ಜನೆ ನುತಿ ಚಿಂತನೆ ವಿಡಿದಿರ್ಕು ॥ 1 ॥

ಶರೀರ ಮಾತು ಮನಸು ಈ ತ್ರಿಕರಣಗಳಿಂದ ಮಾಡುವ ಈಶ್ವರ ಪೂಜೆಯು ಕ್ರಮವಾಗಿ ಕನಿಷ್ಠ ಮಧ್ಯಮ ಉತ್ತಮವೆಂದು ಹೇಳಿಸಿಕೊಳ್ಳುವದು. ಅದು ಭಜನೆ, ಸ್ತುತಿ, ವಿಚಾರ ರೂಪದಿಂದ ಮೂರು ರೀತಿಯಾಗಿರುವದು.

ತನುವಿನಿಂದವೆ ಸಿರಿ ವಚನದಿಂದವೆ ಸಗ್ಗ।
ದನುಭೂತಿ ಮಗುಳೆ ಮಾನಸದಿಂದ ॥
ಘನಮುಕ್ತಿ ತನಗಹುದಾಗಿ ಪೂಜಾಫಲ।
ವೆನಿಸುಗುಮಿಂತು ಮೂದೆರನೆಂದು ॥ 2 ॥

ಶರೀರದ ಮೂಲಕ ಭಜನಾರೂಪ ಅರ್ಚನೆ ಮಾಡುವದರಿಂದ ಐಶ್ವರ್ಯಪ್ರಾಪ್ತಿ ಮಾತಿನಿಂದ ಸ್ತುತಿರೂಪ ಪೂಜೆಯಿಂದ ಸ್ವರ್ಗಸುಖದನುಭವ. ಮನಸ್ಸಿನಿಂದ ಪರಮಾತ್ಮನ ಚಿಂತನ ಮಾಡುವದರಿಂದ ತನಗೆ ಘನತರಮುಕ್ತಿ ಲಭಿಸುವದು. ಈ ಪ್ರಕಾರ ಪೂಜಾಫಲವು ಮೂರು ರೀತಿಯಾಗಿರುವದು.

ಅದರಿಂದೆ ಮೋಕ್ಷಾರ್ಥಿ ಹೃದಯದೊಳೀಶ್ವರ।
ಪದವನರಿದು ಸಲೆ ಜಾನಿಸಿ ॥
ಪದಪಿಂದೆ ಭಜಿಸಿ ಕೈವಲ್ಯವನೈದ ಬೇ।
ಹುದು ಕೇಳು ಕಾಂತೆ ನಿಶ್ಚಯವಿದು ॥ 3 ॥

ಆದ್ದರಿಂದ ಮೋಕ್ಷವನ್ನು ಬಯಸುವವನು ಈಶ್ವರನ ಸ್ವರೂಪವನ್ನು ತನ್ನ ಹೃದಯ ಕಮಲದಲ್ಲಿ ಅರಿತು ಚನ್ನಾಗಿ ಧ್ಯಾನ ಮಾಡಿ ಪರಮಭಕ್ತಿಯಿಂದ ಭಜಿಸಿ, ಕಾಂತೆಯೆ ಕೇಳು, ಕೈವಲ್ಯಪದವನ್ನು ನಿಶ್ಚಯವಾಗಿ ಪಡೆಯಬೇಕು.

ಪಳುಕಿನ ಮಿಂಚಿನ ಬೆಳದಿಂಗಳಿನ ತಾರೆಗಳ।
ರನ್ನ ವೆಳಗಿನಂತಭವನ ॥
ತಿಳಿದು ಸೋಹಂ ಭಾವವಳವಟ್ಟು ಮೋಕ್ಷಾರ್ಥಿ।
ಗಳು ದೇಹರದೊಳು ಜಾನಿಸುವದು ॥ 4 ॥

ಸ್ಫಟಿಕ, ಮಿಂಚು, ಬೆಳದಿಂಗಳು ನಕ್ಷತ್ರಗಳು ರತ್ನಗಳು ಇವುಗಳ ಪ್ರಕಾಶವನ್ನು ನಾವು ಪ್ರತ್ಯಕ್ಷವಾಗಿ ಅನುಭವಿಸುವಂತೆ ಪರಮಾತ್ಮನನ್ನು ಅನುಭವ ಪೂರ್ವಕ ತಿಳಿದು ಅವನೇ ನಾನಿದ್ದೇನೆಂಬ ಭಾವವು ದೃಢಗೊಂಡು ಮುಮುಕ್ಷುಗಳು ತಮ್ಮ ಹೃದಯ ಮಧ್ಯದಲ್ಲಿ ತನ್ಮಯರಾಗಿ ಧ್ಯಾನ ಮಾಡಬೇಕು.

ಬಿಂದು ನಾದ ವ್ಯೋಮ ಮಂತ್ರ ಭುವನ ಮೂರ್ತಿ।
ಯೆಂದಾರು ತೆರದಿಂದಲಭವನ ॥
ಕುಂದದೆ ನೆನದರ್ಚಿಪುದು ನಿಜ ಹೃದಯಾರ।
ವಿಂದದೊಳ್ಪಲ ಭೇದಯುತರೊಲ್ದು ॥ 5 ॥

ಬೇರೆ ಬೇರೆ ಫಲಗಳನ್ನು ಬಯಸುವವರು ಪರಮಭಕ್ತಿಯಿಂದ ತಮ್ಮ ಹೃದಯ ಕಮಲದಲ್ಲಿ ತವಕದಿಂದ, ಪ್ರಕಾಶ ರೂಪದಿಂದಲೂ ನಾದರೂಪದಿಂದಲೂ ನಿರಾಕಾರದಿಂದಲೂ ಮಂತ್ರರೂಪದಿಂದಲೂ ಜಗದ್ರೂಪದಿಂದಲೂ ವಿರಾಡ್ರೂಪ ದಿಂದಲೂ ಸ್ಮರಣ ಮಾಡಿ ಪರಮಾತ್ಮನನ್ನು ಪೂಜಿಸಿತಕ್ಕದ್ದು.

– ಇತಿ ಈಶ್ವರಪೂಜಾ ನಿಯಮ ನಿರೂಪಣೆ –

## 5ನೇ ಸೂತ್ರ

ಮಾಡುಶಿವಾರ್ಚನೆಯನು ಹೃದಯಾಬ್ಜದೊ ।
ಳಾಡದೆ ಬೇರೊಂದುಮತವನು ॥

ಬೇರೆ ಮತ ಪಂಥಗಳಲ್ಲಿ ಏನೇ ಹೇಳಿರಲಿ, ಅದನ್ನು ಲಕ್ಷ್ಯದಲ್ಲಿ ತಾರದೆ ಆತ್ಮಸ್ವರೂಪವಾದ ಶಿವನ ಪೂಜೆಯನ್ನು ಮಾಡು.

ಮಾಯೆ ಹೊದ್ದದ ಬೋಧವನು ಶುದ್ಧ ಮತಿವಿಡಿ ।
ದೊಯ್ಯಾರದಿಂದ ಭಾವಿಸಿ ತಾನು ॥
ಕಾಯಾದಿ ಕರಣಾಂತರದೊಳು ತದ್ಗುಣ ಸಮು ।
ದಾಯಾನುಗುಣದಿಂದೆ ಭಜಿಪುದು ॥ 1 ॥

ಶುದ್ಧಾಂತಃಕರಣದಿಂದ ಮಾಯಾವರಣವಿಲ್ಲದ ಸಚ್ಚಿದಾನಂದರೂಪ ಚೈತನ್ಯವನ್ನು ಕಾಯಾದಿ ತ್ರಿಕರಣಗಳಲ್ಲಿ, ಗಂಗೆಯನ್ನು ಗಂಗಾಜಲದಿಂದಲೇ ಪೂಜಿಸುವಂತೆ, ಚೈತನ್ಯದ ಲಕ್ಷಣಗಳಿಂದಲೇ ಶಿವನನ್ನು ಲಕ್ಷಿಸಿ ಭಜಿಸಬೇಕು.

ಹರನೆ ಸರ್ವಾಧಾರನೆಂಬುದಾಸನವದು ।
ಪರಿಪೂರ್ಣವೆಂಬುದಾವ್ಹಾನವು ॥
ಹರುಷವಾರಿಧಿಯೆಂಬುದರ್ಘ್ಯವೀ ಜಗವೀಶ ।
ಚರಣವೆಂಬುದೆ ಪಾದ್ಯವೆನಿಪುದು ॥ 2 ॥

ಪರಮಾತ್ಮನು ನಾಮರೂಪಾತ್ಮಕ ಸಕಲ ಜಗತ್ತಿಗೆ ಆಧಾರಧಿಷ್ಠಾನನಾಗಿರುವನೆಂದು ತಿಳಿಯುವದೇ ಆಸನವೆನಿಸುವದು. ಅವನು ಪರಿಪೂರ್ಣನಾಗಿರುವನೆಂದು ಭಾವಿಸುವದೇ ಪರಮಾತ್ಮನನ್ನು ಆವ್ಹಾನಿಸುವದಾಗಿದೆ. ಅವನು ಆನಂದ ಸಾಗರನಿದ್ದಾನೆಂದು ನಿಶ್ಚಯಿಸುವದು ಹಸ್ತ ತೊಳೆಯುವದು (ಅರ್ಘ್ಯ) ಎಂದು ಹೇಳಿಸಿಕೊಳ್ಳುವದು. ಜಗತ್ತೆಲ್ಲವೂ ಪರಮಾತ್ಮನ ಪಾದಕಮಲವೆಂದು ತಿಳಿಯುವದು ಅವನ ಪಾದಪೂಜೆಯೆನಿಸುವದು.

ಅರಿವೆ ಪಾವನರೂಪವೆಂಬುದಾಚಮನೀಯ।
ವರಿವೆ ನಿರ್ಮಲವೆಂಬುದಭಿಷೇಕ॥
ಅರಿವೆ ವಿಶ್ವಾತೀತವೆಂಬುದಾಚ್ಛಾದನ।
ವರಿವೆ ನಿಗುರಣವೆಮುಬುದುಪವೀತ॥3॥

ಅರಿವು ಅರ್ಥಾತ್ ಚೈತನ್ಯರೂಪ ಪರಮಾತ್ಮನು ಪಾವನ ಸ್ವರೂಪನೆಂದು ತಿಳಿದರೆ ಅದು ಮುಖಮಾರ್ಜನೆಯೆನಿಸುವದು. ಅರಿವು ನಿರ್ಮಲವಾಗಿದೆಯೆಂಬುದು ಅವನಿಗೆ ಅಭಿಷೇಕವಾಗಿದೆ. ಅರಿವು ವಿಶ್ವಾತೀತ ಅಂದರೆ ವಿಶ್ವವನ್ನು ಮೀರಿ ಅನಂತ ವಾಗಿದೆ ಯೆಂದು ತಿಳಿದರೆ ಅದು ವಸ್ತ್ರ ಹೊದಿಸುವದಾಗಿದೆ. ಅರಿವು ಗುಣರಹಿತವಾಗಿದೆ ಎಂದು ಭಾವಿಸುವದು ಜನಿವಾರ ಧರಿಸುವದಾಗಿದೆ. ಇದೇ ನಿರ್ಗುಣ ಪೂಜೆಯು.

ಚಿತ್ತೆ ಶೋಭನವೆಂಬ ತಿಳಿವಲಂಕೃತಿ ತಾನೆ।
ಚಿತ್ತೆಂಬ ಬಗೆ ಅನುಲೇಪನ॥
ಚಿತ್ತೆ ನಾದಾದಿಯೆಂಬುದು ಪುಷ್ಪವತಿ ಕೀರ್ತಿ।
ವೆತ್ತುದು ಚಿತ್ತೆಂಬುದದು ಧೂಪ॥4॥

ಇಲ್ಲಿ ಪರಮಾತ್ಮನಿಗೆ ಚಿತ್ ಎಂದರೆ ಶುದ್ಧ ಚೇತನವೆಂಬ ಪದ ಬಳಸಿದ್ದಾರೆ. ಚಿತ್ತು ಮನೋಹರವಾದದ್ದೆಂದು ತಿಳಿದದ್ದೇ ಅಲಂಕಾರ ತೊಡಿಸುವದಾಗಿದೆ. ಇಂತಹ ಚಿದ್ರೂಪ ಪರಮಾತ್ಮನೇ ತಾನೆಂಬುದು ಗಂಧಲೇಪನವು. ಚಿದ್ರೂಪವು ನಾದ ಬಿಂದು ಕಲೆಯಾಗಿದೆ, ಎಂಬ ತಿಳಿವೆ ಪುಷ್ಪಾರ್ಪಣೆಯು. ಚಿತ್ತು ಅತ್ಯಂತ ಕೀರ್ತಿಪಡೆದಿದೆ ಎಂಬ ಬಗೆಯು ಅವನಿಗೆ ಧೂಪಸಮರ್ಪಣೆಯಾಗಿದೆ.

ಪುರುಷ ಸ್ವಯಂಜ್ಯೋತಿಯೆಂಬುದೆ ದೀಪವಾ।
ಪುರುಷನು ನಿತ್ಯತೃಪ್ತನೆಂಬ॥
ಪರಿಯೆ ನೈವೇದ್ಯವಾ ಪುರುಷನೆ ಗುಣದೂರ।
ದಿರವೆಂಬುದದು ವೀಳ್ಯವೆನಿಪುದು॥5॥

ಪರಮಾತ್ಮನು ಸ್ವಯಂಪ್ರಕಾಶನೆಂಬ ತಿಳಿವಳಿಕೆಯೆ ದೀಪ ಬೆಳಗುವದಾಗಿದೆ. ಅವನು ನಿತ್ಯ ತೃಪ್ತನೆಂದು ತಿಳಿವುದು ನೈವೇದ್ಯದರ್ಪಣೆಯು. ಆ ಪರಮಾತ್ಮನ ಸ್ವರೂಪವು ತ್ರಿಗುಣಾತೀತವಾಗಿದೆಯೆಂಬುದು ಅವನಿಗೆ ತಾಂಬೂಲ ಸಮರ್ಪಣೆಯೆನಿಸಿದೆ.

ತಾನೀಶ ನೀಶತಾನೆಂಬುದಾವೃತ್ತಿಯು।
ತಾನೆ ಪರಾತ್ಪರನೆಂಬುದು॥
ಮಾನಿನಿ ಕೇಳು ವಂದನೆ ತಾನಲ್ಲದೆ ಬೇರೆ।
ಏನುಮಿಲ್ಲೆನ್ನೆ ವಿಸರ್ಜನವದು॥6॥

ಈಶ್ವರನೆ ತಾನು, ತಾನೇ ಈಶ್ವರನೆಂಬುದು ಪ್ರದಕ್ಷಿಣೆಯೆನಿಸುವದು. ತಾನೆ ಪರಾತ್ಪರ ಪರಮಾತ್ಮನೆಂದು ತಿಳಿಯುದು ನಮಸ್ಕಾರವು. ತನ್ನ ಬಿಟ್ಟು ಬೇರೇನೂ ಇಲ್ಲವೆಂದು ನಿಶ್ಚಯಿಸುವದೇ ಬೀಳ್ಕೊಡುವ (ವಿಸರ್ಜನೆ) ದಾಗಿದೆ.

ಇಂತುಪಚರಿಸು ನಿಜಾತ್ಮದೇವತೆಯ ನೋ।
ರಂತೆ ಹೃದಯ ಪೀಠದೆಡೆಯೊಳು ॥
ಸಂತತವನ್ಯ ಭಾವನೆಯನುಳಿದು ಬಾಹ್ಯ।
ಚಿಂತೆದೊರದ ಶುದ್ಧಮತಿವಂತೆ ॥ 7 ॥

ಈ ಪ್ರಕಾರವಾಗಿ ನಿನ್ನ ಆತ್ಮದೇವನನ್ನು ಹೃದಯ ಸಿಂಹಾಸನದಲ್ಲಿ ಚೆನ್ನಾಗಿ ಪ್ರತಿಷ್ಠಾಪಿಸಬೇಕು. ನಂತರ ತನಗನ್ಯವಾದ ಕಲ್ಪನೆಯನ್ನು ತ್ಯಜಿಸಿ ಅಂದರೆ ಸದಾಕಾಲದಲ್ಲಿ ಪೊರಚಿಂತೆಯಳಿದು ಎಲೈ ಶುದ್ಧಚಿತ್ತವುಳ್ಳ ಮೈತ್ರೇಯಿ, ನಿನ್ನಾತ್ಮನನ್ನು ಸತತವಾಗಿ ಸೇವಿಸು.

– ಇತಿ ಈಶ್ವರಪೂಜಾ ನಿಯಮ ಕ್ರಮ ನಿರೂಪಣೆ –

## 6ನೇ ಸೂತ್ರ

ಶ್ರುತಿಯಸಿ ತಾನರಿಯದೆ ಗುರುವುತವಿಡಿಯದೆ ।
ಗತಿಯನು ಬೇರರಸಿದೊಡುಂಟೆ ॥

ಶ್ರುತಿಯ ತಾತ್ಪರ್ಯವನ್ನು ತಾನು ತಿಳಿದುಕೊಳ್ಳದೆ, ಸಂಪ್ರದಾಯಕ ಗುರುಮಾರ್ಗವನ್ನು ಅನುಸರಿಸದೆ, ಬೇರೆ ರೀತಿಯಿಂದ ಮೋಕ್ಷವನ್ನು ಬಯಸಿದರೆ ಅದು ಪ್ರಾಪ್ತವಾಗಲಾರದು.

ಪವಣಿತೆ ಮಿಗೆ ವೇದಶಿರವನು ತನ್ನನು।
ಭವಕೆ ಬರ್ಪಂತೆ ತಿಳಿವುದನು ॥
ವಿವಿಧ ತಾಪಸ ಮುಖ್ಯರೊಲವಿಂದೆ ಸಿದ್ಧಾಂತ।
ಶ್ರವಣವೆಂಬರು ನಿಜವಿದು ತಾನು ॥ 1 ॥

ಪ್ರಮಾಣಕ್ಕನುಸರಿಸಿ ವೇದಗಳ ಶಿರವಾದ ಉಪನಿಷತ್ತುಗಳ ತಾತ್ಪರ್ಯವಾದ ತನ್ನ ಸ್ವರೂಪವು ಅನುಭವಕ್ಕೆ ಬರುವಂತೆ ತಿಳಿಯುವದನ್ನು ಅನೇಕ ಪರಮ ತಪಸ್ವಿಗಳು ಪ್ರೇಮದಿಂದ ಸಿದ್ಧಾಂತ ಶ್ರವಣವೆಂದು ಹೇಳುವರು. ಇದೇ ಸತ್ಯವಾದ ಸಂಗತಿಯಾಗಿದೆ.

ವೇದ ಲೌಕಿಕ ಮಾರ್ಗದೊಳು ನಿಂದಿಸಲು ಯೋಗ್ಯ।
ವಾದ ನಿಷೇಧ ವರ್ತನವನು ॥
ಆದರಿಸದೆ ಬಿಡುವದು ತಾನೆ ಲಜ್ಜೆಯಿಂ।
ದೋಧಿ ಪೇಳುವದು ಸದ್ಗುಣಗಳು ॥ 2 ॥

ಪಾರಮಾರ್ಥಿಕ ಮತ್ತು ಲೌಕಿಕ ಮಾರ್ಗದಲ್ಲಿ ನಿಂದೆಗೆ ಪಾತ್ರವಾದ ನಿಷಿದ್ಧ ನಡವಳಿಕೆಯನ್ನು ಅನುಸರಿಸದೆ ಬಿಟ್ಟು ಬಿಡುವದು ಲಜ್ಜೆಯೆಂದು ಶ್ರೋತ್ರಿಯ ಬ್ರಹ್ಮನಿಷ್ಠರಾದ ಸದ್ಗುರುಗಳು ವಿವರಿಸಿ ಹೇಳುವರು.

ತನಗೆ ಕೇಳಧ್ಯಾತ್ಮದೊಳಗೆ ವಿಹಿತವೆನಿ।
ತನಿತುವನರಿದು ಸುಸ್ಥಿರಮಾಗಿ ॥
ಮನದೊಳು ನಂಬಿರಲದು ತಾನೆ ಮತಿಯೆಂದು।
ವಿನುತಿಸುವರು ವೇದವಿದರೊಲ್ದು ॥ 3 ॥

ಮೈತ್ರೇಯಿ ಕೇಳು. ಪ್ರತ್ಯಗಾತ್ಮ ಪರಮಾತ್ಮನನ್ನು ತಿಳಿದುಕೊಳ್ಳಲು ತನಗೆ ಅವಶ್ಯವಿರುವೆಲ್ಲವನ್ನು ಅರಿತುಕೊಂಡು ದೃಢತರವಾಗಿ ಮನದೊಳಗೆ ಪೂರ್ಣ ನಂಬಿರುವದಕ್ಕೆ ಮತಿಯೆಂದು ವೇದ ಬಲ್ಲ ಜ್ಞಾನಿಗಳು ಹೃದಯ ತುಂಬಿ ಬಣ್ಣಿಸುವರು.

ಮಾನಿನಿ ವಾಚಕೋಪಾಂಶು ಮಾನಸವೆಂದು।
ತಾನಿಂತು ತ್ರಿವಿಧವಾ ಜಪವಿಧಿ ॥
ಸಾನುರಾಗದೊಳರಿ ನೀನೊಂದು ಸಾವಿರ।
ವಾನಂತ ಫಲವವಕನುಗತಿ ॥ 4 ॥

ಸಬ್ಬ್ಯಳೆ ಕೇಳು, ವಾಚಕಜಪ, ಉಪಾಂಶುಜಪ ಮತ್ತು ಮಾನಸ ಜಪವೆಂದು ಜಪವಿಧಾನವು ಮೂರು ಪ್ರಕಾರವಾಗಿರುವದು. ನೀನು ಪರಮ ಆಸಕ್ತಿಯಿಂದ ತಿಳಿದುಕೊಳ್ಳಬೇಕು. ಒಂದು ಸಾವಿರ ನಾಮಜಪವನ್ನು ಪಠಿಸಿದರೆ ಅದಕೆ ಕ್ರಮವಾಗಿ ಅನಂತ ಫಲವು ಪ್ರಾಪ್ತವಾಗುವದು.

ಇದಿರಿಂಗೆ ಕೇಳಬರ್ಪುದು ವಾಚಕವೆನಿಕ್ಕು।
ಮಿದಿರಿಂಗೆ ಕೇಳಬಾರದೆ ತನ್ನ॥
ರದನಚ್ಛದಂಗಳಲುಗೆ ಮಾಳ್ಪ ಜಪವಿಧಿ।
ಯದು ತಾನುಪಾಂಶುವೆಂದೆನಿಪುದು ॥ 5 ॥

ಬೇರೆಯವರಿಗೆ ಕೇಳುವಂತೆ ಜಪಿಸುವದು ವಾಚಕ ಜಪವೆನಿಸುವದು. ಬೇರೆಯವರಿಗೆ ಕೇಳಿಸದಂತೆ ಕೇವಲ ತನ್ನ ತುಟಿಗಳನ್ನಲುಗಿಸಿ ಮಾಡುವ ಜಪವು ಉಪಾಂಶುವೆನಿಸುವದು.

ವನಿತು ಮಂತ್ರದ ಪದವನಿತನೆ ತನ್ನಯ।
ಮನದಲುಚ್ಚರಿಸಲಂತದು ತಾನೆ॥
ವನಿತೆ ಕೇಳ್ಮಾನಸ ಜಪವೆನಿಪುದು ಶಾಸ್ತ್ರ
ದನುಮತವದು ಮುಮುಕ್ಷುವಿಗೆ ಬೇಕು ॥ 6 ॥

ಹೇ ಸ್ತ್ರೀಯಳೆ ಕೇಳು. ಮಂತ್ರದ ಪದಗಳೆಷ್ಟಿರುವವೋ ಅಷ್ಟೆಲ್ಲವನ್ನು ತನ್ನ ಮನಸ್ಸಿನೊಳಗೆಯೇ ಉಚ್ಚರಿಸುವದು ತಾನೆ ಮಾನಸ ಜಪವೆಂದು ಹೇಳಿಸಿಕೊಳ್ಳುವದು. ಇದು ಶಾಸ್ತ್ರಕ್ಕೆ ಅನುಸರಿಸಿ ಮುಮುಕ್ಷುಗಳಿಗೆ ಅವಶ್ಯವಿರುವದು. (ಮಾನಸ ಜಪವೇ ಶ್ರೇಷ್ಠವಾದುದು)

ಗುರುಮತದೊಳು ವೇದ ಶಿರದ ರಹಸ್ಯವ।
ನುರು ಭಕ್ತಿಯಿಂದವಭ್ಯಾಸಿಪ॥
ಪರಿ ತಾನೆ ಸ್ವಾಧ್ಯಾಯವೆನಿಪುದೆಂದರಿದು ನಿ।
ರ್ಧರಿಸು ನೀನಿಂದುಸನ್ನಿಭವಕ್ತ್ರೆ॥ 7 ॥

ವೇದಶಿರಸ್ಸಾದ ಉಪನಿಷತ್ತುಗಳ ರಹಸ್ಯಾರ್ಥ ಅಂದರೆ ಲಕ್ಷ್ಯಾರ್ಥವನ್ನು ಅತ್ಯಂತ ಭಕ್ತಿಪುರಸ್ಸರವಾಗಿ ಗುರುಮಾರ್ಗದಲ್ಲಿ ಅಭ್ಯಾಸ ಮಾಡುವ ರೀತಿಯದು ಸ್ವಾಧ್ಯಾಯವೆಂದು ಹೇಳಿಸಿಕೊಳ್ಳುವದು. ಚಂದ್ರಮುಖಿ ಮೈತ್ರೇಯಿ, ಇದನ್ನು ನೀನು ತಿಳಿದು ರಹಸ್ಯವನ್ನು ನಿರ್ಧರಿಸಬೇಕು.

ನಿಯತದೆ ಗಾಯತ್ರಿಯನು ಸಪ್ತಾಹೃತಿಯನು।
ನಿಯತದೆ ಪ್ರಣವವ ನಜಪೆಯ॥
ನಿಯತದೆ ಕಾಲತ್ರಯದೊಳು ಜಪಿಸಲದೆ।
ಪ್ರಿಯತಮೆ ಸ್ವಾಧ್ಯಾಯವೆನಿಪುದು॥ 8 ॥

ನಿಯಮಿತವಾಗಿ ಗಾಯತ್ರಿಯನ್ನು (ಟಿ–1) ಸಪ್ತಾಹೃತಿಯನ್ನು (ಟಿ–2) ಪ್ರಣವ ಅಜಪೆ (ಟಿ–3) ಇವೇ ಮೊದಲಾದ ಮಂತ್ರಗಳನ್ನು ಮೂರು ಕಾಲಗಳಲ್ಲಿ ಜಪಿಸಿದರೆ, ಪ್ರಿಯಳೆ, ಅದೇ ಸ್ವಾಧ್ಯಾಯನವೆನಿಸಿಕೊಳ್ಳುವದು.

ವೇದವನಾಹತನಾದಾದಿಯದರಿಂದೆ।
ನಾದದ ಬಹುವಿಧದಭ್ಯಾಸವ॥
ಆದರದಿಂದೆ ರಚಿಸುತಿರಲದು ತಾನೆ।
ವೇದಸ್ವಾಧ್ಯಾಯವೆನಿಸುತಿರ್ಕು॥ 9 ॥

ವೇದರೂಪವಾದ ಓಂಕಾರವು ಅದರಿಂದ ಹೊಡೆಯದಿದ್ದರೂ ಕೇಳುವ ನಾದವು ಮೊದಲನೆಯದು. ಆದರಿಂದ ಸಂಜನಿತ ಬಹುರೂಪ ನಾದದ ಅಭ್ಯಾಸವನ್ನು ಪ್ರೀತಿಯಿಂದ ಮಾಡುತ್ತಿರಬೇಕು. ಈ ಸ್ವರಗಳಿಂದ ವೇದಗಳನ್ನು ವಿರಚಿಸುವದೆ ವೇದ ಸ್ವಾಧ್ಯಾವೆನಿಸುವದು.

1. [ ಟಿಪ್ಪಣಿ :– ಓಂ ಭೂರ್ಭುವಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯಧೀಮಹಿ ಧಿಯೋಯೋನಃ ಪ್ರಚೋದಯಾತ್ ॥ ಇದು ಗಾಯತ್ರಿ ಮಂತ್ರವು. ] 2. [ ಟಿಪ್ಪಣಿ :– 'ಓಂ ಭೂಃ ಭೂವಃ ಮಹಃ ಜನಃ ತಪಃ ಸತ್ಯಂ' ಸಪ್ತಾಹೃತಿಯು. ] 3. [ ಟಿಪ್ಪಣಿ :– ಸರ್ವ ಪ್ರಾಣಿಗಳ ಸ್ವಾಚ್ಛೋಚ್ಛ್ವಾಸರೂಪದಿಂದ ತಾನಾಗಿಯೇ ನಡೆಯುವ 'ಸೋಹಂ' ಮಂತ್ರವು ಅಜಪಮಂತ್ರವು. ]

ಶರಧಿ ನಿರ್ಝರ ಭೇರಿ ಮೇಘದ ಬಹುರವ।
ಮುರಜ ಕಹಳೆ ಶಂಖ ಘಂಟಾದಿ ॥
ವರನಾದ ವಾಸ ಕಿಂಕಿಣಿ ವೀಣೆ ಭ್ರಮರಾದಿ।
ಸ್ವರವನಾಲಿಪುದೆ ಸ್ವಾಧ್ಯಾಯವು ॥ 10 ॥

ಸಮುದ್ರ, ಜಲಪಾತ, ನಗಾರಿ, ಮೇಘ ಇವುಗಳ ಅನೇಕ ವಿಧವಾದ ನಾದಗಳು ಮತ್ತು ಮದ್ದಳೆ, ಕಹಳೆ, ಶಂಖ, ಘಂಟೆಗಳ ಶ್ರೇಷ್ಠನಾದಗಳೂ ಮತ್ತು ಕೊಳಲು, ಕಿರುಗೆಜ್ಜೆ ಹಾಗೂ ಭ್ರಮರಾದಿಗಳ ಇಂಪಾದ ನಾದಗಳು, ಹೀಗೆ ಧ್ವನಿಯು ಹತ್ತು ತೆರನಾಗಿರುವದು. ಈ ನಾದಗಳನ್ನು ಕೇಳುವದು ಸ್ವಾಧ್ಯಾಯವೆನಿಸಿಕೊಳ್ಳುವದು.

ಅರಿವುದೆ ವೇದ ವರುಹಿಕೊಂಬುವದದು ವೇದ್ಯ।
ವರಿವಿಂದೆ ನೋಡಲೀ ಪರಿಯೊಳು ॥
ಕರೆ ಮರೆಯೇನಿಲ್ಲ ತಿಳಿ ನೀರೆ, ತನ್ನತಾ।
ನರಿಯೆ ಸ್ವಾಧ್ಯಾಯವೆಂದೆನಿಸುಗು ॥ 11 ॥

ಅರಿಯುವದೇ ವೇದವು, ಅರುಹಿಸಿಕೊಂಬುದು ವೇದ್ಯ ಅಥವಾ ವಿಷಯವು. ಇವು ವೇದ, ವೇದ್ಯ ವೇತ್ತಾ ಎಂದು ತ್ರಿಪುಟಿಗಳು. ತನ್ನ ನಿಜವು ತ್ರಿಪುಟಿಗಳಿಗೆ ವಿಲಕ್ಷಣ ವಾಗಿದೆ. ಹೀಗೆ ವಿಚಾರ ಮಾಡಿ ನೋಡಿದರೆ ಆತ್ಮನಲ್ಲಿ ಅಜ್ಞಾನ ಆವರಣಗಳೇನೂ ಇಲ್ಲ. ಈ ರೀತಿ ತನ್ನ ತಾನು ತಿಳಿದರೆ ಅದೇ ಸ್ವಾಧ್ಯಾಯವೆಂದು ಹೇಳಲ್ಪಡುವದು. (ಇಂತು ಐದು ಪ್ರಕಾರದ ಸ್ವಾಧ್ಯಾಯ ನಿರೂಪಿಸಿದರು).

ಗುರುಬೋಧೆಯಿಂದವಧ್ಯಾತ್ಮದ ರಹಸ್ಯ।
ದಿರವಿನ ವಿಧಿಮಾತ್ರವರಿವಲ್ಲಿ॥
ವರಯತ್ನಪರನೆನಿಸಿದೊಡದೆ ಹುತವೆಂದು।
ಪರಿಕಿಸು ಪೊಜಳೆ ಮಯ್ಯಳೆ ॥ 12 ॥

ಬಂಗಾರ ಬಣ್ಣದ ದೇಹವುಳ್ಳ ಮೈತ್ರೇಯಿ ಕೇಳು. ಗುರುಬೋಧೆಯಿಂದಲೇ ಪ್ರತ್ಯಗಾತ್ಮ ಪರಮಾತ್ಮನ ಇರವಿನ ರಹಸ್ಯದ ಸ್ವರೂಪ ಮಾತ್ರವನ್ನು ಅರಿಯಬೇಕಾಗಿದೆ. ಆ ದಿಶೆಯಲ್ಲಿ ಅತ್ಯಂತ ಪ್ರಯತ್ನಪರನಾಗಿರುವದೇ ಹುತವೆನಿಸುವದು. ಅದನ್ನು ನೀನು ಪರೀಕ್ಷಿಸಿ ತಿಳಿ.

ಯಮ ನಿಯಮಾನ್ವಿತ ಯೋಗೀಶ್ವರ।
ನಮಳ ಸುಜ್ಞಾನಾಗ್ನಿಯೊಳು ಮನ ॥
ರಮಿಸುವ ನಿಖಿಳ ದುರ್ವಿಷಯಾಳಿಗಳನು ನಿ।
ರ್ಮಮತೆಯೊಳ್ಬೀಳ್ವುದು ಹವಿಮಾಡಿ ॥ 13 ॥

ಮನಸ್ಸು ಅಲೆದಾಡಿ ಸುಖಿಸುವ ಸರ್ವ ಅನಿಷ್ಟವಾದ ವಿಷಯಗಳನ್ನು ಮಮಕಾರವಿಲ್ಲದೆ ಯಮ ದಶಗುಣಗಳನ್ನು ನಿಯಮದಶಗುಣಗಳನ್ನು ಅಳವಡಿಸಿಕೊಂಡ ಯೋಗೀಶ್ವರನು ನಿರ್ಮಲವಾದ ಜ್ಞಾನಾಗ್ನಿಯಲ್ಲಿ ಹಾಕಿ ಹವಿಸ್ಸಿನಂತೆ ಸುಟ್ಟುಬಿಡಬೇಕು.

– ಇತಿ ನಿಯಮಾಂಗ ಪಂಚಕ ನಿರೂಪಣೆ –

## 7ನೇ ಸೂತ್ರ

ಆಸನಸ್ಥಿರವಾಗಿ ಮನವಕ್ಷಿಯಸುಗೂಡಿ ।
ನಾಸಾಗ್ರದಲ್ಲಿ ನಿಂದೊಡೆಮುಕ್ತಿ ॥

ಸ್ಥಿರವಾದ ಆಸನ ಹಾಕಿ ಮನಸು ದೃಷ್ಟಿ ಹಾಗೂ ಪ್ರಾಣದೊಡಗೂಡಿ ನಾಸಾಗ್ರವೆಂದರೆ ಭ್ರೂಮಧ್ಯದ ಆಜ್ಞಾಚಕ್ರದಲ್ಲಿ ನಿಲ್ಲಿಸಿದರೆ ಮುಕ್ತಿ ಪ್ರಾಪ್ತವಾಗುವದು.

ಇವು ತಾವೆ ಯಮ ನಿಯಮಂಗಳಿಂತಿವರಿಂದೆ ।
ಭವಬಾಧೆಯಳಿವುದು ಬಳಿಕಿನ್ನು ॥
ಯುವತಿ ಕೇಳಾಸನಗತಿಯನೊರೆವೆನು ನಾ ।
ನವರಿಂದೆ ತನುರುಜೆ ಪರಿವುದು ॥ 1 ॥

ಇಲ್ಲಿಯವರೆಗೆ ಹೇಳಿದುದು ಯಮ ಮತ್ತು ನಿಯಮಾಂಗಗಳು. ಇವುಗಳನ್ನು ಸಾಧಿಸುವದರಿಂದ ಸಂಸಾರ ದುಃಖವು ಇಲ್ಲದಾಗುವದು. ಪ್ರಿಯ ಸತಿಯಳೆ, ಇನ್ನುಮುಂದೆ ಆಸನದ ವಿಧಿಯ ನಾನು ವಿವರಿಸುವೆನು. ಅದನ್ನು ಲಕ್ಷ್ಯಗೊಟ್ಟು ಕೇಳು. ಆಸನಗಳನ್ನು ಅಳವಡಿಸಿಕೊಳ್ಳುವದರಿಂದ ಶರೀರದ ರೋಗಗಳು ಪರಿಹಾರವಾಗಿ ಆರೋಗ್ಯ ಪ್ರಾಪ್ತವಾಗುವದು.

ಎಡದ ಹಿಮ್ಮಡದಿ ನಾಧಾರದೆಡೆಯನೊತ್ತಿ ।
ತ್ತೊಡನೆ ದಕ್ಷಿಣದ ಹಿಮ್ಮಡವನು ॥
ಮಡಗಿ ಮೇಹನದ ಮೇಲ್ಗಡೆಯೊಳು ರುಜುವೆನಿ ।
ಪೊಡಲಿಂದಮಿರೆ ಸಿದ್ಧಾಸನವದು ॥ 2 ॥

ಎಡಗಾಲಿನ ಹಿಮ್ಮಡದಿಂದ ಮೂಲಾಧಾರದ ಸ್ಥಾನವನ್ನು ಒತ್ತಿ ಬಲಗಾಲ ಹಿಮ್ಮಡವನ್ನು ಶಿಶ್ನದ ಮೇಲ್ಗಡೆಯಲ್ಲಿ ಇಡಬೇಕು. ನಂತರ ಚಲಿಸದಂತೆ ಶರೀರವನ್ನಿರಿಸಿ ನೀಟಾಗಿ ಕುಳಿತುಕೊಂಡಿರಲು ಅದಕ್ಕೆ ಸಿದ್ಧಾಸನವೆನ್ನುವರು.

ತೊಡೆ ಕಿರುದೊಡೆಗಳ ನಡುವೆರಡಂಘ್ರಿಗ ।
ಳಡಗಿರ್ದು ಸಸಿನಮಾದೊಡಲಿಂದ ॥
ಬಿಡದೆ ಕುಳ್ಳಿರೆ ಸ್ವಸ್ತಿಕಾಸನವಹುದೆಂದು ।
ಮಡದಿ ನೀನಿದನು ನಿಶ್ಚಯಿಪುದು ॥ 3 ॥

ಎಡದೊಡೆ ಕಿರುದೊಡೆಗಳ ನಡುವೆ ಬಲದ ಪಾದವನ್ನು ಸೇರಿಸಿ, ಬಲದೊಡೆ ಕಿರುದೊಡೆಗಳ ಮಧ್ಯದಲ್ಲಿ ಎಡದ ಪಾದವನ್ನು ಸೇರಿಸಿ ಶರೀರವನ್ನು ಚಲಿಸದೆ ನೀಟವಾಗಿರಿಸಿ ಕುಳಿತುಕೊಳ್ಳುವದೆ ಸ್ವಸ್ತಿಕಾಸನವೆಂದು ಹೇ ಪ್ರಿಯಳೆ, ನೀನು ನಿಶ್ಚಯಿಸಬೇಕು.

ತೊಡೆಗಳೆರಡರ ಮೇಲಡರಿ ಮಡಂಗಳು।
ಬಿಡದೆ ಕೂಡಿರಲೆಡಬಲನಾಗಿ॥
ಕಡು ನೇರಿತ್ತಾದೊಡಲಿಂದೆ ಕುಳ್ಳಿರಲದೆ।
ಮಡದಿ ಪದ್ಮಾಸನವೆನಿಪುದು ॥ 4 ॥

ಎರಡು ಮಡಗಳು ಎರಡು ತೊಡೆಗಳ ಮೇಲೆ ಎಡಬಲನಾಗಿ ಕೂಡಿಬರುವಂತಿಡಬೇಕು. ಆಗ ಶರೀರವು ಹೊಯ್ದಾಡದಂತೆ ನೀಟವಾಗಿದ್ದು ಕುಳಿತುಕೊಳ್ಳುವದೇ ಪ್ರಿಯಳೆ, ಪದ್ಮಾಸನವೆಂದು ಹೇಳಿಸಿಕೊಳ್ಳುವದು.

ಎಡಪಾದದ ಮಡವಡಿಯಾಗಿ ನಿಲೆ ಬಲ।
ದಡಿಮಡವೆಡದ ತೊಡೆಯ ಮೇಲೆ॥
ಮಡಗಿರೆ ರುಜುಕಾಯದಿಂದೆ ಕುಳ್ಳಿರ್ದೊಡೆ।
ನುಡಿವರದನು ವೀರಾಸನವೆಂದು ॥ 5 ॥

ಎಡಪಾದದ ಹಿಂಭಾಗವು ಕೆಳಗಾಗಿ ಇರಿಸಿ, ಬಲಪಾದದ ಹಿಂಭಾಗ (ಹಿಮ್ಮಡ) ವನ್ನು ಎಡದ ತೊಡೆಯ ಮೇಲೆ ಇಟ್ಟು, ನೀಟಾದ ಶರೀರದಿಂದ ಕುಳಿತುಕೊಂಡರೆ ಅದಕ್ಕೆ ವೀರಾಸನವೆಂದು ಕರೆಯುವರು.

ತನಗಾವ ತೆರದಿಂದೆ ಜನಿಪುದು ಧೈರ್ಯವಂ।
ತನುವಾಗಿ ಕುಳ್ಳಿರ್ದು ಚಲಿಸದೆ॥
ಮನವಸುಗಳನು ನಿರೋಧಿಸಲದು ಸುಖಾ।
ಸನವೆಂದು ತಿಳಿವುದು ನಳಿನಾಕ್ಷಿ॥ 6 ॥

ತನಗೆ ಯಾವ ರೀತಿಯಿಂದ ಸ್ಥಿರತೆ ಮತ್ತು ಸುಖವು ಪ್ರಾಪ್ತವಾಗುವದೋ ಆ ರೀತಿಯಲ್ಲಿ ಕುಳಿತುಕೊಂಡು ಮನಸ್ಸು ಮತ್ತು ಪ್ರಾಣವನ್ನು ನಿರೋಧಿಸಬೇಕು. ಕಮಲಾಕ್ಷಿಯೆ, ಇದನ್ನು ಸುಖಾಸನವೆಂದು ತಿಳಿಯತಕ್ಕದ್ದು.

– ಇತಿ ಆಸನ ಸ್ಥಿತಿ ನಿರೂಪಣೆ –

## 8ನೇ ಸೂತ್ರ

ತನುವಮೂಲವೆನಿಸುತಿರ್ಪನಿಲನಿರೋಧನ ।
ವನಿತೆ ಕೇಳದರಿಂದೆ ಮತಿಶುದ್ಧಿ ॥

ಶರೀರಕ್ಕೆ ಮೂಲಾಧಾರವಾದ ವಾಯುವಿನ (ಉಸಿರಾಟ)ನಿರೋಧ ಎಂದರೆ ಪ್ರಾಣಾಯಾಮವನ್ನು ಮಾಡಿದರೆ ಬುದ್ಧಿ ಶುದ್ಧವಾಗುವದು. ಯಾಕೆಂದರೆ ಶರೀರದ ಗಮನಾಗಮನಗಳಿಗೆ ವಾಯುವೇ ಕಾರಣವಾಗಿದ್ದು ಅದರ ಚೇಷ್ಟೆಯಿಂದಲೇ ಶರೀರ ಇಂದ್ರಿಯ ಅಂತಃಕರಣಗಳು ವ್ಯವಹರಿಸುತ್ತವೆ.

ತನುಮೂಲವಸು ನಿರೋಧನ ಮುಖ್ಯಗುಣಯೋಗ ।
ವೆನಿಸುಗುಮದರಿಂದ ಮೊದಲೊಳು ।
ತನುವಿನೊಳದನರಿಯಲು ಬೇಹುದೆಲೆ ಪುಸಿ ।
ತನುಮಧ್ಯೆ ಕೇಳದನೊರೆವೆನು ॥ 1 ॥

ಶರೀರದ ಕ್ರಿಯೆಗಳಿಗೆ ಪ್ರಾಣವೇ ಮೂಲ ಕಾರಣವು. ಮುಖ್ಯವಾಗಿ ಅದನ್ನು ನಿರೋಧಿಸುವದೆ ಸಗುಣಯೋಗವೆನಿಸಿಕೊಳ್ಳುವದು. ಆದ್ದರಿಂದ ಮೊದಲು ಅದನ್ನು ಶರೀರದಲ್ಲಿ ಚನ್ನಾಗಿ ತಿಳಿದುಕೊಳ್ಳಬೇಕು. ತೆಳುವಾದ ನಡವುಳ್ಳ ಮೈತ್ರೇಯಿ ನಾನದನ್ನು ನಿನಗೆ ವಿವರಿಸಿ ಹೇಳುವೆನು ಲಕ್ಷ್ಯಗೊಟ್ಟು ಕೇಳು.

ತನುವಿದು ತನ್ನ ತೊಂಭತ್ತಾರು ಬೆರಳುದ್ದ ।
ವೆನಿಪುದು ಗುದಗುಹ್ಯ ಮಧ್ಯವೆ ॥
ತನುಮಧ್ಯವಹುದಲ್ಲಿ ಜಠರಾಗ್ನಿ ನೆಲೆಗೊಂಡು ।
ತನುದೀಪನಾದಿಕವನು ಮಾಳ್ಕು ॥ 2 ॥

ಈ ಶರೀರವು ತನ್ನ ತೊಂಭತ್ತಾರು ಬೆರಳುಗಳಷ್ಟು ಉದ್ದವಿರುವದು. ಗುದ ಮತ್ತು ಗುಹ್ಯಗಳ ಮಧ್ಯಸ್ಥಾನವೆ ಶರೀರದ ಮಧ್ಯವು. ಅಲ್ಲಿ ಜಠರಾಗ್ನಿಯು ನೆಲೆಯಾಗಿದ್ದು ಶರೀರವನ್ನು ಬಿಸಿಯಾಗಿಡುವದು. ಉದ್ದೀಪನಾದಿ ಕರ್ಮಗಳನ್ನು ಮಾಡುವದು.

ಅದರಿಂದೆ ಮೇಲೆ ನವಾಂಗುಲದೆಡೆಯೆನಿ ।
ಪುದು ನಾಭಿಯಲ್ಲಿ ನಾಡಿಯ ಕಂದ ॥
ಪುದಿದು ನಾಲ್ಕಂಗುಲದಾಯತದಿಂದಿರ್ಪು ।
ದದು ನಿಜಕುಂಡಲಿ ಯೊಡಗೂಡಿ ॥ 3 ॥

ತನುಮಧ್ಯದ ಮೇಲೆ ಒಂಭತ್ತಂಗುಲ ಸ್ಥಾನದಲ್ಲಿ ನಾಭಿ (ಹೊಕ್ಕಳು) ಇರುವದು. ಆ ಸ್ಥಳದಲ್ಲಿಯೇ ನಾಡಿಗಳ ಗಡ್ಡೆಯು (ಕಂದ) ನಾಲ್ಕಂಗುಲ ಪ್ರಮಾಣದಷ್ಟು ವಿಸ್ತಾರವಾಗಿರುವದು. ಅದು ಕುಂಡಲಿನಿ ಶಕ್ತಿಯೊಡನೆ ಕೂಡಿಕೊಂಡಿರುವದು.

ಎನಿತು ನಾಡಿಗಳೊಳವನಿತುಮಾ ಕಂದದಿಂ ।
ಜನಿಸಿಹವಸುಜಾಲದೊಡಗೂಡಿ ॥
ಮನವೆಡೆಯಾಡುವೆಡೆಗಳವರೊಳು ಮುಖ್ಯ ।
ವೆನಿಪವೆ ಮೂರು ನಾಡಿಗಳಲ್ಲಿ ॥ 4 ॥

ಶರೀರದಲ್ಲಿ ಎಷ್ಟು ನಾಡಿಗಳಿರುವವೋ ಅಷ್ಟೆಲ್ಲವೂ ಪ್ರಾಣವಾಯುವಿನೊಡಗೂಡಿ ಆ ನಾಡಿಯ (ಕಂದ) ಗಡ್ಡೆಯಿಂದಲೇ ಹುಟ್ಟಿರುವವು. ಅವುಗಳಲ್ಲಿ ಮೂರು ನಾಡಿಗಳು ಮುಖ್ಯವಾಗಿವೆ. ಅಲ್ಲಿ ಮನಸ್ಸು ಸಂಚರಿಸುತ್ತದೆ.

ಎಡಬಲವೆನಿಪ ನಾಸಾ ಪುಟಾಂತರವೈದಿ ।
ಬಿಡದಿರ್ಪವೀಡೆ ಪಿಂಗಳೆಗಳು ॥
ನಡುವೆ ಶಿಖಾಂತಮಾದುದೆ ಸುಷುಮ್ನಾ ನಾಡಿ ।
ಮಡದಿ ಕೇಳದು ಯೋಗದೊಳು ಮುಖ್ಯ ॥ 5 ॥

ನಿತ್ಯವಾಗಿ ಎಡ ನಾಸಾಪುಟದಲ್ಲಿ (ಮೂಗಿನ ಹೊರಳಿ) ಈಡಾನಾಡಿಯೂ ಬಲನಾಸಾಪುಟದಲ್ಲಿ ಪಿಂಗಳಾನಾಡಿಯೂ ಇರುವವು. ಇವೆರಡರ ಮಧ್ಯದಲ್ಲಿ ಶಿಖಾಚಕ್ರದವರೆಗೆ ಹೋಗಿರುವದೇ ಸುಷುಮ್ನಾ ನಾಡಿಯು. ಸತಿಯಳೆ ಕೇಳು ಯೋಗಾಭ್ಯಾಸದಲ್ಲಿ ಅದು ಮುಖ್ಯವಾಗಿರುವದು.

ಕಾಮಿನಿ ನೀನೊಲವಿಂದೆ ಭಾವಿಸು ಪೇಳ್ ।
ದೀ ಮೂರು ನಾಡಿಗಳೊಡಗೂಡಿ ॥
ನೇಮವಿಡಿದು ಮಾಳ್ಪುದಸುನಿರೋಧನವನೆಂ ।
ದಾ ಮುನಿವರರೊಲಿದೊರೆವರು ॥ 6 ॥

ಮೇಲೆ ಹೇಳಿದ ಈ ಮೂರು ನಾಡಿಗಳಿಂದ ಕೂಡಿಕೊಂಡು ನಿಯಮಿತವಾಗಿ ಪ್ರಾಣಾಯಾಮವನ್ನು ಆಚರಿಸಬೇಕೆಂದು ಮುನಿಶ್ರೇಷ್ಠರು ಮನದೊಲವಿನಿಂದ ಹೇಳುವರು. ಹೇ ಸ್ತ್ರೀಯಳೇ, ನೀನು ಇದನ್ನು ಪ್ರೀತಿಯಿಂದ ವಿಚಾರ ಮಾಡು.

ಕುಂಡಲಿಯುರಗನಾ ಕಂದವನುರೆ ಸುತ್ತಿ ।
ಕೊಂಡೇಳು ಬಳಸಿನಿಂದವೆ ತನ್ನ ॥
ತುಂಡವನಿಟ್ಟು ಸುಷುಮ್ನೆಗೆ ನಿಜವಾಲ ।
ದಂಡಮಿರಲು ಕೆಳಗೆಸೆವುದು ॥ 7 ॥

ಕುಂಡಲಿನಿ ಸರ್ಪವು ಆ ನಾಡಿ ಕಂದವನ್ನು ಏಳು ಸುತ್ತು ಹಾಕಿಕೊಂಡು ತನ್ನ ಮುಖವನ್ನು ಕೆಳಗೆ ಮಾಡಿರುವದು. ತನ್ನ ಬಾಲವನ್ನು ಸುಷುಮ್ನಾ ನಾಡಿಯಿರುವ ಬ್ರಹ್ಮರಂಧ್ರಕ್ಕೆ ಇಟ್ಟು ದಂಡದಂತೆ ನೇತಾಡುತ್ತಿರುವದು. ಅದರಿಂದ ಜೀವನಿಗೆ ವಿಷಯಾಸಕ್ತಿ ಉಂಟಾಗುವದು. ಪ್ರಾಣಾಯಾಮ ದ್ವಾರಾ ಜಠರಾಗ್ನಿಯನ್ನು ಹೆಚ್ಚಿಸಿ ಅದರ

ಮುಖವನ್ನು ಮೇಲಕ್ಕೆ ಎಬ್ಬಿಸಬೇಕು. ಹೀಗೆ ಯೋಗ ಸಾಧನಮಾಡಿ ಅಮೃತ ಪಾನ ಮಾಡಬೇಕೆಂಬ ಭಾವ.

ಅಕುಟಿಲೆ ಕೇಳೆಂಟು ಪ್ರಕೃತಿರೂಪಿಂದೆ ಮೋ।
ಹಕಮಾಗಿ ಮುಸುಕಿ ಕುಂಡಲಿಯದು ॥
ಸಕಲ ಜೀವರ ದೇಹಧಾರಣ ಸ್ಥಿತಿಗತಿ।
ನಿಕರವನ್ನೆದೆ ನಡೆಸುತಿರ್ಕು ॥ 8 ॥

ನಿಷ್ಕಪಟ ಸ್ವಭಾವದ ಮೈತ್ರೇಯಿ ಕೇಳು, ಆ ಕುಂಡಲಿನಿ ಶಕ್ತಿಯು ಎಂಟು ಪ್ರಕಾರದ ಪ್ರಕೃತಿಯಿಂದೊಡಗೂಡಿ ಮುಸುಕಿ ಸಕಲ ಜೀವರುಗಳಿಗೆ ವಿಷಯಾಸಕ್ತಿಯಿಂದ ಮೋಹವನ್ನು ಉಂಟು ಮಾಡುತ್ತದೆ. ಅದರಿಂದ ಸ್ವರೂಪ ಜ್ಞಾನವಾಗದಂತೆ ಆವರಣ ಮಾಡಿ ಜನನ ಮರಣಾದಿ ಸಂಸಾರ ದುಃಖಕ್ಕೆ ಕಾರಣಭೂತವಾಗುತ್ತದೆ.

ಅ ಕ ಚ ಟ ತ ಪ ಯ ಶ ವರ್ಗ ನಾಮವುಳ್ಳ।
ಪ್ರಕೃತಿಗಳೆಂಟವರಿಂದವೆ ॥
ಸಕಲಾರ್ಥಸಾಧಕಮಾಗಿ ಕುಂಡಲಿಯೆ ಮೋ।
ಹಕಪ್ಪುದಖಿಳ ಜೀವರುಗಳ್ಗೆ ॥ 9 ॥

ಅ ಕ ಚ ಟ ತ ಪ ಯ ಶ ಎಂಬ ಈ ಎಂಟು ಅಕ್ಷರಗಳು ಪ್ರಕೃತಿಗಳೆಂದೆನಿಸುವವು ಅಂದರೆ ಈ ಎಂಟು ವರ್ಗಗಳಲ್ಲಿ ಯಾವತ್ತು ಸ್ವರ ವ್ಯಂಜನಗಳು ಅಂತರ್ಭೂತವಾಗಿರುತ್ತವೆ ಎಂದು ತಿಳಿಯತಕ್ಕದ್ದು. ಅವು ಭಾಷಾರೂಪದಿಂದ ಸಕಲ ವಿಷಯಗ್ರಹಣಕ್ಕೆ ಕಾರಣೀಭೂತವಾಗಿ ಕುಂಡಲಿನಿ ಶಕ್ತಿಯು ಅಲ್ಲಿ ಸಹಾಯಕವಾಗಿರುತ್ತದೆ. ಈ ಪ್ರಕಾರ ಅದು ಸಮಸ್ತ ಜೀವರುಗಳಿಗೆ ಮೋಹವನ್ನು ಉಂಟು ಮಾಡುತ್ತದೆ.

ಉದರಾಗ್ನಿಯಸುನಿರೋಧನದಿಂದೆ ಪೆರ್ಚಿ ತಾ।
ಪದೊಳೆದ್ದು ಕುಂಡಲಿಯದು ತನ್ನ॥
ವದನವನಾ ನಾಡಿಯಿಂದಾಗ ತೆಗೆಯುವದು।
ಸುದತಿ ಮತ್ತದನೆಂದು ಮುಸುಕದು ॥ 10 ॥

ಉದರಾಗ್ನಿಯು. ಪ್ರಾಣಾಯಾಮದಿಂದ ವರ್ಧನವಾಗಿ ಆ ತಾಪದಿಂದ ಕುಂಡಲಿನಿ ಶಕ್ತಿಯು ಎಚ್ಚರವಾಗಿ ತನ್ನ ಮುಖವನ್ನು ಆಗ ಆ ನಾಡಿಯಿಂದ ತೆಗೆದುಬಿಡುವದು. ಸುಂದರದಂತ ಪಂಕ್ತಿಯುಳ್ಳ ಮೈತ್ರೇಯಿ, ಅದು ಪುನಃ ಆ ನಾಡಿಯನ್ನು ಎಂದೂ ಮುಚ್ಚುವದಿಲ್ಲ.

ಅದರಿಂದ ಸಕಲ ನಾಡಿಯ ಶುದ್ಧಿ ಬೇಹುದು।
ಮೊದಲೊಳಗಸು ನಿರೋಧನವನು ॥
ಪದುಳದಿಂದೆಸಗುವ ತನಗಿನ್ನು ಪ್ರಾಣಾಯಾ।
ಮಗತಿ ಪೇಳ್ವೆನಾಲಿಸು ನೀರೆ ॥ 11 ॥

ಪ್ರಾಣವಾಯುವನ್ನು ತಡೆಯುವದರಿಂದ ಜಠರಾಗ್ನಿಯು ವೃದ್ಧಿಯಾಗಿ ವಾತಾದಿ ತ್ರಿದೋಷಗಳನ್ನು ಸುಡುವದು. ಅದರಿಂದ ಸಕಲ ನಾಡಿಗಳು ಶುದ್ಧವಾಗುವವು. ಆದ್ದರಿಂದ ಮೊದಲು ಪ್ರಾಣಾಯಾಮದ ಅಭ್ಯಾಸವು ಅವಶ್ಯವಾಗಿರುವದು. ಆದ್ದರಿಂದ ಅದನ್ನು ಈಗ ವಿವರಿಸುತ್ತೇನೆಂದು ಹೇಳುತ್ತಾರೆ.

– ಇತಿ ನಾಡೀ ಶುದ್ಧಿ ಸೂಚನಾ ನಿರೂಪಣೆ –

## 9ನೇ ಸೂತ್ರ

ರೇಚಕಾದಿತ್ರಯದಿಂದೆ ಮಾಳ್ಪುದು ಸಿದ್ಧಿ ।
ಸೂಚಕವಮಾದಸುನಿಯಮವ ॥

ಅಣಿಮಾದಿ ಅಷ್ಟಸಿದ್ಧಿಗಳನ್ನು ಸೂಚಿಸುವಂತಹ ಪ್ರಾಣಾಯಾಮವನ್ನು ಯೋಗಿಗಳು ಮಾಡುವರು. ಅದು ಪೂರಕ ಕುಂಭಕ ರೇಚಕಗಳಿಂದ ಕೂಡಿರುವದು.

ಪದುಳಿಗನಾಗಿ ಚಿತ್ತದೊಳೊಂದು ವಕ್ರವಿ।
ಲ್ಲದೆ ಸುಖಾಸೀನನೆನಿಸಿ ಗುರು ॥
ಪದಕಂಜವನು ನೆನೆದಸು ನಿರೋಧನವನು।
ಸುದತಿ ಕೇಳಾರೈದು ಮಾಳ್ಪುದು ॥ 1 ॥

ಸ್ವಸ್ಥಚಿತ್ತನಾಗಿ ಮನಸಿನೊಳಗೆ ಒಂದೂ ವಿಕಲ್ಪವಿಲ್ಲದೆ ಸುಖಾಸನದಲ್ಲಿ ಕುಳಿತುಕೊಳ್ಳಬೇಕು. ಗುರುಪಾದ ಕಮಲಗಳನ್ನು ಭಕ್ತಿಭಾವದಿಂದ ಸ್ಮರಿಸುತ್ತ ಸುದತಿಯಾದ ಮೈತ್ರೇಯಿ ಕೇಳು, ಪ್ರಾಣಾಯಾಮವನ್ನು ವಿಚಾರಪೂರ್ವಕವಾಗಿ ಮಾಡತಕ್ಕದ್ದಾಗಿರುವದು.

ಮೊದಲಲ್ಲಿ ಪೂರಕವದರಿಂದೆ ಕುಂಭಕ।
ವದರಿಂದೆ ರೇಚಕವನು ಸಮ।
ಪದವೆನೆ ಮಾತ್ರೆ ಪನ್ನೆರಡರಿಂದವೆ ಮುಕ್ತಿ।
ವಿದನಾಗಿ ಮಾಳ್ಪುದೀ ಕ್ರಮದಿಂದ ॥ 2 ॥

ವಾಯುವನ್ನು ಮೊದಲು ನಾಶಿಕದ ಒಂದು (ಎಡ)ದ್ವಾರದಿಂದ ಒಳಗೆ ಎಳೆದುಕೊಳ್ಳುವದು ಪೂರಕವೆನಿಸುವದು. ಬಳಿಕ ಆ ವಾಯುವನ್ನು ಭ್ರೂಮಧ್ಯಾದಿ ಸ್ಥಾನಗಳಲ್ಲಿ ತಡೆಯುವದಕ್ಕೆ ಕುಂಭಕವೆನ್ನುತ್ತಾರೆ. ತಡೆದಿರುವ ವಾಯುವನ್ನು ಹೊರಗೆ ಬಿಡುವದಕ್ಕೆ ರೇಚಕವೆನ್ನುವರು. ಹೀಗೆ ರೇಚಕಾದಿಗಳನ್ನು ಮಾಡಬೇಕಾದರೆ ಹನ್ನೆರಡು ಲಘು ಅಕ್ಷರಗಳನ್ನು ಉಚ್ಚರಿಸುವ ಕಾಲದ ಪರಿಯಂತ ಪೂರೈಸಿ ಕುಂಭಿಸಿ ರೇಚಿಸತಕ್ಕದ್ದು. ಈ ಪ್ರಕಾರ ಪ್ರಾಣಾಯಾಮ ಮುಕ್ತಮನದಿಂದ ಮಾಡಬೇಕು.

ನಡೆಯುಡಗಿಪುದೆ ಪೂರಕವಹುದಲಸದೆ।
ಪಿಡಿವುದೆ ಕುಂಭಕವೆನಿಪುದು ॥
ಬಿಡುವುದೆ ರೇಚಕವೆನಿಪುದು ನಾಸಾಗ್ರ।
ದೆಡೆಯೊಳು ಚರಿಸುವ ಮರುತನ ॥ 3 ॥

ನಾಶಿಕದ ತುದಿಯಲ್ಲಿ ಸಂಚರಿಸುವ ವಾಯುವನ್ನು ಅದು ನಿಲ್ಲುವವರೆಗೆ ಒಳಗೆಳೆದುಕೊಳ್ಳುವದು. ಪೂರಕವೆನಿಸುವದು. ಆಲಸ್ಯವಿಲ್ಲದೆ ಅದನ್ನು ಒಳಗೆ ತಡೆದು ಹಿಡಿಯುವದೇ ಕುಂಭಕವು. ಹಿಡಿದ ವಾಯುವನ್ನು ಹೊರಗೆ ಬಿಡುವದೇ ರೇಚಕವೆನಿಸಿಕೊಳ್ಳುವದು.

ವನಿತೆ ಕೇಳೀರಾರು ಲಘುವೆನಿಪಕ್ಕರ।
ವನು ನಾಲಿಗೆ ಯೊಳುಚ್ಚರಿಪ ವೇಳೆ ॥
ಎನಿಪುದು ಮಾತ್ರೆ ತದ್ಗಣನೆಯಿಂದೆವೆಯಾಡ।
ಲನಿತು ವೇಳೆಯು ಮಾತ್ರೆಯೆನಿಪುದು ॥ 4 ॥

ಛಂದಶ್ಶಾಸ್ತ್ರದ ಪ್ರಕಾರ ಅನುಸ್ವರ ಬಿಂದು ದೀರ್ಘಗಳಿಲ್ಲದ ಬೆಸ ಅಕ್ಷರಗಳು ಲಘುವೆಂದೆನಿಸುವವು. ಅಂತಹ ಅಕ್ಷರಗಳ ಹನ್ನೆರಡರ ಗಣನೆಗೆ ಒಂದು ಮಾತ್ರೆಯೆನ್ನುವರು ಅಥವಾ ಹನ್ನೆರಡರ ಎವೆಯಾಟದ ಗಣನೆಗೆ ಒಂದು ಮಾತ್ರೆಯಾಗುವದು.

ಮುಂದೆ ಹನ್ನೆರಡು ಚವ್ವೀಸ ಛತ್ತೀಸಂಗ।
ಳೆಂದೆನಿಸುವ ಮಾತ್ರೆಯೊಡಗೂಡಿ ॥
ಮಂದ ಮಧ್ಯೋತ್ತಮವೆಂದು ಪ್ರಾಣಾಯಾಮ।
ದಂದಮಿರ್ಪುದು ಮೂರು ತೆರನಾಗಿ ॥ 5 ॥

ಮೇಲೆ ಹೇಳಿದಂತೆ ಪ್ರಾಣಾಯಾಮದ ಅಭ್ಯಾಸ ಮಾಡಬೇಕು. ಅದು ಹನ್ನೆರಡರ ಮಾತ್ರೆಯವರೆಗೆ ಪೂರಿಸಿ ಹನ್ನೆರಡು ಮಾತ್ರೆಯಷ್ಟು ಕುಂಭಿಸಿ, ಅಷ್ಟೇ ವೇಳೆಯಲ್ಲಿ ಬಿಟ್ಟರೆ ಅದು ಕನಿಷ್ಠ ಪ್ರಾಣಾಯಾಮವು. ಬಳಿಕ ಇಪ್ಪತ್ತುನಾಲ್ಕು ಮಾತ್ರೆಯ ಪರಿಯಂತೆ ಪೂರಿಸಿ ಮತ್ತಷ್ಟೇ ಕಾಲ ಕುಂಭಿಸಿ ರೇಚಿಸಿದರದು ಮಧ್ಯಮ ಪ್ರಾಣಾಯಾಮವೆನಿಸುವದು. ಇನ್ನು ಮೂವತ್ತಾರು ಮಾತ್ರೆಯ ಪರಿಯಂತ ಪೂರಿಸಿ ಅಷ್ಟಷ್ಟೇ ಕಾಲ ಕುಂಭಿಸಿ ರೇಚಿಸಿದರದು ಉತ್ತಮ ಪ್ರಾಣಾಯಾಮವು.

ನಿಲಿಪುದು ನಾಭಿ ಹೃದಯ ಕಂಠವೆನಿಪೆಡೆ।
ಯೊಳಗಸುವ ದೃಢತರವನುವಾಗಿ ॥
ತಿಳಿಯಲುತ್ತಮ ಮಧ್ಯಮಾಧಮ ಕ್ರಮದೊಳ।
ಗಳವಟ್ಟ ಮಾತ್ರಾನು ವಿಧಿಯಿಂದ ॥ 6 ॥

ಮೂವತ್ತಾರು ಇಪ್ಪತ್ತುನಾಲ್ಕು ಹನ್ನೆರಡು ಮಾತ್ರೆಗಳು ವಿಚಾರ ಮಾಡಲು ಉತ್ತಮ ಮಧ್ಯಮ ಕನಿಷ್ಠವೆಂಬ ಮಾತ್ರಾನುಕ್ರಮದಿಂದ ನಾಭಿ, ಹೃದಯ, ಕಂಠಗಳೆಂಬ ಮೂರು ಸ್ಥಳಗಳಲ್ಲಿ ಪ್ರಾಣ ವಾಯುವನ್ನು ದೃಢವಾಗಿ ನಿಲ್ಲಿಸುವ ಅಭ್ಯಾಸ ಮಾಡಬೇಕು.

ತಿಳಿ ನಾಭಿಕಂದವೆ ಮನೆಯಾಗಿ ನಾಸಾಗ್ರ।
ದೊಳು ಸುಳಿವನಿಲನ ಗತಿಯದು ॥
ಒಳಪುಗುವದಪಾನವೆನಿಪುದು ಪೊರಮಡ।
ಲೆಲೆ ನೀರೆ ಪ್ರಾಣವೆನಿಸುತಿರ್ಕು ॥ 7 ॥

ನಾಭಿಕಂದಲ್ಲಿ ವಾಸವಾಗಿ ನಾಶಿಕದ ಅಗ್ರಭಾಗದಲ್ಲಿ ಸಂಚಾರ ಮಾಡುವ ವಾಯುವಿನ ಗತಿಯು ಶರೀರದೊಳ ಸೇರುವದೇ ಅಪಾನವಾಯು. ಹೊರಹೋಗುವದೇ ಪ್ರಾಣವೆನಿಸುವದೆಂದು ಮೈತ್ರೇಯಿ ನೀನು ತಿಳಿಯಬೇಕು.

ಎಡದಲ್ಲಿ ಪೂರಿಸಿ ನಿಂದೊಡೆ ಬಲದಲ್ಲಿ।
ಬಿಡುವದು ಬಲದಲ್ಲಿ ಪೂರಿಸಿ ॥
ಎಡದಲ್ಲಿ ರೇಚಿಸುವದು ಕುಂಭಕದೊಳುರೆ।
ತಡೆವುದು ದೃಢವಾಗಿ ಪವನವ ॥ 8 ॥

ನಾಶಿಕದ ಎಡದ್ವಾರದಿಂದ ವಾಯುವನ್ನು ಪೂರಿಸಿದರೆ ಬಲದ್ವಾರದಿಂದ ಬಿಡಬೇಕು. ಬಲದಿಂದ ಪೂರಿಸಿ ಎಡದಲ್ಲಿ ಬಿಡಬೇಕು ಮತ್ತು ಹೃದಯಾದಿ ಸ್ಥಾನಗಳಲ್ಲಿ ವಾಯುವನ್ನು ಕುಂಬಿಸಬೇಕು. ಅಂದರೆ ವಾಯುವಿನ ಗಮನಾಗಮನವಿಲ್ಲದೆ ನಿರೋಧಿಸಬೇಕು.

ನೆನೆವುದು ಪ್ರಣವಾಂಗವೆನಿಸು ವಕ್ಕರಮೂರ।
ನನಿಲನ ಪೂರಕಾದಿಗಳನು ॥
ಅನುಗೊಳಿಸುವ ಕಾಲದೊಳು ಪರಿವಿಡಿದಿಪ್ಪ।
ದನುನಯದಿಂದಂಬುಜಾನನೆ ॥ 9 ॥

ಪ್ರಾಣವಾಯುವನ್ನು ಮೊದಲು ಪೂರಕ ಮಾಡುವಾಗ್ಗೆ ಓಂಕಾರ ಪ್ರಣವದ ಮೂರಕ್ಷರಗಳಲ್ಲಿ ಅ ಕಾರ ಮಾತ್ರೆಯನ್ನೂ ಕುಂಭಕ ಮಾಡುವಾಗ್ಗೆ ಉ ಕಾರ ಮಾತ್ರೆಯನ್ನೂ ರೇಚಕ ಮಾಡುವಾಗ್ಗೆ ಮ ಕಾರ ಮಾತ್ರೆಯನ್ನೂ ಅನುಗೊಳಿಸುವ ಕಾಲದಲ್ಲಿಕ್ರಮವಾಗಿ, ಹೇ ಕಮಲಮುಖಿಯಾದ ಮೈತ್ರೇಯಿ ಪ್ರೀತಿಯಿಂದ ಸ್ಮರಿಸಬೇಕು.

ಪದಿನಾರು ದಿವಸವಿಂತೆಸಗಲ್ಕೆ ಸೌಖ್ಯ ಸಂ।
ಪದದಾಗು ಬಳಿಕೊಂದು ಮಾಸಕ್ಕೆ ॥
ಪುದಿದ ಪಾಪ ಕ್ಷಯವಹು ದಸುರೋಧನ।
ವದರಿಂದೆ ಯೋಗಿಗೆ ಕರಣೀಯ ॥ 10 ॥

ಹೀಗೆ ಪ್ರಾಣಾಯಾಮವನ್ನು ಹದಿನಾರು ದಿನಗಳವರೆಗೆ ಎಸಗಲು ಸುಖವು ಮತ್ತು ಐಶ್ವರ್ಯವು ಪ್ರಾಪ್ತವಾಗುವವು ಮತ್ತು ಒಂದು ತಿಂಗಳವರೆಗೆ ಆಚರಿಸಲು, ಸಂಭವಿಸಿದ ಪಾಪವೆಲ್ಲವು ಕ್ಷಯವಾಗುವದು. ಆದ್ದರಿಂದ ಯೋಗಿಯು ಪ್ರಾಣಾಯಾಮವನ್ನು ಅವಶ್ಯವಾಗಿ ಮಾಡಬೇಕು.

ಯಮವಾದಿಯಾದ ನಾಲ್ಕಿವು ಬಾಹ್ಯವೆನಿಪವೀ।
ಕ್ರಮದಿಂದವನು ಮಾಡೆ ಮತಿಶುದ್ಧಿ॥
ಸಮನಿಪುದದರಿಂದೆ ನಿಜಬೋಧೆ ದೃಢವಹು।
ದಮಳೇಂದುವದನೆ ನಂಬಿದು ಸತ್ಯ ॥ 11 ॥

ಯಮ ನಿಯಮ ಆಸನ ಪ್ರಾಣಾಯಾಮ ಈ ನಾಲ್ಕು ಯೋಗಾಂಗಗಳು ಬಾಹ್ಯವೆನಿಸುವವು. ಈ ಅನುವಿನಿಂದ ಅವುಗಳ ಅನುಷ್ಠಾನ ಮಾಡಲು ಬುದ್ಧಿ ಶುದ್ಧವಾಗುವದು. ನಿರ್ಮಲವಾದ ಚಂದ್ರಸದೃಶ ಮುಖವುಳ್ಳ ಮೈತ್ರೇಯಿ ಆದರಿಂದ ಸ್ವಸ್ವರೂಪದ ಜ್ಞಾನವು ದೃಢವಾಗುವದು. ಇದು ಸತ್ಯವೆಂದು ನೀನು ನಂಬು.

– ಇತಿ ಪ್ರಾಣಾಯಾಮ ಲಕ್ಷಣೆ ನಿರೂಪಣೆ –

## 10ನೇ ಸೂತ್ರ

ಹೊರಗಣವಿಷಯದೊಳೆರಗಿದಮನವನು ।
ನೆರೆತೆಗೆಯದನಿಗಹುದೆ ಮುಕ್ತಿ ॥

ಹೊರಗಿನ ಅನಾತ್ಮ ವಿಷಯಗಳಲ್ಲಿ ಸಮರಸಗೊಂಡ ಮನಸ್ಸನ್ನು ಹಿಂತೆಗೆದು ಅಂತರ್ಮುಖಗೊಳಿಸದವನ ಮನಸ್ಸು ಮಲಿನವಾಗಿರುವದರಿಂದ ಅವನಿಗೆ ಜ್ಞಾನವಾಗುವದಿಲ್ಲ, ಜ್ಞಾನವಿಲ್ಲದ್ದರಿಂದ ಅವನಿಗೆ ಮುಕ್ತಿಯಿಲ್ಲ.

ಅಂತರಂಗದ ನಾಲ್ಕು ಸಾಧನಂಗಳನೊಲ।
ವಿಂ ತಿಳುಪುವೆನು ನಾನದರಿಂದೆ॥
ಕಾಂತೆ ಚೈತನ್ಯ ವಿಶುದ್ಧತೆಯಹುದೆಂದು।
ಸಂತಸದಿಂದೆ ನೀನರಿವುದು ॥ 1 ॥

ಪ್ರಿಯ ಸತಿಯಳೆ, ನಾನು ಈಗ ಅಂತರಂಗದ ನಾಲ್ಕು ಸಾಧನಗಳನ್ನು ಪ್ರೇಮಪೂರ್ವಕವಾಗಿ ವಿವರಿಸುವೆನು. ಅದರಿಂದ ಬುದ್ಧಿ ಶುದ್ಧವಾಗುವದೆಂದು ನೀನು ಸಂತೋಷದಿಂದ ತಿಳಿದುಕೊಳ್ಳಬೇಕು.

ತನಗತಿ ಪ್ರಿಯವಾದ ವಿಷಯವೊಂದಿರೆ ಯೋಗ।
ವನು ಮಾಡಲೀಯದ ಕತದಿಂದ॥
ವನಿತೆ ಕೇಳಾ ದೇಶವನು ಪಿಂಗಿ ತೊಲಗಲ್ಕೆ।
ತನು ಪ್ರತ್ಯಾಹಾರ ವದೆನಿಪದು ॥ 2 ॥

ತನಗೆ ಅತ್ಯಂತ ಪ್ರೀತಿಕರವಾದ ಒಂದು ವಿಷಯವು ತನ್ನ ಸಮೀಪದಲ್ಲಿದ್ದರೆ, ಅದು ಯೋಗವನ್ನು ಅನುಷ್ಠಾನ ಮಾಡುವಲ್ಲಿ ಪ್ರತಿಬಂಧಕವಾಗುವದರಿಂದ, ಹೇ ಸ್ತ್ರೀಯಳೆ ಕೇಳು, ಆ ದೇಶವನ್ನೇ ಬಿಟ್ಟು ದೂರ ಹೋಗಬೇಕು. ಇದೇ ತನು ಪ್ರತ್ಯಾಹಾರವೆನಿಸುವದು.

ನಿರ್ಮಳ ಯೋಗ ಸತ್ಕರ್ಮದೊಳ್ನಿಲೆ ಬಾಹ್ಯ।
ಕರ್ಮವೆಲ್ಲವ ನುಳಿದಿರಲದು॥
ಕರ್ಮೇಂದ್ರಿಯಕೆ ಪ್ರತ್ಯಾಹಾರವದೆನಿಪುದು।
ಧರ್ಮಸಂಪೂರ್ಣಮಾನಸೆ ನೀನು ॥ 3 ॥

(ಟಿಪ್ಪಣಿ:-ಪ್ರತ್ಯಾಹಾರ=ದೂರವಾಗುವದು, ಹಿಂತೆಗೆಯುವದು)

ಧರ್ಮದಲ್ಲಿ ಪೂರ್ಣರತಿಯುಳ್ಳ ಮೈತ್ರೇಯಿ, ನಿರ್ಮಳವಾದ ಯೋಗವು ಸತ್ಕರ್ಮದಲ್ಲಿ ನಿಲ್ಲಲು ಬಾಹ್ಯಕರ್ಮವೆಲ್ಲವನ್ನು ತ್ಯಜಿಸಬೇಕು. ಇದಕ್ಕೆ ಕರ್ಮೇಂದ್ರಿಯಗಳ ಪ್ರತ್ಯಾಹಾರವೆನ್ನುವರು (ಟಿಪ್ಪಣಿ :- ಆತ್ಮಸುವಿಚಾರ ಕ್ರಿಯೆಯು ಸತ್ಕರ್ಮವೆನಿಸುವದು.)

ಓತು ನಿಜಾತ್ಮಾನುಭೂತಿಯೊಳಿರೆ ಬಾಹ್ಯ।
ಜಾತ ಶಬ್ದಾದಿ ವಿಷಯದಿಂದ॥
ನೀತಿವಿಡಿದು ತೆಗೆಯಲು ಚೇತನೇಂದ್ರಿಯ।
ವ್ರಾತಕ್ಕೆ ಪ್ರತ್ಯಾಹರಣವದು ॥ 4 ॥

ಆನಂದದಿಂದ ನಿಜಾತ್ಮದ ಅನುಭವದಲ್ಲಿ ತಾನಿರಲು ಹೊರಗೆ ಉಂಟಾದ ಶಬ್ದಾದಿ ವಿಷಯಗಳಿಂದ ನೀತಿಯನ್ನು ಬಿಡದೆ ಜ್ಞಾನೇಂದ್ರಿಯಗಳನ್ನು ತಡೆದರೆ ಅದಕ್ಕೆ ಜ್ಞಾನೇಂದ್ರಿಯ ಪ್ರತ್ಯಾಹಾರವೆನ್ನುವರು.

ಎಲ್ಲೆಲ್ಲಿ ದುರ್ವಿಷಯಾಳಿಗಳುಂಟವ।
ರಲ್ಲಿ ಕೂಡದೆ ನಿಜೇಂದ್ರಿಯವೃತ್ತಿ॥
ಒಳ್ಳಿತರೊಳು ವರ್ತಿಸುತ್ತಿರಲವಕದೆ।
ಬಲ್ಲಳೆ ಪ್ರತ್ಯಾಹರಣವಕ್ಕು ॥ 5 ॥

ಎಲ್ಲೆಲ್ಲಿ ಅಸದ್ವಿಷಯ (ಅನಾತ್ಮ) ಗಳಿರುವವೋ ಅವುಗಳಲ್ಲಿ ಕೂಡದೆ ತನ್ನ ಜ್ಞಾನೇಂದ್ರಿಯ ವೃತ್ತಿಗಳು ಸದ್ವಸ್ತುವಿನಲ್ಲಿ ತಲ್ಲೀನವಾದರೆ ಅದೇ ಜ್ಞಾನೇಂದ್ರಿಯ ಪ್ರತ್ಯಾಹಾರವೆಂದು ಜಾಣಳಾದ ಮೈತ್ರೇಯಿ ನೀನು ತಿಳಿ.

ಅನುದಿನವಾತ್ಮ ಚಿಂತನೆಯಲ್ಲಿ ಸುಸ್ಥಿರ।
ವೆನಿಪಂತೆ ಚೇತನೇಂದ್ರಿಯದಿಂದ॥
ಮನವನು ತೆಗೆಯೆ ಪ್ರತ್ಯಾಹಾರವದಕೆಂದು।
ಮುನಿಮುಖ್ಯರೊಲವಿಂದ ನುಡಿವರು ॥ 6 ॥

ಮನವು ಯಾವಾಗಲೂ ಆತ್ಮಚಿಂತನದಲ್ಲಿ ದೃಢವಾಗಿರುವಂತೆ ಜ್ಞಾನೇಂದ್ರಿಯ ಗಳಿಂದ ಮನಸ್ಸನ್ನು ಹಿಂತೆಗೆದರೆ ಅದಕ್ಕೆ ಮನ ಪ್ರತ್ಯಾಹಾರವೆಂದು ಮುನಿಶ್ರೇಷ್ಠರು ಪ್ರೀತಿಯಿಂದ ಹೇಳುವರು.

ಮನವೇನು ಬಯಸಿದೊಡನಿತೊಂದರಿಂದವಾ।
ಮನಕೆ ಸಂತಸವನೊಡರಿಸದೆ॥
ಜನಿತ ಧೈರ್ಯದೊಳು ನಿಗ್ರಹಿಸಲಂತದು ತಾನೆ।
ಮನಕೆ ಪ್ರತ್ಯಾಹಾರವೆನಿಪುದು ॥ 7 ॥

ಮನಸ್ಸು ಏನೇನು ಬಯಸುವದೋ ಅದಕ್ಕೆ ಅವುಗಳನ್ನು ಪೂರೈಸದಿದ್ದರೆ ಮನಸ್ಸು ಸಂತೋಷಗೊಳ್ಳದೆ ಸೊರಗುವದು. ಇದರಿಂದ ಉಂಟಾದ ಧೈರ್ಯದಿಂದ ಅದನ್ನು ನಿಗ್ರಹಿಸಲು ಅದು ಮನಸಿನ ಪ್ರತ್ಯಾರವೆಂದೆನಿಸುವದು.

ಮನವದೆಲ್ಲಿದ್ದೊಡಾ ಮನದೊಡಗೂಡದೆ।
ಮನವಿಲಕ್ಷಣನು ತಾನಹನೆಂದು ॥
ಅನುದಿನವನುಚಿಂತನೆಯೊಳೊಡಗೂಡಿರೆ।
ಮನಕೆ ಪ್ರತ್ಯಾಹಾರವದು ತಾನೆ ॥ 8 ॥

ಮನಸ್ಸು ಎಲ್ಲಿದ್ದರೂ (ಯಾವ ವಿಷಯ ಬಯಸಿದರೂ) ಅದರ ಕೂಡ ಕೂಡದೆ, ನಾನು ಮನಕ್ಕೆ ವಿಲಕ್ಷಣನಿದ್ದೇನೆ, ಎಂದು ಯಾವಾಗಲೂ, ಅನುಸಂಧಾನದೊಳಗಿದ್ದರೆ ಅದು ಮನಸ್ಸಿಗೆ ಪ್ರತ್ಯಾಹಾರವೆಂದು ಹೇಳಿಸಿಕೊಳ್ಳುವದು.

ತನಗೆ ಬಾಹ್ಯದ ಕರ್ಮವಿನಿತೇನುಮಿಲ್ಲದೆ।
ಮನದಿಂದ ಕರ್ತವ್ಯವನು ಮಾಳ್ಪ॥
ಅನುವಿದು ತಾನೆ ಪ್ರತ್ಯಾಹಾರವೆನಿಪುದಾ।
ಮನಕಿದು ಸತ್ಯವಂಗನೆ ನಂಬು ॥ 9 ॥

ತನಗೆ ಬಾಹ್ಯದಲ್ಲಿ ಮಾಡತಕ್ಕ ಕರ್ಮವು ಸ್ವಲ್ಪವು ಇಲ್ಲದೆ, ಮನಸ್ಸಿನ ಸಂಕಲ್ಪ ಮಾತ್ರದಿಂದ ಕರ್ತವ್ಯವನ್ನು ಮಾಡುವತನವದು ತಾನೇ ಮನಸ್ಸಿಗೆ ಪ್ರತ್ಯಾಹಾರವೆನಿಸುವದು. ಹೇ ಸ್ತ್ರೀಯಳೇ, ಇದು ಸತ್ಯವೆಂದು ತಿಳಿದು ನಂಬು.

ಅರಿವಾತ್ಮನರಿವಿನೊಳುರೆ ನಿಲುವನ್ನೆಗ।
ಮರಿವಂತಃರಂಗಕರಣದಿಂದ॥
ಅರಿವನೊಯ್ಯಾರದೊಳ್ತೆಗೆಯೆ ಪ್ರತ್ಯಾಹಾರ।
ವರುವಿಗಹುದೆಂದು ತಿಳಿವುದು ॥ 10 ॥

ತನ್ನ ಅರಿವು ಪ್ರತ್ಯಗಾತ್ಮ ಸ್ವರೂಪದಲ್ಲಿ ಚನ್ನಾಗಿ ನಿಲ್ಲುವವರೆಗೂ, ಅಂತಃಕರಣದಿಂದ ಆ ಅರಿವನ್ನು ಒಂದನುವಿನಿಂದ ಬೇರ್ಪಡಿಸಬೇಕು. ಇದೇ ಅರುವಿಗೆ ಪ್ರತ್ಯಾಹಾರವೆಂದು ತಿಳಿಯತಕ್ಕದ್ದು.

ಮನದಿಂದ್ರಿಯದಿಂದಲೆನಿತನಿತನು ಕಾಣ್ಬ।
ನನಿತೆಲ್ಲವನು ತನ್ನ ನಿಜವೆಂದು ॥
ಆನುಚಿಂತನೆಯೊಳಿರ್ಪುದದು ಪ್ರತ್ಯಾಹಾರವೆಂ।
ದೆನಿಪುದರಿವಿಗೆ ನೋಡಿದು ಸಿದ್ಧ॥ 11 ॥

ಮನಸ್ಸಿಗೆ ಮತ್ತು ಇಂದ್ರಿಯಗಳಿಗೆ ಏನೇನು ಪ್ರತೀತವಾಗುವದೋ ಅಷ್ಟೆಲ್ಲವನ್ನು ತನ್ನ ಸ್ವಸ್ವರೂಪವೆಂದು ಸದಾಚಿಂತನ ಮಾಡುವದೆ ಅರುವಿನ ಪ್ರತ್ಯಾಹಾರವು.

– ಇತಿ ಪ್ರತ್ಯಾಹಾರ ಪ್ರಕಾರ ನಿರೂಪಣೆ –

## 11ನೇ ಸೂತ್ರ

ಮನವನು ನಿರ್ವಿಷಯದೊಳು ನಿಲಿಸದೆ ಸುಂ– ।
ಮನೆ ಮುಕ್ತಿ ತನಗೆಂತು ಘಟಿಪುದು ॥

ಮುಕ್ತಿಯನ್ನು ಪಡೆಯಬೇಕೆಂದು ಬಯಸುವವನು ಮನಸ್ಸನ್ನು ನಿರ್ವಿಷಯನಾದ ಆತ್ಮನಲ್ಲಿ ನಿಲ್ಲಿಸಬೇಕು. ಇಲ್ಲದಿದ್ದರೆ ತನಗೆ ಮುಕ್ತಿಯಾಗುವದು ಸಾಧ್ಯವಿಲ್ಲ.

ತನು ಕರ್ಮೇಂದ್ರಿಯ ಸಚೇತನ ಪಂಚೇಂದ್ರಿಯ ಬುದ್ಧಿ।
ಮನವಾದಿಯೆನಿಸುವೆಲ್ಲವು ತನ್ನ॥
ಅನುಮತವೆನಿಸಿ ಪದುಳಮಿರ್ದೊಡದುತಾನೆ।
ವನಜಾಸ್ಯೆ ಧಾರಣೆ ಯೆನಿಪುದು ॥ 1 ॥

ಶರೀರ, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಮನ ಬುಧ್ಯಾದಿ ಅಂತಃಕರಣ ಎಲ್ಲವು ತನ್ನ ವಶವರ್ತಿಯಾಗಿದ್ದು ತನ್ನ ಯೋಗಾಭ್ಯಾಸಕ್ಕೆ ವಿಘ್ನವುಂಟು ಮಾಡದೆ ಅನುಕೂಲವಾಗಿರಬೇಕು. ಕಮಲಮುಖಿಯೆ, ಅದು ತಾನೆ ಧಾರಣೆಯೆನಿಸುವದು.

[ ಟಿಪ್ಪಣಿ :– ಧಾರಣೆ=ಮನೋನಿಗ್ರಹ]

ಒದವಿದ ಚತುರಂಗುಲಾಯತ ವೃತ್ತರೂ।
ಪದ ಸುಷಿರದ ನಾಭಿಕಂದದ॥
ಪದದೊಡನಗಲದೆ ಮನವಿರೆ ದಾರಣೆ।
ಯದು ತಾನೆ ತಿಳಿ ಪುಣ್ಯಮಯಗಾತ್ರೆ ॥ 2 ॥

ಪುಣ್ಯಮಯ ಶರೀರದ ಮೈತ್ರೇಯಿ, ನಾಲ್ಕು ಬೆರಳಳತೆಯ ವೃತ್ತಾಕಾರದ ಪೊಳ್ಳಾಗಿ ಇರುವ ನಾಭಿಕಂದದ ಸ್ಥಾನದಲ್ಲಿ ಮನಸ್ಸು ಅಗಲದೆ ಕೂಡಿರುವದೇ ಧಾರಣೆಯೆಂದು ತಿಳಿ.

ಹೃದಯದಂಗುಷ್ಠ ಮಾತ್ರದ ದಹರಾಕಾಶ।
ಪದಮಧ್ಯದೆಡೆಯಲ್ಲಿ ಚಲಿಸದೆ॥
ಸದಮಳ ಮನವಿರಲದನೆ ಧಾರಣೆಯೆಂದು।
ಸುದತಿ ನೀನರಿದು ನಿಶ್ಚಯಿಪುದು ॥ 3 ॥

ಹೃದಯವು ಹೆಬ್ಬೆರಳಿನ ಪ್ರಮಾಣದಷ್ಟು ಮಾತ್ರವಿರುವದು. ಅದರಲ್ಲಿರುವ ಅತಿ ಸೂಕ್ಷ್ಮವಾದ ಆಕಾಶವು ದಹರಾಕಾಶವೆನಿಸುವದು. ಅದರ ಮಧ್ಯದಲ್ಲಿ ಮನಸ್ಸು ಚಲಿಸದೆ ಪರಿಶುದ್ಧವಾಗಿರಲದೆ ಧಾರಣೆಯೆನಿಸುವದು. ಸುಂದರ ದಂತವುಳ್ಳ ಮೈತ್ರೇಯಿ ಇದು ಹೀಗೆಂದರಿತು ನೀನು ನಿಶ್ಚಯಿಸು.

ಭ್ರೂಮಧ್ಯದೊಳು ರಂಜಿಸುವ ಪರಮಯೋಮ।
ನಾಮದ ಚೌಕಮಧ್ಯದೊಳೊಂದಿ॥
ಆ ಮನವಿರಲದೆ ಧಾರಣೆಯೆಂದು ಸು।
ಪ್ರೇಮದಿಂದರಿ ಪೂರ್ಣ ಶಶಿಮುಖಿ ॥ 4 ॥

ಎರಡು ಹುಬ್ಬುಗಳ ಮಧ್ಯಸ್ಥಾನದಲ್ಲಿ ಶೋಭಿಸುವ ದಿವ್ಯ ಆಕಾಶವೆಂಬ ಹೆಸರಿನ ಚೌಕಮಧ್ಯದಲ್ಲಿ (ಆಜ್ಞಾಚಕ್ರ) ಮನಸ್ಸನ್ನು ನಿಶ್ಚಲವಾಗಿರಸಲದು ಧಾರಣೆಯೆಂದು, ಪೂರ್ಣಚಂದ್ರದಂತೆ ಶೋಭಿಸುವ ಮುಖವುಳ್ಳ ಮೈತ್ರೇಯಿ ನೀನು ಪ್ರೇಮದಿಂದ ಅರಿ.

ದಳ ಸಾಸಿರಗಳಿಂದೆಸೆವ ತ್ರಿಕೋಣ ಮಾ।
ದಲಘುತರ ಬ್ರಹ್ಮರಂಧ್ರದ॥
ನೆಲೆಯೊಳಡಗಿ ಮನವಿರಲು ಧಾರಣೆಯೆಂದು।
ಲಲಿತಾಂಗಿ ನೀನವಧರಿಪುದು ॥ 5 ॥

ಸುಂದರಗಾತ್ರವುಳ್ಳ ಮೈತ್ರೇಯಿ, ಸಾವಿರ ದಳಗಳಿಂದ ಶೋಭಿಸುವ ತ್ರಿಕೋಣಾಕಾರದ ಅತಿ ಸೂಕ್ಷ್ಮವಾದ ಬ್ರಹ್ಮರಂಧ್ರದ ಸ್ಥಾನದಲ್ಲಿ ಮನವು ಅಡಗಿರಲು ಅದು ಧಾರಣೆಯು. ಇದನ್ನು ನೀನು ನಿಶ್ಚಯವಾಗಿ ನಿರ್ಧರಿಸು.

[ ಟಿಪ್ಪಣಿ :— ಮನಸ್ಸು ಚಲಿಸದೆ ನಿಲ್ಲುವಾಗ ಪರಿಶುದ್ಧವಿರುವದು ]

ಅದರಿಂದೆ ಮೇಲೆಣಿಸಿದೊಡೆ ಪನ್ನೆರಡಂಗು।
ಲದೊಳಿರ್ಪ ದ್ವಾದಶಾಂತವೆಂಬ॥
ಸದಮಳ ಸ್ಥಾನದೊಳಗಲದೊಂದಿರೆ ಮನ।
ವದು ತಾನೆ ಧಾರಣೆಯೆನಿಪುದು ॥ 6 ॥

ಆ ಬ್ರಹ್ಮರಂಧ್ರದಿಂದ ಮೇಲೆ (ಆಚೆಗೆ) ಹನ್ನೆರಡು ಬೆರಳುಗಳ ಆಳತೆಯಲ್ಲಿ ದ್ವಾದಶಾಂತವೆಂಬ ಪಶ್ಚಿಮ ಚಕ್ರದ ಸ್ಥಾನವಿರುವದು. ಆದರೊಳಗೆ ಮನಸ್ಸು ಆಗಲದೆ ಕೂಡಿಕೊಂಡಿರುವದೇ ಧಾರಣೆಯೆಂದು ಹೇಳಿಸಿಕೊಳ್ಳುವದು.

ಇವು ಪಂಚಗುಹೆಗಳೆನಿಸುವ ಸುಕ್ಷೇತ್ರವಿಂ।
ತಿವು ಮನೋವಿಲಯದೆಡೆಗಳಾಗಿ ॥
ಯುವತಿ ಕೇಳುತ್ತರೋತ್ತರ ಸುಗತಿಯುಳ್ಳ।
ವಿವನರಿವುದೆ ಧಾರಣೆಗೆ ಮುಖ್ಯ ॥ 7 ॥

ನಾಭಿ, ಹೃದಯ, ಭ್ರೂಮಧ್ಯ, ಬ್ರಹ್ಮರಂಧ್ರ, ಪಶ್ಚಿಮಚಕ್ರ ಈ ಸ್ಥಾನಗಳು ಪಂಚ ಗುಹೆಗಳೆನಿಸುವವು. ಇವು ಪುಣ್ಯಪ್ರದ ಕ್ಷೇತ್ರಗಳಾಗಿ ಮನಸ್ಸು ವಿಲೀನವಾಗುವ ಯೋಗ್ಯ ಸ್ಥಾನಗಳಾಗಿವೆ, ಮೈತ್ರೇಯಿ ಕೇಳು, ಅವು ಒಂದಕ್ಕಿಂತ ಒಂದು ಹೆಚ್ಚು ಸುಖದ ಸ್ಥಾನಗಳಾಗಿ ರುವವು. ಇವುಗಳನ್ನು ಚನ್ನಾಗಿ ತಿಳಿದುಕೊಳ್ಳುವದು ಧಾರಣೆಗೆ ಅತ್ಯಂತ ಅವಶ್ಯವಾಗಿರುವದು.

ಮನವೆ ಸಂಸೃತಿ ದುಃಖವನಿತಕ್ಕೆ ಮೂಲವಾ।
ಮನವಳಿದೊಡೆ ಮುಕ್ತಿ ಸುಖವದು ॥
ಜನಿಸುಗುಮದರಿಂದಲರಿ ಮುಮುಕ್ಷುಗಳಿಗೆ ।
ಮನದ ಧಾರಣೆ ಮುಖ್ಯವೆನಿಪುದು ॥ 8 ॥

ಸಂಸಾರದ ಸರ್ವ ದುಃಖಗಳಿಗೆ ಮನಸ್ಸೇ ಮೂಲ ಕಾರಣವಾಗಿರುವದು. ಆದ್ದರಿಂದ ಅಂಥ ಮನಸ್ಸು ನಾಶವಾದರೆ ಪರಮುಕ್ತಿ ಸುಖವು ಪ್ರಾಪ್ತವಾಗುವದು. ಈ ಕಾರಣದಿಂದ ಮೋಕ್ಷಾಪೇಕ್ಷಿಗಳಿಗೆ ಮನಸ್ಸಿನ ಧಾರಣೆಯ (ನಿಗ್ರಹ) ಅತಿ ಮುಖ್ಯವಾಗಿರುವದು.

ಯಮ ನಿಯಮಾದಿ ಸುಗುಣವೃಂದಯುತನಾದ।
ವಿಮಳಾತ್ಮನಿಗೆ ತನ್ನ ಮನವದು ॥
ಭ್ರಮಿಸದೆ ತನ್ನೊಳಂತರಮಾಗಿ ತಾನೆ ವಿ।
ಶ್ರಮಿಸಿ ನಿಂದೊಡೆ ಧಾರಣೆಯದಕ್ಕು ॥ 9 ॥

ಯಮ ನಿಯಮಾದಿ ಅಂಗಗಳಲ್ಲಿ ಹೇಳಿದ ಸಕಲ ಸದ್ಗುಣಗಳಿಂದ ಕೂಡಿದ ಶುದ್ಧಾತ್ಮನಿಗೆ ತನ್ನ ಮನಸ್ಸು ಬಾಹ್ಯ ವಿಷಯಗಳಲ್ಲಿ ಸಂಚರಿಸಿ ಭ್ರಮಿಷ್ಠವಾಗದೆ ಆತ್ಮನಲ್ಲಿ ಅಂತರ್ಮುಖವಾಗಿ ವಿಶ್ರಾಮ ಹೊಂದುವದೇ ಧಾರಣೆಯಾಗಿರುವದು.

– ಇತಿ ಧಾರಣಾಂಗ ನಿರೂಪಣೆ–

## 12ನೇ ಸೂತ್ರ

**ಮಾನಸಾದಿಯನರಿವರಿವೆ ತಾನೆಂದುರೆ ।**
**ಧ್ಯಾನಿಸೆ ಮುಕ್ತಿ ಸಂಭವಿಪುದು ॥**

ಮನ ಬುಧ್ಯಾದಿಗಳನ್ನು ಅರಿಯುವ ಶುದ್ಧ ಅರಿವೆ ತಾನೆಂದು ನಿಸ್ಸಂಶಯವಾಗಿ ತಿಳಿದು ಚಿಂತನ ಮಾಡುವದು ಧ್ಯಾನವೆನಿಸುವದು. ಈ ರೀತಿ ಧ್ಯಾನ ಮಾಡುವದರಿಂದ ತನಗೆ ಮುಕ್ತಿಯು ಪ್ರಾಪ್ತಿಯಾಗುವದು.

ಹೃದಯಾದಿ ದೇಶದೊಳಗೆ ನಿಂದ ಮನವದು ।
ಪದವಿಡದೇನೊಂದು ವಿಷಯಕ್ಕೆ ॥
ಸದಮಳಾತ್ಮನ ಚಿಂತನೆಯೊಳೊಡಗೂಡಿರ ।
ಲದು ತಾನೆ ಧ್ಯಾನವೆಂದೆನಿಪುದು ॥ 1 ॥

ಹೃದಯಾದಿ ಸುಕ್ಷೇತ್ರದೊಳಗೆ (ಸೂತ್ರ–11) ನೆಲೆಯಾಗಿ ನಿಂತ ಮನಸ್ಸು ಯಾವದೊಂದು ವಿಷಯಕ್ಕೆ ಹರಿಯದೆ ಸದ್ರೂಪವಾದ ಅಮಲಾತ್ಮನ ಅನುಚಿಂತಸದಲ್ಲಿ ತೊಡಗಿರಲು ಅದೇ ಧ್ಯಾನವೆಂದು ಕರೆಯಿಸಿಕೊಳ್ಳುವದು.

ಮನವಾವ ತೆರನಾಗೆ ತನಗೇನೆಂದರಿದು ತಂ ।
ನನೆ ತನ್ನೊಳೆಡೆವಿಡಲಿಲ್ಲದೆ ॥
ಅನುಚಿಂತನಗೈಯುತ್ತಿರಲದೆ ತಧ್ಯಾನ ।
ವೆನಿಪುದು ಶಾಸ್ತ್ರಾನುಮತದಿಂದ ॥ 2 ॥

ಮನಸ್ಸು ಬಾಹ್ಯ ವಿಷಯಗಳನ್ನು ಹೊಂದಿ ಅವುಗಳ ಚಿಂತನೆಯಲ್ಲಿದ್ದಾಗ್ಯೂ ತನಗೆ ಯಾವ ಬಾಧೆಯು ಇಲ್ಲವೆಂದು ತಿಳಿದು ತನ್ನನ್ನು ಎಂದರೆ ಪ್ರತ್ಯಗಾತ್ಮನನ್ನು ಸತತವಾಗಿ ಅನುಚಿಂತನ ಮಾಡಬೇಕು. ಇದುವೆ ಆತ್ಮನ ಧ್ಯಾನವೆನಿಸುವದು. ಇದು ಶಾಸ್ತ್ರ ಸಮ್ಮತವಿರುವದು.

ಮನ ತನ್ನ ವಶವರ್ತಿಯೆನಿಸೆ ತಾನದಕೆ ಬೇ ।
ರೆನಿಸಿ ಮತ್ತೊಂದರೊಳೊಂದದೆ ॥
ಘನಚಿದಾತ್ಮಾನುಭಾವದೊಳೊಡಗೂಡಿರೆ ।
ತನಗೆ ತಧ್ಯಾನವೆನಿಪುದು ॥ 3 ॥

ಮನಸ್ಸು ತನ್ನ ಅಂಕಿತದಲ್ಲಿರೆ ತಾನು ಅದಕ್ಕೆ ಭಿನ್ನವಾಗಿದ್ದೇನೆಂದು ತಿಳಿಯಬೇಕು. ತಾನು ಮತ್ತಾವುದರೊಡನೆ ಕೂಡಿಕೊಳ್ಳದೆ ಚಿದ್ಘನರೂಪ ಆತ್ಮನ ಅನುಸಂಧಾನದಲ್ಲಿ ಇರುವದೇ ತನಗೆ ತಧ್ಯಾನವೆನಿಸುವದು.

ಮನವನೊಯ್ಯಾರದಿಂದವೆ ನಿರೋಧಿಸಿದೊಡೆ।
ಮನವಳಿದಾನಂದ ಪದವದು ॥
ಜನಿಸಲಲ್ಲಿಯೆ ತನ್ನ ತಾನುರೆ ಮರೆದು ನಿಂ।
ದನುವೆ ತದ್ಧ್ಯಾನವೆಂದೆನಿಪುದು ॥ 4 ॥

ಮನಸ್ಸನ್ನು ಅನುನಯದಿಂದ ನಿರೋಧ ಮಾಡಲು ಮನವು ಅಳಿಯುವದು. ಆಗ ಅದ್ವಯಾನಂದ ಸ್ಥಿತಿಯು ಪ್ರಾಪ್ತವಾಗುವದು. ಆದರಲ್ಲಿ ನಾನೆಂಬುದನ್ನು ಮರೆದು ನಿಂತ ನಿಲವೇ ಧ್ಯಾನವೆಂದೆನಿಸುವದು.

ಅರುವಿನಹಂಭಾವವಳಿದು ಮಿಕ್ಕಿನ ತೋರ್ಕೆ।
ನೆರೆ ಮಿಥ್ಯೆಯೆಂದು ಕಾಣ್ಬರಿವದು ॥
ಕರಿಗೊಂಡು ಮರೆಯದಿರ್ಪುದನೆ ತದ್ಧ್ಯಾನವೆಂ।
ದರಿವುದು ನೀನಾತ್ಮಕೋವಿದೆ ॥ 5 ॥

ನಾನು ಸಚ್ಚಿದಾನಂದಾತ್ಮನೆ ಇದ್ದೇನೆಂಬ ಅರಿವಿನ ಅಹಂಭಾವವು ನಾಶವಾಗಬೇಕು. ಇದಂ ರೂಪದಿಂದ ತೋರುವ ನಾಮರೂಪಾತ್ಮಕ ಪ್ರಪಂಚವೆಲ್ಲ ಮಿಥ್ಯೆಯೆಂದರಿದ ಅರಿವು ಕರಿಗೊಂಡು ನಿಲ್ಲಬೇಕು. ಈ ಅರಿವನ್ನು ಮರೆಯದಿರುವದೆ ಧ್ಯಾನವೆಂದು, ಆತ್ಮನನ್ನು ಬಲ್ಲ ಮೈತ್ರೇಯಿ ನೀನು ತಿಳಿಯತಕ್ಕದ್ದು.

– ಇತಿ ಧ್ಯಾನಾಂಗ ನಿರೂಪಣೆ –

## 13ನೇ ಸೂತ್ರ

ಭೇದವಳಿದು ನಿಂದನಿಲವೆ ಸಮಾಧಿಯೆಂ ।
ದಾದರದಿಂದೆ ಭಾವಿಸು ನೀರೆ ॥

ಅನೇಕ ಪ್ರಕಾರವಾಗಿ ತೋರುವ ಭೇದವು ನಾಶವಾಗಿ ಅಭೇದ ಸ್ಥಿತಿಯು ಪ್ರಾಪ್ತವಾದರೆ ಅದು ಸಮಾಧಿಯೆಂದು ನಿರ್ಮಲವಾದ ವೃತ್ತಿಯುಳ್ಳ (ನೀರೆ) ಮೈತ್ರೇಯಿ ನೀನು ಒಲವಿನಿಂದ ಭಾವನೆ ಮಾಡುತ್ತಿರು.

ತನುವನೆ ಸುಸ್ಥಿರದೊಳು ತನ್ನ ಮಾನಸ।
ವನು ಭ್ರೂಮಧ್ಯದಲ್ಲಿ ನಿಲಿಸಲಲ್ಲಿ॥
ನೆನೆಯದೇನೊಂದನಾ ಮನವಾತ್ಮನೊಡನೈಕ್ಯ।
ವೆನಿಸೆ ಸಮಾಧಿಯಂತದು ತಾನೆ ॥ 1 ॥

ಶರೀರವನ್ನು ಸ್ಥಿರವಾದ ಆಸನದಲ್ಲಿರಿಸಿ ತನ್ನ ಮನಸ್ಸನ್ನು ಭ್ರುಕುಟಿ ಸ್ಥಾನದಲ್ಲಿ ನಿಲ್ಲಿಸಿ ಬೇರೆ ಏನೂ ಕಲ್ಪನೆ ಮಾಡದೆ ಮನಸ್ಸನ್ನು ಆತ್ಮನಲ್ಲಿ ಐಕ್ಯ ಮಾಡಿದರೆ ಅದೇ ಸಮಾಧಿ ಯೆನಿಸುವದು.

ಮನವಳಿವುದು ತನ್ನ ಮನದಂದವಳಿಯಲಾ।
ಮನವಳಿದುಳಿದ ನಿಜಾನಂದ।
ಘನವೆ ತಾನಾಗಿರಲದು ಸಮಾಹಿತೆಯೆಂದು।
ಮನದನ್ನೆ ಮೈತ್ರೇಯಿ ತಿಳಿ ನೀನು ॥ 2 ॥

ಆತ್ಮಚಿಂತನದಿಂದ ಮನಸ್ಸು ನಾಶವಾಗುವದು. ಅದು ಪೂರ್ಣನಾಶವಾದ ಮೇಲೆ ಉಳಿದದ್ದೇ ಸ್ವರೂಪಾನಂದದ ಪೂರ್ಣಪದವಾಗಿರುವದು. ಮನೋಹರವಾದ ಮೈತ್ರೇಯಿ, ಅದುವೇ ಸಮಾಧಿಯೆಂದು ನೀನು ತಿಳಿ.

ಮನವನೊಂದನುವಿಂದೆ ನಿಲಿಸಲಾಮನವಳಿ।
ದನುಪಮಾನಂದವಾನೆಂಬುದು ॥
ನೆನಹಿನೊಳುದಿಸದೆ ನೆರೆಮರೆದಿರ್ದಿರ।
ವನು ಸಮಾಹಿತೆಯೆಂದು ನುಡಿವರು ॥ 3 ॥

ಮನಸ್ಸನ್ನು ಒಂದುಪಾಯದಿಂದ ನಿಲ್ಲಿಸಿದರೆ, ಆ ಮನಸ್ಸು ನಾಶವಾಗಿ ಉಪಮಿಸಬಾರದ ಆನಂದವೆ ತಾನೆಂದು ಅನುಭವವಾಗುವದು. ಆ ನೆನಹು ಸಹ ಉಂಟಾಗದಂತೆ ಪೂರ್ಣ ಮರೆತಿರುವ ಸ್ಥಿತಿಯನ್ನು ಸಮಾಧಿಯೆಂದು ಕರೆಯುವರು.

ಹೊರಗಣ ಬರಿಬಳಿಕೆಯ ಸುಖದುಃಖವ।
ನುರೆ ಮರೆದಾನಂದ ಪದವಾದ ॥
ಬರಿಯರಿವಾಗಿ ತಾನಿರೆ ಸಮಾಹಿತೆಯೆಂದು।
ಪರಮೆಗುರುಳೆ ನೀರೆ ತಿಳಿ ನೀನು ॥ 4 ॥

ಭ್ರಮರದಂತೆ ಕಪ್ಪಾದ ಕೂದಲುಳ್ಳ ಮೈತ್ರೇಯಿ, ಹೊರಗಿನ ಬರಿ ವಿಷಯಗಳ ಬಳಿಕೆಯಿಂದಾದ ಸುಖದುಃಖಗಳ ಭಾನವಿಲ್ಲದೆ, ಆನಂದ ಸ್ವರೂಪವಾದ ಕೇವಲ ಅರಿವು ತಾನಾಗಿರುವದೇ ಸಮಾಧಿಯೆಂದು ನೀನು ತಿಳಿ.

ಜೀವ ಪರಮರೆಂಬ ಭಾವನೆ ತನ್ನ ಸ।
ದ್ಭಾವದಿಂದಳಿದುಳಿದಾನಂದ ॥
ತೀವಿ ತನ್ನೊಳು ತಾನೆ ನೆಲಸಿ ಚಲಿಸದ ನಿ।
ರ್ಭಾವನೆ ಮೌನವೆಂದೆನಿಪುದು ॥ 5 ॥

ಜೀವಾತ್ಮ ಮತ್ತು ಪರಮಾತ್ಮರೆರಡೆಂಬ ಭೇದ ಬುದ್ಧಿಯು, ತಾನು ಸತ್ಯಸ್ವರೂಪನಿದ್ದೇನೆಂಬ ಭಾವದಿಂದ ಅಳಿಯಲಾಗಿ, ಶೇಷವಾಗಿ ಉಳಿದ ಆನಂದವೇ ಪೂರ್ಣ ತುಂಬಿರುವದು. ಅದರಿಂದ ತನ್ನೊಳಗೆ ತಾನು ತಾನಾಗಿ ನಿಶ್ಚಲತೆಯಿಂದ ಭಾವರಹಿತನಾಗಿರುವದೆ ಸಮಾಧಿ ಅಥವಾ ಮೌನವೆನಿಸುವದು.

ಇವು ನಾಲ್ಕು ಸಾಧನವಂತರಮಿವರಿಂದೆ।
ತವೆಯರಿವದು ಶುದ್ಧವಹುದಾಗಿ ॥
ಇವರಿಂದೆ ಮುಕ್ತಿ ಸಂಭವಿಪುದು ಜೀವನಿ।
ಗಿವನಿಂತು ತಿಳಿ ಚಂಡಮತಿ ನೀನು ॥ 6 ॥

ಪ್ರತ್ಯಾಹಾರಾದಿ ಇವು ನಾಲ್ಕು ಅಂತರಂಗದ ಸಾಧನಗಳಾಗಿರುವವು. ಇವುಗಳಿಂದ ಅಂತಃಕರಣವು ಪರಿಶುದ್ಧವಾಗಿ ಜೀವನಿಗೆ ಪರಮುಕ್ತಿ ಸುಖವು ಪ್ರಾಪ್ತವಾಗುವದೆಂದು ಚತುರಮತಿಯಾದ ಮೈತ್ರೇಯಿ ನೀನು ತಿಳಿಯತಕ್ಕದ್ದು.

ವಿರತಿಯಿಲ್ಲದೆ ಶಂಭುಪದ ಭಕ್ತಿಘಟಿಸದೆ।
ಪರಮ ಜೀವೈಕ್ಯವನರಿಯದೆ ॥
ವರಸಮಾಹಿತೆ ಸಿದ್ಧಿವಡೆಯದೆ ಸುಮ್ಮನೆ।
ದೊರೆವುದೆ ನಿಜಮೋಕ್ಷವದು ಸತ್ಯ ॥ 7 ॥

ಇಹಪರ ಭೋಗಗಳಲ್ಲಿ ಅನಿತ್ಯ ಅಶುಚಿ ದುಃಖರೂಪವೆಂಬ ದೋಷದರ್ಶನ ಲಕ್ಷಣಾತ್ಮಕ ವೈರಾಗ್ಯ ಘಟಿಸದೆ, ಶಂಭುಲಿಂಗನ ಪಾದಕಮಲಗಳಲ್ಲಿ ಉತ್ಕಟಭಕ್ತಿ ಇಲ್ಲದೆ, ಪರಮಾತ್ಮ ಜೀವಾತ್ಮರಲ್ಲಿ ಏಕತ್ವವನ್ನು ತಿಳಿಯದೆ, ಪವಿತ್ರತಮ ಸಮಾಧಿ ಸಿದ್ಧಿಸದೆ ಪರಮುಕ್ತಿಯು ಸುಮ್ಮನೆ ತನಗೆ ಲಭಿಸಲಾರದು. ಇದು ಶತಸತ್ಯವಾದದ್ದು.

– ಇತಿ ಸಮಾಧಿ ಸ್ಥಿತಿ ನಿರೂಪಣೆ–

## 14ನೇ ಸೂತ್ರ

ಭೇದವಭೇದವೆಂಬೆರಡವರಲ್ಲಿಯ–।
ಭೇದಭಾವನೆಯೊಳೊಂದಿರೆ ಮುಕ್ತಿ ॥

ತಾನು ಮತ್ತು ಇದಿರು ಎಂಬುದು ಭೇದಬುದ್ಧಿಯು. ತನಗನ್ಯವಾಗಿ ಏನೂ ಇಲ್ಲವೆಂಬುದು ಅಬೇಧ ಬುದ್ಧಿಯು. ಭೇದ ಬುದ್ಧಿಯನ್ನು ತ್ಯಜಿಸಿ ಸುಖಸ್ವರೂಪವಾದ ಅಭೇದ ಭಾವನೆಯನ್ನು ಪಡೆದಿರಲದೇ ಮುಕ್ತಿಯೆನಿಸುವದು.

ಶಶಿಮುಖಿ ಕೇಳು ಸರ್ವಾತ್ಮಕವೆಂದು ಮೇ।
ಣಸೆವ ನೇತ್ಯಾತ್ಮಕವೆಂದಿಂತು ॥
ಎಸೆವ ಸಮಾಧಿಗಳೆರಡವರೊಳಾದಿಯ।
ದೆಸೆವುದು ನಾಲ್ಕುರೂಪವನ್ನೈದಿ ॥ 1 ॥

ಚಂದ್ರಮುಖಿಯೆ ಕೇಳು. ಎಲ್ಲವೂ ಪರಮಾತ್ಮಸ್ವರೂಪವೆಂಬುದು ಸರ್ವಾತ್ಮಕ ಸಮಾಧಿಯು. ತೋರುವ ದೃಶ್ಯಗಳನ್ನು ಅಲ್ಲಗಳೆಯುವದು ನೇತ್ಯಾತ್ಮಕ ಸಮಾಧಿಯೆನಿಸುವದು. ಇವುಗಳಲ್ಲಿ ಸರ್ವಾತ್ಮಕ ಸಮಾಧಿಯು ನಾಲ್ಕು ಪ್ರಕಾರವಾಗಿರುವದು.

ಬಿಸಜಾಕ್ಷಿ ಮಗುಳೆ ನೇತ್ಯಾತ್ಮಕವೆನಿಸುವ।
ಸುಸಮಾಧಿಯೊಂದೈದು ತೆರನಿಂತು ॥
ಸಸಿನಮಿದೆಂದು ನೀನರಿವಂತೆ ನಾನೊಲಿ।
ದುಸುರುವೆನದರಂದವನು ಕೇಳು ॥ 2 ॥

ಕಮಲಾಕ್ಷಿಯೆ, ಮತ್ತೆಎರಡನೆಯ ನೇತ್ಯಾತ್ಮಕ ಸಮಾಧಿಯು ಒಂದು. ಹೀಗೆ ಸಮಾಧಿಯು ಒಟ್ಟು ಐದು ಪ್ರಕಾರವಾಗಿದೆ. ನಾಮರೂಪಾತ್ಮಕ ಸಂಸಾರವು ತಾನಲ್ಲ ತನ್ನದಲ್ಲ ಎಂಬ ಅನುಸಂಧಾನವು ನೇತ್ಯಾತ್ಮಕ ಸಮಾಧಿಯು. ಇದು ನಿನಗೆ ಸರಳವಾಗಿ, ಅಂಗೈನೆಲ್ಲಿಯಂತೆ ಚನ್ನಾಗಿ ತಿಳಿವಂತೆ ಪ್ರೀತಿಯಿಂದೆ ಹೇಳುವೆ (ಐದು ತೆರನಾಗಿರುವ) ಅದರ ಲಕ್ಷಣವನ್ನು ಕೇಳು.

ಗುರುಭಕ್ತನೆನಿಸಿ ಸದ್ಗುರು ಸನ್ನಿಧಿಯೊಳಿರ್ದು ।
ಪರಮಾನುಭವ ಸುಖಬೋಧೆಯ ॥
ಒರಿದು ನಂಬಿಗೆಯೊಡವೆರೆದಲಸದೆ ಕೇಳು ।
ತಿರಲದೆ ಶ್ರವಣಾಖ್ಯ ಸುಸಮಾಧಿ ॥ 3॥

ಶ್ರೀಗುರುವಿನಲ್ಲಿ ಪರಮಭಕ್ತಿಯುಳ್ಳವನಾಗಿ, ಸದ್ಗುರುವಿನ ಪವಿತ್ರ ಪಾದದ ಸಾಮಿಪ್ಯದಲ್ಲಿ ಕುಳ್ಳಿರಬೇಕು. ಪರಮಾತ್ಮನ ಅನುಭವರೂಪ ಪರಮ ಸುಖದಾಯಕ ಬೋಧೆಯನ್ನು ಅತ್ಯಂತ ಶ್ರದ್ಧೆಯಿಂದ ಎಷ್ಟೂ ಬೇಸರಿವಿಲ್ಲದೆ ಕೇಳುತ್ತಿರಬೇಕು ಅದೇ ಶ್ರವಣನಾಮಕ ಶ್ರೇಷ್ಠ ಸಮಾಧಿಯೆನಿಸುವದು.

ಅನುಭವಿಗಳೊಳು ತನ್ನನುಭವ ಬೋಧೆಯ ।
ನನುಭವವಿದು ಸುಖವೆನಿಪಂತೆ ॥
ವಿನಯದಿಂ ನುಡಿದು ತಾನವರಿಂದ ಕೇಳ್ವುದ ।
ದೆನಿಪುದು ಸಂವಾದ ಸುಸಮಾಧಿ ॥ 4 ॥

ತಾನು ತಿಳಿದುಕೊಂಡು ತನ್ನ ಸ್ವರೂಪ ಜ್ಞಾನವನ್ನು ತನಗೆ ಆನಂದವುಂಟಾಗುವಂತೆ ವಿನಯಪೂರ್ವಕವಾಗಿ ಅನುಭವಿಗಳಿಗೆ ಹೇಳಿ, ತಾನು ಅವರಿಂದ ಆತ್ಮಾನುಭವವನ್ನು ಕೇಳಿ ತಿಳಿದುಕೊಳ್ಳುವದು ಸಂವಾದ ಸಮಾಧಿಯೆಂದೆನಿಸುವರು.

ಮರ್ಮವನರಿದಾತ್ಮಸುಖದಾದಿಯೆನಿಸುವ ।
ಕರ್ಮವನಲಸದೆ ಮಾಳ್ಪುದು ॥
ಕರ್ಮ ಸಮಾಧಿಯೆಂದೆನಿಸುಗುಮದು ಬಾಹ್ಯ ।
ಕರ್ಮೋಪರತಿಯಿಲ್ಲದಾಗದು ॥ 5 ॥

ರಹಸ್ಯವನ್ನು ಅರಿತು ಆತ್ಮಸುಖಕ್ಕೆ ಮೂಲ ಕಾರಣವಾದ ಸುವಿಚಾರ ( ಆತ್ಮಾನಾತ್ಮ ವಿಚಾರ) ವೆಂಬ ಕರ್ಮವನ್ನು ಉತ್ಸುಕನಾಗಿ ಆಲಸ್ಯವಿಲ್ಲದೆ ಮಾಡತಕ್ಕದ್ದು. ಇದೇ ಕರ್ಮ ಸಮಾಧಿಯೆನಿಸುವದು. ಇದು ಬಾಹ್ಯ ಕರ್ಮವೆಲ್ಲವನ್ನು ತ್ಯಜಿಸದೆ ಸಾಧ್ಯವಾಗುವದಿಲ್ಲ

ಸರ್ವಭಾವನೆಯಲ್ಲಿ ಸರ್ವಾತ್ಮಕತ್ವದೆ ।
ಸರ್ವದಾ ಸುಖಸಿದ್ಧಿ ತನಗಾಗೆ ॥
ಸರ್ವವಿದನು ಬ್ರಹ್ಮಮಯವೆಂದು ಕಾಣ್ಬುದೆ ।
ಸರ್ವಾತ್ಮಕವೆನಿಪ್ಪ ಸುಸಮಾಧಿ ॥ 6 ॥

ಸರ್ವನಾಮರೂಪ ವಿಷಯಗಳಲ್ಲಿ ಅನುಸ್ಯೂತನಾಗಿ ತಾನು ಸಚ್ಚಿದಾನಂದ ರೂಪದಿಂದ ಇರುವೆನು. ನಾಮರೂಪಗಳು ವ್ಯಭಿಚರಿಸುವದರಿಂದ ಅವು ಮಿಥ್ಯೆಯಾಗಿವೆಯೆಂದು ತಿಳಿದರೆ ತನಗೆ ಯಾವಾಗಲೂ ಸುಖವೇ ಇರುವದು. ಹೀಗೆ ಸರ್ವವೆಲ್ಲವನು ಬ್ರಹ್ಮಮಯವೆಂದು ನಿಶ್ಚಯಿಸುವದು ಸರ್ವಾತ್ಮಕ ಸಮಾಧಿಯೆನಿಸುವದು. (ಇವು ನಾಲ್ಕು ಸರ್ವಾತ್ಮಕ ಸಮಾಧಿ).

ಎನಿತು ತೋರ್ಕೆಗಳೊಳಗನಿತೆಲ್ಲವನು ತನ್ನೊ।
ಳನಿತಿಲ್ಲವೆನೆ ಕಾಣ್ಬಬಗೆಯದು ॥
ವನಿತೆ ನೇತ್ಯಾತ್ಮಕವೆನಿಪ ಸಮಾಧಿಯೆಂ।
ದೆನುತಿರ್ಪರಖಿಳ ಸನ್ಮುನಿಗಳು ॥ 7 ॥

ನಾಮರೂಪಾತ್ಮಕವಾಗಿ ಅಂದರೆ ಸಾಕಾರವಾಗಿ ತನ್ನೊಳು ಪ್ರತೀತಿಯಾಗುವ ಸಕಲ ಜಡದೃಶ್ಯಗಳು ತನ್ನಲ್ಲಿ ಇಲ್ಲವೆಂದು ಕಾಣುವ ಮನೋವೃತ್ತಿಯು, ಸ್ತ್ರೀಯಳೆ, ನೇತ್ಯಾತ್ಮಕವೆನಿಸುವ ಸಮಾಧಿಯೆಂದು ಎಲ್ಲ ಆತ್ಮಾನುಭವಿಗಳು ಹೇಳುವರು.

ಸಾಕಾರವನು ನಿರಾಕಾರವೆಲ್ಲವನು ತಂ।
ನಾಕಾರವಾ ನಿಜಪದದೊಳು ॥
ಜೋಕೆಗಾನಿಸದಿರುತಿರೆ ನೇತ್ಯಾತ್ಮವೆಂದು।
ಸ್ವೀಕರಿಸಾ ಸಮಾಹಿತೆಯನು ॥ 8 ॥

ಸಾಕಾರವಾಗಲಿ ನಿರಾಕಾರವಾಗಲಿ ಎಲ್ಲವೂ ತನ್ನ ಸ್ವರೂಪವೇ ಎಂದು ತಿಳಿಯಲಾಗಿ ತನ್ನಲ್ಲಿ ಅವು ತೋರದಿರಲು ಅದು ನೇತ್ಯಾತ್ಮಕ ಸಮಾಧಿಯೆಂದು ತಿಳಿಯತಕ್ಕದ್ದು. ಈಗ ಸಾಕಾರ, ನಿರಾಕಾರವೆಂದರೇನು, ವಿವರಿಸುವರು–

ಧರಣಿ ಜಲಾನಲ ಮರುತಂಬರಾದಿ ನಿ।
ಕರಮಿವು ಗುಣಕರ್ಮ ತತಿಯೊಳು ॥
ಬೆರಸಿ ಕಾಣಿಸಿಕೊಳುತಿಹವಾಗಿ ಸಾಕಾರ।
ದಿರವೆಂದು ನಳಿನಾಕ್ಷಿ ತಿಳಿ ನೀನು ॥ 9 ॥

ಭೂಮಿ ನೀರು ಬೆಂಕಿ ಗಾಳಿ ಬಯಲು ಇವುಗಳು ತಮ್ಮ ಗುಣಕರ್ಮಗಳಿಂದ ಕೂಡಿರುವವು. ಅಂದರೆ ಭೂಮಿಯು ಗಂಧ ಗುಣ ಹಾಗೂ ಧಾರಣ ಕ್ರಿಯೆ, ಜಲವು ರಸಗುಣ ಕೆಳಗೆ ಹರಿವ ಕರ್ಮ, ಬೆಂಕಿಯು ರೂಪಗುಣ ಮತ್ತುದಹನ ಕ್ರಿಯೆ, ಗಾಳಿಯು ಸ್ಪರ್ಶಗುಣ, ಗಮನ ಕರ್ಮ ಮತ್ತು ಬೈಲು ಶಬ್ದಗುಣ, ಅವಕಾಶಕೊಡುವ ಕರ್ಮ, ಹೀಗೆ ಕಾಣಿಸಿಕೊಳ್ಳುವದರಿಂದ ಅವು ಸಾಕಾರವೆಂದು, ಎಲೆ ಕಮಲಾಕ್ಷಿಯೇ ನೀನು ತಿಳಿ.

ಜೀವಜ್ಞ ಮರ್ತ್ಯಾದಿ ಭಾವವು ತನ್ನೊಳ।
ನಾವಗಮೊಂದಿ ತೋರ್ಪುದರಿಂದ॥
ಕೋವಿದೆ ನೀನವನರಿ ನಿರಾಕಾರವೆಂ।
ದೋವಿ ವಿವೇಕಾದಿ ಮುಖದೊಳು ॥ 10 ॥

ನಾನು ಜೀವನು, ಅಜ್ಞನು, ಮರ್ತ್ಯನು ಇತ್ಯಾದಿ ಭಾವಗಳು ತನ್ನಲ್ಲಿ ಯಾವಾಗಲೂ ತೋರುವದರಿಂದ, ಜಾಣಳೆ, ನೀನು ವಿವೇಕಿಸಿ ಪ್ರೀತಿಯಿಂದ ಅವನ್ನು ನಿರಾಕಾರವೆಂದು (ಭಾವಾತ್ಮಕವೆಂದು) ತಿಳಿಯತಕ್ಕದ್ದು.

ಇವರಿಂದೆ ಯೋಗಿಗೆ ಭವಬಂಧವದು ಹಿಂಗಿ।
ತವೆ ಸುಖಾತ್ಮಕ ಮುಕ್ತಿ ಘಟಿಪುದು ॥
ಯುವತಿ ಕೇಳಾ ಯೋಗಿವರನ ಸಂಗತಿಯಿಂದೆ।
ಸವನಿಪುದಖಿಳರ್ಗೆ ಮನದೊಲ್ಮೆ॥ 11 ॥

ಇಂತು ಉಭಯ ವಿಧ ಸಮಾಧಿಯ ಅನುಷ್ಠಾನದ ಬಲದಿಂದ ಯೋಗೀಶ್ವರನಿಗೆ ಜನನ ಮರಣಾತ್ಮಕ ಸಂಸಾರ ಬಂಧವು ನಾಶವಾಗಿ ಸುಖಸ್ವರೂಪವಾದ ನಿತ್ಯಮುಕ್ತಿ ಪ್ರಾಪ್ತವಾಗುವದು. ಸ್ತ್ರೀಯಳೆ ಕೇಳು. ಆ ಜ್ಞಾನಯೋಗಿಯ ಪವಿತ್ರ ಸಾನಿಧ್ಯದಿಂದ ಸರ್ವರಿಗೂ ಮನದಿಚ್ಛೆ ಕೈಗೂಡುವದು.

– ಇತಿ ಸಮಾಧಿ ಭೇದ ನಿರೂಪಣೆ –

## 15ನೇ ಸೂತ್ರ

### ಯೋಗಿಯ ಕುಲಕೋಟಿ ಬಂಧು ಬಾಂಧವರನು-। ರಾಗದಿಂದವೆ ಮುಕ್ತಿವಡೆವರು ॥

ಯೋಗೀಶ್ವರನು ಯಮಾದಿ ನಾಲ್ಕು ಬಹಿರಂಗ ಸಾಧನದಿಂದಲೂ ಪ್ರತ್ಯಾಹಾರಾದಿ ನಾಲ್ಕು ಅಂತರಂಗ ಸಾಧನದಿಂದಲೂ ತನ್ನ ಸ್ವರೂಪಾನಂದಮಯ ಸಮಾಧಿಯಲ್ಲಿ ಸ್ಥಿತನಾಗಿರುವನು. ಅದರ ಪುಣ್ಯ ಪ್ರಭಾವದಿಂದ, ಅವನ ಕುಲದಲ್ಲಿ ಜನಿಸಿದ ಕೋಟಿ ಬಂಧು ಬಾಂಧವರು ಆ ಯೋಗಿವರನ ಸ್ಮರಣೆಯಿಂದ ಮುಕ್ತಿಪಡೆವರು.

ಯೋಗಿ ಪ್ರತ್ಯಾಹಾರವಾಗೆ ತನಗೆ ಸಿದ್ಧಿ।
ಯಾಗಳಾ ಪನ್ನೊಂದು ಕುಲವನು ॥
ರಾಗದಿಂದೊಡಗೂಡಿ ಮುಕ್ತನೆನಿಸುವನಿ।
ದಾಗಮ ಸಿದ್ಧವಂಗನೆ ನಂಬು ॥ 1 ॥

ಪ್ರತ್ಯಾಹಾರ ಯೋಗಾಂಗವು (ಸೂತ್ರ 10) ತನಗೆ ಸಿದ್ಧಿಯಾಗಲು, ಯೋಗಿಯು ಸಂತೋಷದಿಂದ ತನ್ನ ಹನ್ನೊಂದು ಕುಲದವರೊಡಗೂಡಿ ಮುಕ್ತಿಯನ್ನು ಪಡೆಯುವನು. ಹೇ ಸ್ತ್ರೀಯಳೆ ಇದು ಆಗಮ ಪ್ರಮಾಣದಿಂಧ ಸಿದ್ಧವದೆ, ನೀನಿದನು ನಂಬು.

ವರಯೋಗಿ ಧಾರಣೆ ತನಗಾಗಲವರಿಂದೆ।
ನಿರುತಮಿಪ್ಪತ್ತೊಂದು ಕುಲವನು ॥
ಹರುಷದಿಂದವೆ ಮಹಾಭವಶರನಿಧಿಯನು।
ತ್ತರಿಸಿ ತಾನೈದುವನಮೃತವ ॥ 2 ॥

ಧಾರಣಾಂಗ (ಸೂತ್ರ 11 ನೋಡು) ವನ್ನು ಅಂಗಕ್ಕೆ ಅಳವಡಿಸಿ ಮನಕೊಂಡ ಯೋಗೀಶ್ವರನು ಯೋಗ ಬಲದಿಂದ ತನ್ನ ಇಪ್ಪತ್ತೊಂದು ತಲೆಮಾರಿನ ಜನರೆಲ್ಲರನ್ನು ಜನನ ಮರಣಾತ್ಮಕ ಮಹಾ ಭವಸಾಗರದಿಂದ ದಾಟಿಸಿ ತಾನು ಮೋಕ್ಷಸುಖ ಪಡೆಯುವನು.

ಕುಲವಿಪ್ಪತ್ತೊಂದನಾ ಕುಲದ ಬಂಧುಗಳನು।
ವೊಲಿದೊಡಗೂಡಿ ಯೋಗೀಶನು ॥
ವಿಲಸದಮೃತ ಸಿದ್ಧಿವಡೆವನಾ ಧ್ಯಾನದ।
ಬಲದಿಂದೆ ಲಲಿತಾಂಗಿ ನಿಜವಿದು ॥ 3 ॥

ಧ್ಯಾನಾಂಗ ಸಾಧನದ ಬಲದಿಂದ ತನ್ನ ಇಪ್ಪತ್ತೊಂದು ತಲೆಮಾರಿನ ಬಂಧು ಬಾಧವರನ್ನು ಪ್ರೀತಿಯಿಂದ ಒಡಗೂಡಿ, ಸುಂದರ ಶರೀರದ ಮೈತ್ರೇಯಿ, ಆ ಯೋಗೀಶ್ವರನು ತಡಮಾಡದೆ ಅಮೃತತ್ವಪದ ಪಡೆಯುವನು. ಇದು ಸತ್ಯವೆಂದು ತಿಳಿ.

ಕುಲವನೇಕೋತ್ತರ ಶತವನಾ ಕುಲಬಂಧು।
ಬಳಗವೆಲ್ಲವನುದ್ಧರಿಸಿ ತನ್ನ॥
ಸುಲಭವೆನಿಪ ಸಮಾಧಿಯ ಸತ್ವದೊಳು ಯೋಗಿ।
ನಲಿದೈದುವನು ಮುಕ್ತಿಸುಖವನು ॥ 4 ॥

ತನಗೆ ಸಹಜವಾದ ಸಮಾಧಿಯ ಬಲದಿಂದ ಯೋಗೀಶ್ವರನು ತನ್ನ ನೂರಾವೊಂದು ತಲೆಮಾರಿನ ಬಂಧುಬಳಗವೆಲ್ಲವನ್ನು ಉದ್ಧಾರಮಾಡಿ ತಾನು ಪ್ರೀತಿಯಿಂದ ಮುಕ್ತಿಸುಖವನ್ನು ಹೊಂದುವನು.

ಎರಡವಸ್ಥೆಗಳು ಯೋಗಿಗೆ ಸಮಾಹಿತೆಯೆಂದು।
ವರಸಮುತ್ಥಾನವೆಂದಿವನಿಂತು ॥
ತರುಣಿ ನೀನರಿವುದಾಗಮದನುಮತವಿಡಿ॥
ದೊರೆವೆ ನಾನಿದು ಸತ್ಯವೆನಿಪಂತೆ ॥5 ॥

ಎಲೆ ತರುಣಿಯೆ, ಜ್ಞಾನಯೋಗಿಗೆ ಸಮಾಧಿ ಮತ್ತು ಹಿರಿಮೆಯ ಸಮುತ್ಥಾನ (ಎಚ್ಚರ) ವೆಂದು ಎರಡವಸ್ಥೆಗಳಿರುವವು. ಅವುಗಳನ್ನು ನಾನು ಆಗಮ ಪ್ರಮಾಣಕ್ಕನುಸರಿಸಿ ಸತ್ಯವೆನಿಸುವಂತೆ ತಿಳಿಸುವೆನು.

ತಾನಿದಿರೆಂದು ಬೇರೇನೊಂದುಮರಿಯದೆ।
ಜ್ಞಾನ ಸುಖಾದ್ವಯ ಪದವಾಗಿ ॥
ತಾನಿರ್ಪುದನು ಸಮಾಹಿತೆಯೆಂಬ ಬಗೆಯದು।
ಮಾನಿನಿ ಮುದದಿಂದೆ ತಿಳಿವುದು ॥ 6 ॥

ತಾನು ಮತ್ತು ಇದಿರೆಂದು ಬೇರೊಂದೇನನ್ನೂ ಎಂದೂ ಅರಿಯದೆ, ಚೈತನ್ಯ ರೂಪನೂ ಸುಖಸ್ವರೂಪನೂ ಅದ್ವಯಾತ್ಮನೂ ತಾನಾಗಿರುವದು ಸಮಾಧಿಯದಾಗಿದೆ ಎಂದು ಕುಲೀನ ಸ್ತ್ರೀಯಳೆ, ಸಂತೋಷದಿಂದ ನೀನು ತಿಳಿಯಬೇಕು.

ಸಕಲಾರಬ್ಧಂಗಳ ನಿಖಿಳೇಂದ್ರಿಯಂಗಳಿಂ।
ದಕಲಂಕ ಬ್ರಹ್ಮಾತ್ಮಕವೆಯೆಂದು ॥
ವಿಕರಿಸದುಪಭೋಗಿಪುದು ತಾನೆಯುತ್ಥಾನ।
ವಕುಟಿಲೆ ನೀನದನರಿವುದು ॥ 7 ॥

ಇಚ್ಛಾ ಅನಿಚ್ಛಾ ಪರೇಚ್ಛಾ ಎಂದು ಮೂಬಗೆಯ ಪ್ರಾರಬ್ಧವು ನಿರ್ದೋಷವಾದ ಪರಬ್ರಹ್ಮಸ್ವರೂಪವೆಂದೆ ನಿಶ್ಚಯಿಸಿ ಯೋಗೀಶ್ವರನು ವಿಷಯೇಂದ್ರಿಯ ಭೋಗಗಳಿಂದ ಮನದಲ್ಲಿ ವಿಕರಿಸದೆ, ಬಾಧ ಸಾಮಾನಾಧಿಕರಣ್ಯ (ಟಿ) ದಿಂದ ಆಯಾಕರ್ಮಫಲವನ್ನು ಅನುಭವಿಸುವನು. ಇದೆ ಸಮುತ್ಥಾನ ಸಮಾಧಿಯೆಂದು, ಸರಳ ಸ್ವಭಾವದ ಮೈತ್ರೇಯಿ, ನೀನು ತಿಳಿವುದು.

ಯುಗಮಾತ್ರ ದರ್ಶಿಯೆನಿಸಿ ಮಂದಗತಿಯಿಂದೆ।
ಬಗೆಯದೇನೊಂದು ವಿಷಯವನು ॥
ಮೃಗನೇತ್ರೆ ಯೋಗಿ ಚರಿಸುವೆಡೆಯೊಳು ಸದಾ।
ನೆಗಳುತಿರ್ಪುದು ಸಮಾಹಿತೆಯನು ॥ 8 ॥

ಯೋಗಿಯು ಸಂಚರಿಸುವಾಗ ತನ್ನ ಮುಂದೆ ಎರಡು ಮೊಳದಳತೆಯಲ್ಲಿಯೇ ದೃಷ್ಟಿಯನ್ನಿರಿಸಿ ಸಾವಕಾಶವಾಗಿ ನಡೆಯುತ್ತ ಏನೊಂದು ವಿಷಯವನ್ನೂ ಚಿಂತಿಸದೆ ಇರುವನು. ಚಂಚಲನೇತ್ರವುಳ್ಳ ಮೈತ್ರೇಯಿ, ಸಂಚರಿಸುವಾಗಲೂ ಅವನು ಸಮಾಧಿಯನ್ನು ಆಚರಿಸುತ್ತಿರುವನು.

[ ಟಿಪ್ಪಣಿ :– ಸಮಾಹಿತನು ವಿಷಯಭೋಗಿಸುವಾಗಲೂ, ವಿಷಯಗಳ ನಾಮರೂಪ ಬಾಧಪಡಿಸಿ ಅಸ್ತಿ ಭಾತಿ ಪ್ರಿಯರೂಪ ಆತ್ಮಾಕಾರವೃತ್ತಿಯಿಂದಯಿದ್ದು, ಸರ್ವವೂ ಬ್ರಹ್ಮವೆಂದೆ ಭಾವಿಸುವನು. ಇದೇ ವರ ಯೋಗಿಯ ಬಾಧಸಾಮಾನಾಧಿಕರಣ್ಯ ವೃತ್ತಿಯೆನಿಸುವದು]

— ಇತಿ ಯೋಗೀಶ್ವರನಿಗೆ ಸ್ಥಿತಿ ವಿಶೇಷ ನಿರೂಪಣೆ —

## 16ನೇ ಸೂತ್ರ

ಯೋಗಿ ಕರ್ಮತ್ರಯವನು ಪೇಳ್ವವಿಧಿಯಿಂದೆ
ನೀಗಿ ನಿರ್ಮಳವಮುಕ್ತಿಪಡೆವನು ॥

ಯೋಗೀಶ್ವರನು ಸಂಚಿತಾಗಾಮಿ ಪ್ರಾರಬ್ಧವೆಂಬ ಮೂರು ಪ್ರಕಾರದ ಕರ್ಮಗಳನ್ನು ಮುಂದೆ ಹೇಳುವ ರೀತಿಯಲ್ಲಿ ಉಂಡು ತೀರಿಸಿ ತಾನು ಪುನರ್ಜನ್ಮರಹಿತವಾದ ಮುಕ್ತಿಸುಖವನ್ನು ಪಡೆಯುವನು.

ತನುವನಂತಂಗಳ ಜನನಕ್ಕೆ ಬೀಜವೆಂ।
ದೆನಿಸಿ ಬುದ್ಧಿಯೊಳು ಸಂಸ್ಕರಿಸಿರ್ಪ ॥
ಘನಕರ್ಮವದು ಸಂಚಿತಾಖ್ಯದಿಂದೆಸೆವುದು।
ಮುನಿಮತವಿದು ಸರ್ವ ಶ್ರುತಿಸಿದ್ಧ॥ 1 ॥

ಎಂಭತ್ತು ನಾಲ್ಕು ಲಕ್ಷ ಜೀವರಾಶಿಗಳ ಅಗಣಿತ ಶರೀರಗಳ ಉತ್ಪತ್ತಿಗೆ ಕಾರಣವಾಗಿ ಬುದ್ಧಿಯಲ್ಲಿ ಸಂಸ್ಕಾರರೂಪದಿಂದ ಇರುವ ಮಹತ್ತರವಾದ ಕರ್ಮ ಸಂಗ್ರಹಕ್ಕೆ ಸಂಚಿತ ಕರ್ಮವೆಂದು ಹೆಸರು. ಇದು ಮುನಿಗಳಿಗೆ ಸಮ್ಮತವಾಗಿಯೂ ಸಕಲ ಶ್ರುತಿಸಿದ್ಧವಾಗಿಯೂ ಇರುವದು.

ಆ ಸಂಚಿತಾಖ್ಯ ಕರ್ಮವನೆ ಯೋಗೀಶ್ವರ।
ನೋಸರಿಸದೆ ತಾನೆ ರಚಿಸುವ॥
ಭಾಸುರಾತ್ಮಾನುಚಿಂತನದಿಂದ ತೀರ್ಚಿ ವಿ।
ಲಾಸದೊಳೊಂದಿ ಸಂಚರಿಪನು ॥ 2 ॥

ಯೋಗಿವರನು ಬೇಸರಪಟ್ಟುಕೊಳ್ಳದೆ ಸ್ವಯಂಪ್ರಕಾಶರೂಪ ಆತ್ಮನೇ ನಾನಿದ್ದೇನೆಂಬ ಜ್ಞಾನಾಗ್ನಿಯಿಂದ ಆ ಸಂಚಿತ ಕರ್ಮವನ್ನು ನಿಶ್ಶೇಷವಾಗಿ ಸುಟ್ಟು ನಾಶಮಾಡುವನು. ಹೀಗೆ ಅವನು ವಿಲಾಸದೊಡಗೂಡಿ ನಿಶ್ಚಿಂತೆಯಿಂದ ಸಂಚರಿಸುವನು.

ವನಿತೆ ಕೇಳಾ ಸಂಚಿತದೊಳಾದ ತನುವಿದ।
ರನುವಿಡಿದೀಗಳೀಪರಿಯೊಳು ॥
ತನಗಾದ ಕರ್ಮವದಾರಬ್ಧವೆನಿಪುದು।
ವಿನುತ ವೇದಾರ್ಥವಿಂತಿದು ತಾನು॥ 3 ॥

ಸ್ತ್ರೀಯಳೆ ಕೇಳು, ಆ ಸಂಚಿತ ಕರ್ಮದ ಒಂದು ಅಂಶವು ಈ ಶರೀರದ ಉತ್ಪತ್ತಿಗೆ ಮತ್ತು ಇದರ ಸ್ಥಿತಿಗತಿಗೆ ಹೇತುವಾಗಿರುವದು. ಅಂಥ ಆ ಕರ್ಮದ ಅಂಶಕ್ಕೆ ಪ್ರಾರಬ್ಧ ಕರ್ಮವೆಂದು ಹೆಸರು. ಇದು ವರವೇದದ ಮತವಾಗಿರುವದು.

ಆರಬ್ಧ ಕರ್ಮವಿದನು ಯೋಗಿ ಭೋಗಿಸಿ।
ತೀರಿಸುವನು ಚಿಂತೆ ವಡೆಯದೆ ॥
ಆರಯ್ಯೆ ಸುಖದುಃಖ ಮಿಶ್ರರೂಪಿಂದೆ ನಿ।
ವಾರಿಸ ಬಾರದಾರ್ಗೆಯುಮದು ॥ 4 ॥

ಈ ಪ್ರಾರಬ್ಧ ಕರ್ಮದ ಫಲವು ವಿಚಾರಿಸಲಾಗಿ ಸುಖ, ದುಃಖ ಮತ್ತು ತನ್ಮಿಶ್ರ ರೂಪದಿಂದ ಇರುವದು. ಜ್ಞಾನಯೋಗಿಯು ಇದನ್ನು ನಿವಾರಿಸುವದು ಹೇಗೆ ಎಂದು ಕಿಂಚಿತ್ತೂ ಚಿಂತೆ ಮಾಡದೆ ಸಮಾಧಾನದಿಂದ ಉಂಡು ತೀರಿಸುವನು ಮತ್ತು ಕ್ರೀಡಿಸುತ್ತಾ ಕಾಲ ಕಳೆಯುವನು, ಯಾಕೆಂದರೆ ಪ್ರಾರಬ್ಧಕರ್ಮವನ್ನು ಉಂಡು ತೀರಿಸದೆ ಬೇರೊಂದು ಪರಿಹಾರವದಕಿಲ್ಲ.

ಯೋಗಿ ಮೇಣಚ್ಛೆಯನಿಚ್ಛೆ ಪರೇಚ್ಛೆಗ।
ಳಾಗಿ ಸರ್ವವನುಪಭೋಗಿಸಿ ॥
ನೀಗುವನಾರಬ್ಧ ಕರ್ಮವನದು ಪೋಗ।
ದೇಗೈದು ಬೇರೊಂದು ವಿಧಿಯಿಂದ ॥ 5 ॥

ಇಚ್ಛಾ ಪ್ರಾರಬ್ಧ ಅನಿಚ್ಛಾ ಪ್ರಾರಬ್ಧ ಮತ್ತು ಪರೇಚ್ಛಾ ಪ್ರಾರಬ್ಧವೆಂಬ ಮೂರು ಪ್ರಕಾರದ ಕರ್ಮಗಳನ್ನು ಯೋಗೀಶನು ಉಂಡು ತೀರಿಸುವನು. ಅದು ಬೇರೆ ಯಾವ ರೀತಿಯಿಂದಲೂ ನಿವಾರಿಸಲ್ಪಡಲಾರದು.

ವಾರಿಜವದನೆ ನೀನೊಲವಿಂದೆ ತಿಳಿವುದಾ।
ಪ್ರಾರಬ್ಧದಿಂದ ಸಮ್ಯಜ್ಞಾನ ॥
ಶಾರೀರವಿಡಿದು ಮಾಡಿದ ಕರ್ಮವಿದು ಸುವಿ।
ಚಾರಿಸಲಾಗಾಮಿಯೆನಿಪುದು ॥ 6 ॥

ಹೇ ಕಮಲಮುಖಿ, ಪ್ರಾರಬ್ಧಕರ್ಮಾನುಸಾರ ಸುಜ್ಞಾನಿಯು ಶರೀರದಿಂದ ಜೀವಿಸಿ ಕೊಂಡಿರುವವರೆಗೆ ಮಾಡಿದ ಕರ್ಮವು ವಿಚಾರಿಸಲು ಆಗಾಮಿ ಕರ್ಮವೆನಿಸುವದೆಂದು ನೀನು ಪ್ರೀತಿಯಿಂದ ತಿಳಿದುಕೊಳ್ಳಬೇಕು.

ಆಗಾಮಿಯೆನಿಪ ಧರ್ಮಾಧರ್ಮವದು ತಾನು।
ಯೋಗಿಯ ನುತಿಸಿ ನಿಂದಿಸಿದವರಿಗೆ ॥
ಪೋಗುತಿರ್ಪುದು ನಿಜವಹುದಾಗಿ ಮುಕ್ತ ತಾ।
ನಾಗುವನವನಿದು ಶ್ರುತಿಸಿದ್ಧ ॥ 7 ॥

ಜ್ಞಾನಿಯ ಆಗಾಮಿ ಕರ್ಮವು ಪುಣ್ಯ ಹಾಗೂ ಪಾಪಗಳನ್ನು ಕೊಡುವದು ಆದರೆ ಪುಣ್ಯ ಕರ್ಮದ ಫಲವು ಜ್ಞಾನಿಯನ್ನು ವಂದಿಸಿದವರಿಗೆ ಹಾಗೂ ಪಾಪಕರ್ಮ ಫಲವು ಅವನನ್ನು ನಿಂದಿಸಿದವರಿಗೆ ಹೋಗಿ ನಿಶ್ಶೇಷವಾಗಿ ಅದು ಕಳೆದು ಹೋಗುವದು. ಆದ್ದರಿಂದ ವರಯೋಗಿಯು ನೇರವಾಗಿ ಮುಕ್ತಿಯನ್ನು, ಪಡೆಯುವನು. ಇದು ಶ್ರುತಿ ಪ್ರಮಾಣವು.

ಈ ತೆರದಿಂದ ಕರ್ಮಾಳಿಯಳಿದು ಬೇರೆ।
ಮಾತೇನು ಯೋಗಿ ನಿಜಾನಂದ॥
ಚೈತನ್ಯಾದ್ವಯ ಮುಕ್ತಿವಡೆವುದು ಸತ್ಯವೆಂ।
ದೋತು ನೀನರಿವುದಂಬುಜನೇತ್ರೆ ॥ 8 ॥

ಈ ಪ್ರಕಾರವಾಗಿ ಸರ್ವಕರ್ಮವಳಿದು, ಮತ್ತೊಂದು ಮಾತಿಲ್ಲದೆ, ಯೋಗಿವರನು ಸ್ವರೂಪಾನಂದರೂಪ ಶುದ್ಧ ಚೈತನ್ಯ ಪೂರ್ಣವಾಗಿ ತಾನೇ ತಾನಾದ ಮುಕ್ತಿಯನ್ನು ಪಡೆಯುವನು. ಹೇ ಕಮಲ ಸದೃಶ ನೇತ್ರವುಳ್ಳ ಮೈತ್ರೇಯಿ, ಇದು ಸತ್ಯವೆಂದು ನೀನು ಸಂತೋಷದಿಂದ ತಿಳಿ.

— ಇತಿ ಯೋಗೀಶ್ವರಂಗೆ ಕರ್ಮಕ್ಷಯ ಪ್ರಕಾರ ನಿರೂಪಣೆ —

## 17ನೇ ಸೂತ್ರ

ಮಗುಳೆ ಸಪ್ತಾವರಣದೊಳೊಂದಿ ಜೀವಾತ್ಮ।
ನಿಗೆ ಯಮಾದಿಗಳು ಮುಕ್ತಿಯನೀಗು॥

ಯಮನಿಯಮಾದಿ ಅಷ್ಟಾಂಗಗಳು ಶರೀರಾದಿ ಮಾಯೆಯರೆಗಿರುವ ಸಪ್ತಾವರಣಗಳೊಡಗೂಡಿದ ಜೀವಾತ್ಮನಿಗೆ ಸುಖ ಸ್ವರೂಪವಾದ ಮುಕ್ತಿಯನ್ನು ಕೊಡುವವು.

ಯಮ ನಿಯಮಾದಿಗಳನು ಸಪ್ತಾವರಣದೊ।
ಳಮರ್ದವವಸ್ಥೆಗಳಿಂದ ರಚಿಸಲು॥
ಸಮನಿಪುದಮೃತವಾಕ್ಷಣದೊಳಾ ಜೀವಂಗೆ।
ಸುಮತಿ ನಾನವನೊರೆವೆನು ಕೇಳು ॥ 1 ॥

ಸದ್ಬುದ್ಧಿಯುಳ್ಳ ಮೈತ್ರೇಯಿಯೆ ಕೇಳು, ಯಮ ನಿಯಮಾದಿ ಎಂಟು ಯೋಗಾಂಗಗಳನ್ನು ಏಳು ಆವರಣಗಳೊಡನೆ ಹೊಂದಿಕೆಯಾಗಿ ಅಭ್ಯಾಸ ಮಾಡುವದರಿಂದ ಜೀವನಿಗೆ ಆಗಲೇ ಅಮೃತಪದ ಪ್ರಾಪ್ತವಾಗುವದು. ಅದನ್ನೇ ನಾನು ವಿವರಿಸುವೆನು, ಕೇಳು.

ತನು ಮನೋಬುದ್ಧಿಯಹಮು ಚಿತ್ತ ವಿಜ್ಞಾತೃ।
ಘನಮಾಯೆಯೆಂಬವೀ ಕ್ರಮದಿಂದ॥
ವನಿತೆ ಸಪ್ತಾವರಣಂಗಳೆನಿಪವಿವ।
ರನುವನೊಯ್ಯಾರದಿಂದರಿವುದು ॥ 2 ॥

ತನು ಮನಸ್ಸು ಬುದ್ಧಿ ಅಹಂಕಾರ ಚಿತ್ತು ಜ್ಞಾತೃ ಮತ್ತು ಘನಮಾಯೆಂಬಿವು ಕ್ರಮದಿಂದ, ಸ್ತ್ರೀಯಳೆ, ಸಪ್ತ ಆವರಣಗಳೆನಿಸುವವು. ಇವುಗಳ ಸ್ವರೂಪವನ್ನು ಪ್ರೀತಿಯಿಂದ ಅರಿತುಕೊಳ್ಳಬೇಕು.

ಇವರೊಳೊಂದಿರೆ ಜೀವನಿಗೆ ಕರ್ತೃಮೊದಲೆನಿ।
ಸುವ ನಾಮಕಲ್ಪನಾವ್ಯವಹೃತಿ ॥
ವಿವಿಧವಸ್ತೆಗಳನುಗತಿ ವಿಡಿದೊಡನೆ ಸಂ।
ಭವಿಪವಾ ಬಹುರೂಪಿ ನಟನಂತೆ ॥ 3 ॥

ಒಬ್ಬ ಪುರುಷನೇ ರಂಗಮಂಟಪದಲ್ಲಿ ವಿವಿಧ ವೇಷಗಳಿಂದ ನಟಿಸುವಂತೆ, ಏಳು ಆವರಣಗಳೊಡನೆ ಒಬ್ಬನೇ ಒಬ್ಬ ಜೀವನು ಹೊಂದಿಕೊಳ್ಳಲು, ಕರ್ತೃ ಆದಿಯಾಗಿ ಏಳು ಕಲ್ಪಿತ ನಾಮಗಳಿಂದ ವಿವಿಧ ಅವಸ್ಥೆಗಳಲ್ಲಿ ವ್ಯವಹರಿಸುವನು (ನಟಿಸುವನು).

ಪೆಸರಿಂದೆ ಕರ್ತನು ಪೆಸರಿಂದ ಜೀವನು।
ಪೆಸರಿಂದ ಕ್ಷೇತ್ರಜ್ಞನು ಸಾಕ್ಷಿ॥
ಪೆಸರಿಂದ ಕೂಟಸ್ಥನರಿಯಲಂತರ್ಯಾಮಿ।
ಪೆಸರಿಂದ ಪ್ರತ್ಯಗೆನಿಪನಾತ್ಮ॥ 4 ॥

ಆ ಜೀವ ಅಥವಾ ಕಲ್ಪಿತ ಪುರುಷನು ಕೆಳಗೆ ಹೇಳಿದ ಏಳು ಹೆಸರುಗಳಿಂದ ನಟಿಸುವನು :– ಕರ್ತಾ, ಜೀವ, ಕ್ಷೇತ್ರಜ್ಞ, ಸಾಕ್ಷಿ ಕೂಟಸ್ಥ, ಅಂತರ್ಯಾಮಿ ಮತ್ತು ಪ್ರತ್ಯಗಾತ್ಮ.

ಅವತರಣಿಕೆ :– ತನು ತಾನೆಂಬ ಕರ್ತನಿಗೆ ಯಮ, ನಿಯಮಗಳೆಂಬ ಎರಡು ಸಗುಣಯೋಗಗಳು (ಸೂತ್ರ 2, ರಿಂದ 6 ವರೆಗೆ, ಯಮಾಂಗ ಹತ್ತು, ನಿಯಮಾಂಗ ಹತ್ತು) ಕರಣೀಯ (ಮಾಡಲು ಯೋಗ್ಯ), ಮನ ತಾನೆಂಬ ಜೀವನಿಗೆ ಅಸುನಿರೋಧನ (ಪ್ರಾಣಾಯಾಮ) ಮತ್ತು ಯೋಗಾಸನ ಮಾಡುವದು. ಬುದ್ಧಿ ತಾನೆಂಬ ಕ್ಷೇತ್ರಜ್ಞನು ಪ್ರತ್ಯಾಹರಣ (ಸೂತ್ರ 10) ಮಾಡಬೇಕು. ಹಂಕಾರದೊಡಗೂಡಿದ ಸಾಕ್ಷಿಗೆ ಧಾರಣೆ (ಸೂತ್ರ 11). ಚಿತ್ತವೆ ರೂಪಾದ ಕೂಟಸ್ಥನಿಗೆ ಧ್ಯಾನ, ಜ್ಞಾತೃತಾನೆಂಬ ಅಂತರ್ಯಾಮಿಗೆ ಸಮಾದಿ ಅಷ್ಟಾಂಗಯೋಗಗಳನ್ನು ವಿಧಿಸಲಾಗಿದೆ.

ಭ್ರಮೆವಿಡಿದೀ ತನು ತಾನೆಂಬ ಬಗೆ ತನ್ನೊ।
ಳಮರ್ದಿರ್ಪಕತದಿಂದೆ ತಿಳಿಯಲ್ಕೆ॥
ಯಮ ನಿಯಮಗಳೆರಡು ದೃಢತರಮಾಗಿ।
ಕ್ರಮದಿಂದೆ ಕರ್ತಂಗೆ ಕರಣೀಯ ॥ 5 ॥

ತಪ್ಪು ತಿಳುವಳಿಕೆ ಮಾಡಿಕೊಂಡು ಈ ಸ್ಥೂಲ ಶರೀರವೇ ತಾನೆಂಬ ಭಾವವು ತನ್ನೊಳಗೆ ಗಟ್ಟಿಯಾಗಿರುವದರಿಂದ ಕರ್ತನು ಯಮ ನಿಯಮವೆಂಬೆರಡು ಅಂಗಗಳನ್ನು ದೃಢತರವಾಗುವಂತೆ ಅಭ್ಯಾಸ ಮಾಡತಕ್ಕದ್ದು.

ಮನವೆ ತಾನೆಂಬುದಿರಲು ತನ್ನೊಳಸು ನಿರೋ।
ಧನವದನೆಸಗಲಾಸನಮಿವು ॥
ವನಿತೆ ಕೇಳನುದಿನ ವಲಸದೆ ಚಲಿಸದ।
ತನದಿಂದೆ ಜೀವಂಗೆ ಕರಣೀಯ ॥ 6 ॥

ಮನಸ್ಸೇ ತಾನೆಂದು ಅದರೊಡನೆ ತಾದಾತ್ಮ್ಯ ಹೊಂದಿ ತಾನು ಸುಖಿ ದುಃಖಿ ಎಂಬ ಭಾವದಿಂದ ಯುಕ್ತನಾದವನೇ ಜೀವನು. ಮೈತ್ರೇಯಿ ಕೇಳು ಜೀವನಿಗೆ ಪ್ರಾಣಾಯಾಮ ಮತ್ತು ಆಸನಗಳನ್ನು ಸತತ ಅಭ್ಯಾಸ ಮಾಡುವದು ಅವಶ್ಯವಾಗಿದೆ. ಇದರಿಂದ ಶರೀರದ ಆರೋಗ್ಯವುಂಟಾಗುವದು ಮತ್ತು ಮನಸ್ಸಿನ ಚಂಚಲತೆ ದೂರಾಗುವವು.

ಅತ್ಯರ್ಥಮಾಗಿ ಬುದ್ಧಿಯನು ತಾನೆಂಬುದು।
ಸತ್ಯಮಾಗಿರೆ ತನ್ನೊಳದರಿಂದ ॥
ಪ್ರತ್ಯಾಹರಣವೆ ಕ್ಷೇತ್ರಜ್ಞಾಖ್ಯನಿಗೆ ನಿತ್ಯ।
ಕೃತ್ಯವಾಗಿರ್ಪುದಂಗನೆ ಕೇಳು ॥ 7 ॥

ಬುದ್ಧಿಯೆ ತಾನೆಂಬ ತಾದಾತ್ಮ್ಯವು ತನ್ನೊಳಗೆ ದೃಢವಾಗಿ ತೋರಲು ಅವನಿಗೆ ಕ್ಷೇತ್ರಜ್ಞ ಅಂದರೆ ಕ್ಷೇತ್ರವನ್ನು ತಿಳಿಯುವವನೆಂಬ ಹೆಸರು ಪ್ರಾಪ್ತವಾಗುವದು, ಹೇ ಮೈತ್ರೇಯಿ ಕೇಳು, ಪ್ರತ್ಯಾಹಾರದ ಅಭ್ಯಾಸವು ಅವನಿಗೆ ಕರ್ತವ್ಯವಾಗಿರುವದು.

ತನಗಹಂಕೃತಿರೂಪವಹುದಾಗಿ ಸಾಕ್ಷಿಯೆಂ।
ದೆನಿಸುವಾತನು ಧಾರಣೆಯನ್ನೈದಿ ॥
ಅನುದಿನವಗಲದೆ ರಚಿಸವೇಳ್ಪುದು ನೀರೆ।
ಎನುತ ವೇದಾನು ಶಾಸನವಿದು ॥ 8 ॥

ತಾನು ಅಹಂಕಾರದೊಡನೆ ತಾದಾತ್ಮ್ಯ ಹೊಂದಿರಲು ಅವನಿಗೆ ಸಾಕ್ಷಿಯೆಂಬ ಹೆಸರು ಬರುವದು. ಅವನು ಧಾರಣಾಂಗವನ್ನು ಬಿಡದೆ ಅಭ್ಯಾಸ ಮಾಡಬೇಕು. ಶುದ್ಧಬುದ್ಧಿಯುಳ್ಳ ಮೈತ್ರೇಯಿ ಇದು ಶ್ರೇಷ್ಠವಾದ ವೇದಗಳ ಆಜ್ಞೆಯಾಗಿರುವದು.

ತನಗೆ ಚಿತ್ತವೆ ರೂಪವೆನಿಸೆ ಕೂಟಸ್ಥನಾ।
ವನುಎಂದೆ ಕೇಳು ತಧ್ಯಾನವ ॥
ಇನಿಸಗಲದೆ ಮಾಡಬೇಹುದಾ ಚಿತ್ತವೆ।
ನೆನಹಿಂಗೆ ಕಾರಣವಹುದಾಗಿ ॥ 9 ॥

ಚಿತ್ತವೆ ತಾನೆಂದು ಅದರೊಡನೆ ತಾದಾತ್ಮ್ಯ ಹೊಂದಲು ಜೀವಾತ್ಮನಿಗೆ ಕೂಟಸ್ಥನೆಂದು ಹೆಸರು ಬರುವದು. ಚಿತ್ತೇ ಸ್ಮರಣಕ್ಕೆ ಕಾರಣವಿರುವದರಿಂದ, ತಾನು ಬಿಟ್ಟು ಬಿಡದೆ ಧ್ಯಾನಾಂಗವನ್ನು ಅಭ್ಯಾಸ ಮಾಡತಕ್ಕದ್ದು.

ಜ್ಞಾತೃ ತಾನೆಂಬ ಭಾವನೆಯೊಳಂತರ್ಯಾಮಿ।
ಚೈತನ್ಯಮಾದ ಸಮಾಧಿಯ ॥
ಚೈತನ್ಯದಿಂದೆ ಮಾಡುವನೆಂದು ತಿಳಿವುದು।
ಚೈತನ್ಯದುಪರತಿಯದು ತಾನು ॥ 10 ॥

ಜೀವನು ಜ್ಞಾತೃ ತಾನೆಂದು ಅಧ್ಯಾಸವನ್ನು ಪಡೆಯಲು ಅವನಿಗೆ ಅಂತರ್ಯಾಮಿ ಎಂದು ಕರೆಯುವರು. ಜ್ಞಾತೃ ಕರಣದ ಒಳಗಿದ್ದು ಪ್ರೇರಿಸುವದರಿಂದ ಅವನು ಅಂತರ್ಯಾಮಿಯು. ಆದರಿಂದ ಅವನು ಸಮಾಧಿ ಅಂಗವನ್ನು ಅವಶ್ಯವಾಗಿ ಅಭ್ಯಾಸ ಮಾಡಬೇಕು. ಆಗ ಮನಸ್ಸು ವಿಶ್ರಾಂತ(ಉಪರತಿ) ಗೊಳ್ಳುವದು.

ಕೃತ್ಯವೆಲ್ಲನಿತುಮಿಲ್ಲದೆ ಸುಮ್ಮನಿರ್ಪುದೆ।
ಕೃತ್ಯವಾ ಮಾಯೋಪಹಿತನಾದ॥
ಪ್ರತ್ಯಗಾತ್ಮನಿಗಿದು ಸತ್ಯವೆಂದೆಲೆ ಕೃತ।
ಕೃತ್ಯೆ ಮೈತ್ರೇಯಿ ನೀನರಿವುದು ॥ 11 ॥

ಜೀವನು ಅಜ್ಞಾನರೂಪ ಮಾಯಾ ಉಪಾಧಿಯಿಂದ ಕೂಡಿಕೊಳ್ಳಲು ಪ್ರತ್ಯಗಾತ್ಮನೆಂಬ ಹೆಸರನ್ನು ಪಡೆಯುವನು. ಪ್ರತ್ಯಗಾತ್ಮನೆಂದರೆ ಅಜ್ಞಾನದ ಒಳಗಿರುವವನೆಂದರ್ಥ. ಇವನಿಗೆ ಏನೊಂದೂ ಮಾಡತಕ್ಕ ಕಾರ್ಯವಿಲ್ಲ. ಕಿಂತು ಏನೊಂದು ಮಾಡದೇ ಇರುವದೇ (ಸುಮ್ಮನಿರುವದೇ) ಒಂದು ಕಾರ್ಯವು. ಇದು ಸತ್ಯವೆಂದು ಮೈತ್ರೇಯಿ ನೀನು ತಿಳಿಯತಕ್ಕದ್ದು.

– ಇತಿ ಸಪ್ತಾವರಣ ಯೋಗಾಂಗ ನಿರೂಪಣೆ –

## 18ನೇ ಸೂತ್ರ

ತನುವುಮುಖ್ಯವೆನಿಸವಾವರಣರಹಿತನಾದ ।
ತನಗುಂಟೆ ಪೊರಗೊಳಗಣ ಕೃತ್ಯ ॥

ಶರೀರವೇ ಮೊದಲಾದ ಹಿಂದೆ ಹೇಳಿದ (ಏಳಾವರಣಗಳು)ತನಗಿಲ್ಲ. ತಾನು ಆ ಆವರಣಗಳಿಗೆ ಸಾಕ್ಷಿಕನಿದ್ದಾನೆ. ತಾನು ಸಚ್ಚಿದಾನಂದಾತ್ಮನಿದ್ದೇನೆಂದು ತಿಳಿಯಲು ತನಗಾವ ಕರ್ಮಗಳ ಅವಶ್ಯವಿಲ್ಲ. ಯಮಾದಿ ಅಂಗಸಾಧನೆಯ ಬಾಹ್ಯ ಕರ್ಮಗಳಾಗಲಿ, ಪ್ರತ್ಯಾಹಾರಾದಿ ಅಂತರಂಗದ ಕರ್ಮಗಳಾಗಲಿ ಇಲ್ಲದ ತಾನು ಕೃತಕೃತ್ಯನಿದ್ದಾನೆಂಬ ತಾತ್ಪರ್ಯವು.

ನಿನಗೆ ಕರ್ತಾದಿ ಜೀವನಿಕಾಯ ಭೇದವಾ।
ವನುವಿಂದೆ ಪೇಳ್ದಿಗಳನಿತನು ॥
ಇನಿತಿಲ್ಲದಂತೆ ಲಯಿಸುವ ತೆರನನು ನೀರೆ।
ಘನವೊಲಿದೊರೆದಾಲಿಸು ನೀನು ॥ 12 ॥

ಕರ್ತಾದಿ ಜೀವ ಮೊತ್ತದ ಕಲ್ಪಿತನಾಮುಗಳನ್ನು (ಆ ಸಪ್ತಾವರಣಗಳು ಸತ್ಯವಾಗಿರುವದೇನೋ ಎನ್ನುವಂತೆ) ಒಂದು ಅನುವಿನಿಂದ ಸವಿಸ್ತಾರವಾಗಿ ಹೇಳಿದೆನು. ಈಗ ಇನಿತೂ ಇಲ್ಲದಂತೆ ಅವುಗಳನ್ನು ನಾಶ ಮಾಡುವ ರೀತಿಯನ್ನು, ಶುದ್ಧ ಬುದ್ಧಿಯುಳ್ಳ ಮೈತ್ರೇಯಿ, ನಿನಗೆ ಒಲಿದು ವಿವರಿಸುವೆನು. ನೀನು ಚಿತ್ತಗೊಟ್ಟು ಕೇಳು.

ತನುವಿದು ತಾನಲ್ಲವದರೊಳಗೊಮ್ಮೆಯು ।
ತನಗುಂಟೆ ಯಮ ನಿಯಮಂಗಳು ॥
ಎನುತೆ ಭಾವಿಸಿದೊಡೊಂದಿನಿಸು ಕರ್ತೃತ್ವವಿ।
ಲ್ಲೆನಿಸುಗುಮಾತ್ಮನೊಳಿದು ನಿಜ ॥ 2 ॥

ಶರೀರವು ಜಡ ದೃಶ್ಯವಾಗಿ ಭೂತಗಳ ಕಾರ್ಯವಾಗಿ, ನಿದ್ರೆಯಲ್ಲಿ ಇಲ್ಲವಾಗುವದರಿಂದ ಅದು ತಾನಲ್ಲವೆಂದು ಸಿದ್ಧವಾಯಿತು. ಆದ್ದರಿಂದ ತನಗೊಮ್ಮೆಯಾದರೂ ಯಮ ನಿಯಮಂಗಳನ್ನುಮಾಡುವದು ಘಟಿಸಲಾರದು ಎಂದು ತಿಳಿದರೆ, ಆತ್ಮನಲ್ಲಿ ತಿಲಮಾತ್ರವೂ ಕರ್ತೃತ್ವವಿಲ್ಲವೆಂಬುದು ನಿಶ್ಚಯವಾಗುವದು.ಇದು ತ್ರಿವಾರ ಸತ್ಯವೆಂದು ತಿಳಿ.

ಮನವೆ ತಾನಲ್ಲವಾ ಮನದೊಡನಾಸನ।
ವನಿಲ ನಿರೋಧನ ದ್ವಯಮಿವು ॥
ತನಗಿಲ್ಲವೆಂದು ತಿಳಿಯೆ ಜೀವಲಯವೆಂದು।
ವನಿತೆ ಮೈತ್ರೇಯಿ ನೀನರಿವುದು ॥ 3 ॥

ಮನಸ್ಸು ಸುಖದುಃಖಾದಿ ಅನೇಕ ಆಕಾರಗಳಿಂದ ತನಗೆ ಪ್ರತೀತಿಯಾಗುವದು ಆದ್ದರಿಂದ ಅದು ತಾನಲ್ಲವೆಂದು ನಿಶ್ಚಯ ಮಾಡಲು, ಆಸನ ಪ್ರಾಣಾಯಾಮವೆಂಬ ಎರಡಂಗಗಳು ತನ್ನಲ್ಲಿ ಘಟಿಸವು. ಹೀಗೆ ತಿಳಿಯಲು ಜೀವಾತ್ಮನ ಲಯವೆಂದು, ಪತ್ನಿ ಮೈತ್ರೇಯಿ, ನೀನು ತಿಳಿದುಕೊಳ್ಳುವದು.

ಬುದ್ಧಿ ತಾನಲ್ಲಾಗಿ ಸಿದ್ಧಿಸಲರಿವುದೆ।
ಶುದ್ಧ ಪ್ರತ್ಯಾಹಾರವೆನಲಿಲ್ಲ॥
ಉದ್ಧತನಾದ ಕ್ಷೇತ್ರಜ್ಞನ ಲಯವದು ।
ಸಿದ್ಧಾಂತವಂಬುಜಾನನೆ ನಂಬು ॥ 4 ॥

ವಿಜ್ಞಾನಮಯ ಕೋಶವಾದ ಬುದ್ಧಿಯೂ ಸಹ ಭಾವಾಭಾವರೂಪದಿಂದ ಅರುಹಿಸಿಕೊಳ್ಳುವದರಿಂದ ಆ ಬುದ್ಧಿಯು ತಾನಲ್ಲ, ಆದ್ದರಿಂದ ಪ್ರತ್ಯಾಹಾರವೆಂಬ ಅಂಗವು ತನ್ನಲ್ಲಿ ಸಂಭವಿಸದು. ಇಂತು ಅತಿಶಯನಾದ ಕ್ಷೇತ್ರಜ್ಞನ ಲಯವಾಯಿತೆಂದು ಸಿದ್ಧಾಂತವು. ಕಮಲಮುಖಿಯೆ, ಇದನು ನಂಬು.

ಭಾರೂಪನಾದಾತ್ಮನಹಮಲ್ಲವದರಿಂದೆ।
ಧಾರಣೆಯಿಲ್ಲೆಂದು ತಿಳಿದಂದು ॥
ಸಾರಿ ನೀನರಿ ಸಾಕ್ಷಿ ವಿಲಯವಿದೆಂದು ವಿ।
ಚಾರಿಸೆ ವೇದಾನುಮತದಿಂದ ॥ 5 ॥

ಅಹಂಕಾರವು ಭೂ ತತ್ವವಾಗಿ ಅರಿಸಿಕೊಳ್ಳುವದು. ತಾನು ಸ್ವಯಂ ಪ್ರಕಾಶ ಅರಿವು ಇರುವನು. ಆದ್ದರಿಂದ ಅಹಂಕಾರವು ತಾನಲ್ಲವದರಿಂದ ಆದಕಾರಣ ಧಾರಣೆಯೂ ತನಗಿಲ್ಲ ಈ ಕಾರಣದಿಂದ ಸಾಕ್ಷಿ ಎಂಬ ನಾಮವು ಲಯವಾಯಿತು. ಇದು ವೇದ ಪ್ರಮಾಣವು.

ಚಿತ್ತವಾನಲ್ಲವದರ ಕೂಡೆ ಬೆರೆಸದ।
ಚಿತ್ತು ತಾನೆಂದು ತಿಳಿದ ಮೇಲೆ ॥
ಎತ್ತಣ ಧ್ಯಾನವೆಂದರಿಯೆ ಕೂಟಸ್ಥಸಂ।
ವಿತ್ತಿಗೆ ಲಯವದು ಲಲಿತಾಂಗಿ ॥ 6 ॥

ಬಾಹ್ಯ ಜಡ ಸ್ಮರಣಗಳ ಸಂಗ್ರಹವಾದ ಚಿತ್ತಿನೊಡನೆ ಬೆರೆಸದ ಶುದ್ಧ ಚಿದ್ರೂಪು ತಾನೆಂದು ತಿಳಿದ ಮೇಲೆ ತನಗೆ ಧ್ಯಾನವೆಂಬುದಿಲ್ಲವು. ಲಲಿತಾಂಗಿ·ಮೈತ್ರೇಯಿ ಕೂಟಸ್ಥಾತ್ಮನ ನಾಮಲಯವೆಂದು ತಿಳಿಯುವದು.

ಬರಿಯರಿವಾನಷ್ಟೆನದರಿಂದೆ ನಿತ್ಯವಾ।
ದರಿವೆ ನಾನೆನಲು ಸಮಾಹಿತೆ ॥
ಪರಿದುದು ತನಗದರಿಂದವಂತರ್ಯಾಮಿ।
ದೊರೆಯಲು ಪಟ್ಟುದೆಂದರಿವುದು ॥ 7 ॥

ಬಚ್ಚಬರಿ ಅರಿವು ನಾನಿರುವೆನೆಂದು ತಿಳಿದರೆ ಜ್ಞಾತೃ ತಾನಲ್ಲವೆಂದಾಗುವದು. ಅದರಿಂದ ಸಮಾಧಿಯೆಂಬ ಅಂಗವೂ ತನಗಿಲ್ಲ. ಹೀಗೆಂದು ತಿಳಿಯಲು ಅಂತರ್ಯಾಮಿ ಎಂಬ ನಾಮದ ಲಯವಾಯಿತೆಂದು ಅರಿಯಬೇಕು.

ಪ್ರತ್ಯಕ್ಪರಾಗ್ಭೇದ ಕೃತ್ಯವಜ್ಞತೆಯಿಂದೆ।
ಕೃತ್ಯಮುಂಟೆನಿಕುಮದಿಲ್ಲಾಗಿ ॥
ಕೃತ್ಯಮೊಂದಿಲ್ಲವೆಂದೆನಲದರಿಂದವೆ।
ಪ್ರತ್ಯಗಾತ್ಮಂಗೆ ವಿಲಯವಕ್ಕು ॥ 8 ॥

ಒಳ ಹೊರಗೆಂಬ ಭೇದವೆ ಕರ್ಮವು. ಅದು (ಕರ್ಮವು) ಅಜ್ಞಾನ ಉಪಾಧಿಯ ಮೂಲಕ ತೋರುವದು. ಅಜ್ಞಾನವಿಲ್ಲದ್ದರಿಂದ ಕರ್ಮವೆಂಬುದೇ ಇಲ್ಲ. ಕರ್ಮವೊಂದಿನಿಸು ಇಲ್ಲವೆಂದು ತಾನು ಸುಮ್ಮನಿರಲು ಅದೇ ಪ್ರತ್ಯಗಾತ್ಮ ವಿಲಯವೆಂದೆನಿಸುವದು.

ಇಂತು ಕರ್ತಾದಿ ಭಾವನೆ ತನ್ನೊಳಳಿದಂದು।
ಕಾಂತೆ ತಾನೆ ಬ್ರಹ್ಮವೆನಿಪುದು॥
ಸಂತರೆಲ್ಲರ ಮತವಹುದೆಂದು ತಿಳಿವುದೋ।
ರಂತೆ ವಿಶ್ವಾಸದೊಡನೆ ಕೂಡಿ॥ 9 ॥

ತನ್ನಲ್ಲಿ ತೋರುವ ಕರ್ತಾದಿ ಭಾವನೆಗಳೆಲ್ಲ ಮಿಥ್ಯೆಯಾಗಿರುವವು. ಅವುಗಳ ಉತ್ಪತ್ತಿ ನಾಶಾದಿಗಳಿಗೆ ಸಾಕ್ಷಿಯಾದ ನಾನು ಪರಬ್ರಹ್ಮ ಸ್ವರೂಪನಿರುವೆನೆಂದು ತಿಳಿಯತಕ್ಕದ್ದು. ಪರಮ ವಿಶ್ವಾಸದೊಡಗೂಡಿ ಹೀಗೆ ತಿಳಿಯುವದು ಸಂತರೆಲ್ಲರಿಗೆ ಸಮ್ಮತವಾಗಿದೆ.

– ಇತಿ ಯೋಗೀಶ್ವರಂಗೆ ಕರ್ತೃತ್ವಾದಿ ಜೀವಭಾವ ನಿಷೇಧ ನಿರೂಪಣೆ –

## 19ನೇ ಸೂತ್ರ

### ಆವರಣಂಗಳನಡಗಿಸಿನಿಂದ ನಿ-। ರಾವರಣವೆ ಪರಬ್ರಹ್ಮವು ॥

ಶರೀರ, ಮನ, ಬುಧ್ಯಾದಿ ಸಪ್ತಾವರಣಗಳನ್ನು ಲಯಗೊಳಿಸಿ ನಿಂದ ನಿಲವೆ ಆವರಣರಹಿತವಾದ ಪರಬ್ರಹ್ಮ ಸ್ವರೂಪವು.

ಪೆಸರಿನೇಳಾವರಣವನು ಮೂರಾವರ।
ಣ ಸಮಾಧಿಯನು ನಿರಾವೃತಿಯಾಗಿ॥
ಎಸೆವ ಪರಬ್ರಹ್ಮವನು ಮುದ್ರೆಗಳನು ನಾ।
ನುಸುರುವೆನಬಲೆ ನೀನಾಲಿಸು॥ 1 ॥

ಶರೀರಾದಿ ಏಳಾವರಣಗಳನ್ನು ಇಂದ್ರಿಯಾದಿ ಮುರಾವರಣಗಳನ್ನು ಅಡಗಿಸಿದಾಗ ಯಾವ ಸಮಾಧಿ ಸ್ಥಿತಿಯುಂಟೋ ಅದನ್ನು, ನಿರಾವರಣದಿಂದ ಶೋಭಿಸುವ ಪರಬ್ರಹ್ಮವನ್ನು ಮತ್ತು ಸಮಾಧಿ ಸ್ಥಿತಿಗೆ ಸಾಧನಗಳಾದ ಮುದ್ರೆಗಳನ್ನು ವಿವರಿಸುವೆನು, ಹೇ ಸ್ತ್ರೀಯಳೆ, ಅದನ್ನು ನೀನು ಸಾವಧಾನವಾಗಿ ಕೇಳಿ ತಿಳಿ.

ತನು ಮೊದಲಾದ ವಿಷಯವಿಂದ್ರಿಯಾಳಿಗ।
ಳನಿತನು ಮನದೊಳಾ ಮನವನು॥
ಘನಬುದ್ಧಿಯೊಳಗದ ನಹಮಿನೊಳದನು ಮಾ।
ನಿನಿ ಚಿತ್ತದೊಳು ಲಯಿಸುವದದೆನಿನ್ನು॥ 2 ॥

ತನು ಮೊದಲಾದ ವಿಷಯಗಳು ಇಂದ್ರಿಯ ಸಮೂಹವು ಇವುಗಳನ್ನು ಮನದೊಳಗೆ, ಆ ಮನವನ್ನು ಮಹತ್ತಾದ ಬುದ್ಧಿಯೊಳಗೆ, ಆ ಬುದ್ಧಿಯನ್ನು ಅಹಮಿನೊಳಗೆ, ಅದನ್ನು ಚಿತ್ತದಲ್ಲಿ ಲಯಿಸಬೇಕು ಇನ್ನು.

ಜ್ಞಾತೃವಿನೊಳಗದನುರೆ ಮಾಯಾತನುವಿನೊ।
ಳಾ ತನುವನು ಬ್ರಹ್ಮಪದದೊಳು ॥
ಸಾತಿಶಯಾನುಗತಿಯೊಳಡಗಿಸಿ ಶುದ್ಧ।
ಚೈತನ್ಯರೂಪದಿಂದಿರು ನೀರೆ ॥ 3 ॥

ಚಿತ್ತವನ್ನು ಜ್ಞಾತೃವಿನಲ್ಲಿ ಅದನ್ನು ಮಾಯಾ ತನುವಿನಲ್ಲಿ ದೊಡ್ಡದರಲ್ಲಿ ಸಣ್ಣದನ್ನು ಕ್ರಮವಾಗಿ ಅಡಗಿಸಿ ಕೊನೆಗೆ ಆತನುವನ್ನು ಬ್ರಹ್ಮದಲ್ಲಿ ಲಯಮಾಡಿ, ಶುದ್ಧ ಚೈತನ್ಯರೂಪ ಬ್ರಹ್ಮವಾಗಿ ನೀರೆ ನೀನಿರು.

ಮನದೊಳಿಂದ್ರಿಯವನಾ ಮನವನೆ ಬುದ್ಧಿಯೊ।
ಳನಿಸುದೋರಿಕೆಯಿಲ್ಲಡಗಿಸಿ ॥
ಘನಸಚ್ಚಿದಾನಂದಮಯ ಪರಬ್ರಹ್ಮವೆಂ।
ದೆನಿಸಿ ನೀನಿರ್ಪುದಂಬುಜನೇತ್ರೆ ॥ 4 ॥

ಇಂದ್ರಿಯಗಳನ್ನು ಮನಸ್ಸಿನಲ್ಲಿ, ಆ ಮನವನ್ನು ಬುದ್ಧಿಯಲ್ಲಿ, ಬುದ್ಧಿಯನ್ನು ಪರಬ್ರಹ್ಮದಲ್ಲಿ ಅಡಗಿಸಿ, ಕಮಲಸದೃಶ ನೇತ್ರವುಳ್ಳ ಮೈತ್ರೇಯಿ, ಪೂರ್ಣ ಸಚ್ಚಿದಾನಂದಮಯ ಪರಬ್ರಹ್ಮಸ್ವರೂಪ ನೀನಾಗಿರುವದು.

ಮನದಿನಾರಯ್ಯದಾ ಮನವನರಿವ ತನ್ನ।
ನಿನಿಸುದೋರಿಕೆಯಿಲ್ಲದಡಗಿಸಿ ॥
ಅನುಪಾದಿಕನುಮೆನಿಸಿದೊಡೆ ತಾನಲ್ಲಿ ಚಿ।
ದ್ಘನ ಪರಬ್ರಹ್ಮರೂಪೆನಿಸಿರ್ಕು ॥ 5 ॥

ಮನಸ್ಸಿನಿಂದ ಯಾವ ವಿಷಯವನ್ನು ಚಿಂತಿಸದೆ, ಆ ಮನಸ್ಸನ್ನು ತಿಳಿಯುವ ಚಿದಾಭಾಸರೂಪ ತನ್ನನ್ನು ಒಂದಿನಿತು ತೋರಿಕೆಯಿಲ್ಲದಂತೆ ಲಯಗೊಳಿಸಬೇಕು. ಆದರಿಂದ ನಿರುಪಾಧಿಕನು ತಾನಾಗಿ ವ್ಯಾಪಕವಾದ ಚಿದ್ರೂಪ ಪರಬ್ರಹ್ಮನೆನಿಸಿ ತಾನಿರಬೇಕು.

ಅರಿವೆ ತಾನೆಂದರಿದರಿವೆಂಬುದೇನೆಂದು।
ವರಿಯದೆ ಬರಿದೆ ತನ್ನಲ್ಲಿಯೆ ॥
ನೆರೆ ಲೀಯವಾಗಿ ಸ್ಥೈತಿರ್ದುದನೊಲಿದು ನೀ।
ನರಿ ಪರಬ್ರಹ್ಮರೂಪವದೆಂದು ॥ 6 ॥

ಶುದ್ಧಚೈತನ್ಯವೇ ತಾನೆಂದು ಅರಿದ ಅರಿವದು ಏನೆಂಬುದೆನು ಅರಿಯದೆ ಸುಮ್ಮನೆ ತನ್ನೊಳಗೆ ತಾನು ಪೂರ್ಣ ಲೀನವಾಗಿ (ಯಾವ ಕಲ್ಪನೆಗಳಿಲ್ಲದೆ) ಪ್ರಶಾಂತವಾಗಿರುವದನ್ನು ಪರಬ್ರಹ್ಮಸ್ವರೂಪವೆಂದು ನೀನು ಮನಸಾರೆ ತಿಳಿ.

ಕರವೆರಡನು ತಳುಕೆನಿಸಿ ಪಿಡಿದು ಬಿಗಿ।
ದಿರಿಸಿ ಮೇಲಂಗುಷ್ಠ ಯುಗವನು ॥
ಚಿರಸುಖಮಿಹುದದೆ ಶ್ರೀಪಾದ ಮುದ್ರೆಯೆಂ।
ದೊರೆವರಖಿಳ ಮನುಮುನಿಗಳು ॥ 7 ॥

ಎರಡೂ ಕೈಬೆರಳುಗಳನ್ನು ತಳುಕು ಹಾಕಿ ಹಿಡಿದು ಬಿಗಿಯಾಗಿ ಇಟ್ಟು ಮೇಲೆ ಹೆಬ್ಬೆರಳುಗಳನ್ನು ಸದಾಸುಖದಿಂದಿರಿಸುವದೇ ಶ್ರೀಪಾದ ಮುದ್ರೆಯೆಂದು ಸರ್ವ ಮುನೀಶ್ವರರು ಬೋಧಿಸುವರು.

ಕರಯುಗ ಮೂರ್ಧ್ವ ಮುಖದೊಳೊಂದಿ ಪತ್ತಿಸೈ।
ತಿರೆ ಪಿಡಿದೆಸೆದಿರ್ಪುದದು ತಾನೆ॥
ವರವಂದನಾ ಮುದ್ರೆಯೆನಿಪುದು ಕೇಳೆನ್ನ।
ಹರಣವೆ ಮೈತ್ರೇಯಿ ಮುದದಿಂದ ॥ 8 ॥

ಎರಡು ಕೈಗಳು ಮೇಲ್ಮುಖವಾಗಿ ಒಂದಕ್ಕೊಂದು ಹತ್ತಿರುವಂತೆ ಹಿಡಿದು ಶೋಭಾಯಮಾನವಾಗಿರುವದೇ ಶ್ರೇಷ್ಠವಾದ ವಂದನಾ ಮುದ್ರೆಯೆಂದು ನನ್ನ ಪ್ರಾಣವೇ ಆದ ಮೈತ್ರೇಯಿ ನೀನು ಸಂತೋಷದಿಂದ ಕೇಳಿ ಚನ್ನಾಗಿ ತಿಳಿದುಕೊ.

ಬಳಿಕವಂಗುಷ್ಠ ತರ್ಜನಿಗಳ ತುದಿಗೂಡಿ।
ಬಲದ ಮೇಲ್ಸೆ ವಾಮಪಾಣಿಯ ॥
ತಳದೊಳೊಂದಿರಲದೆ ಜ್ಞಾನಾಖ್ಯಮುದ್ರೆಯೆಂ।
ದೆಳಸಿ ಮೈತ್ರೇಯಿ ನೀನರಿವುದು ॥ 9 ॥

ಅನಂತರ ಹೆಬ್ಬೆರಳು ಮತ್ತು ಅದರ ಹತ್ತಿರವಿದ್ದ ಬೆರಳು (ತರ್ಜನಿ)ಗಳ ತುದಿಗಳನ್ನು ಕೂಡಿಸಿ ಬಲದ ಕೈ ಮೇಲೆ ಮಾಡಿ ಎಡಗೈಯ ಅಂಗೈಯಲ್ಲಿ ಇಟ್ಟಿರುವದೇ ಜ್ಞಾನಮುದ್ರೆಯೆಂದು ಮೈತ್ರೇಯಿ ನೀನು ಒಲವಿನಿಂದ ಅರಿತುಕೊಳ್ಳಬೇಕು.

ಪರತತ್ತ್ವದೊಳು ಮನೋವಾಯು ವೃತ್ತಿಗಳಡ।
ಗಿರೆ ತಾರೆ ನಿಲಲನಿಮಿಷಮಾಗಿ ॥
ತರಹರಮಾದುದೆ ಶಾಂಭವಿ ಮುದ್ರೆ ಖೇ।
ಚರಿಯೆಂಬ ಮುದ್ರೆ ನೋಡದು ತಾನೆ ॥ 10 ॥

ಪರಬ್ರಹ್ಮ ಸ್ವರೂಪದಲ್ಲಿ ಮನಸ್ಸು ಮತ್ತು ಪ್ರಾಣ ಇವುಗಳ ವೃತ್ತಿಗಳನ್ನು ಅಡಗಿಸಿ ಧ್ಯಾನ ಮತ್ತು ಪ್ರಾಣಾಯಾಮದಿಂದ ಅವನು ನಿರೋಧಿಸಿ ತಾರೆ ಅಂದರೆ ಕನೀನ ಅಥವಾ ದೃಷ್ಟಿ ಮಂಡಲವು (ಕಣ್ಣುಗುಡ್ಡೆ) ಚಂಚಲವಾಗದಂತೆ ಶಾಂತವಾಗಿರಿಸುವದೇ ಶಾಂಭವಿ ಅಥವಾ ಖೇಚರಿ ಮುದ್ರೆಯೆಂದು ಹೇಳಿಸಿಕೊಳ್ಳುವದು.

– ಇತಿ ಯೋಗೀಶ್ವರನಿಗೆ ಬ್ರಹ್ಮಾನು ಸಂಧಾನ ಕ್ರಮ ನಿರೂಪಣೆ –

## 20ನೇ ಸೂತ್ರ

**ಕೇಳು ಬಳಿಕ ಪಂಚಯೋಗವಿವನು ಮಾಡ ।**
**ಲಾಳಲಹುದು ಮುಕ್ತಿಪದವನು ॥**

ಮುಂದೆ ಹೇಳುವ ಮಂತ್ರಾದಿ ಐದು ಯೋಗಗಳನ್ನು ಅಭ್ಯಾಸ ಮಾಡಿದರೆ, ಅವನು ಖಂಡಿತವಾಗಿ ಮುಕ್ತಿಸಾಮ್ರಾಜ್ಯವನ್ನು ಆಳಬಲ್ಲನು. ಮೈತ್ರೇಯಿ ನೀನು ಇದನ್ನು ಕೇಳಿ ತಿಳಿದುಕೊ.

**ಒಂದೆರಡಾರೆಂಟು ವರ್ಣದ ಮನುಗಳ ।**
**ಛಂದವನರಿದೆಳಸಿದುದನು ॥**
**ಕುಂದದೆ ಜಪಿಸುತಿರಲು ಮಂತ್ರಯೋಗವಿ ।**
**ದೆಂದು ಪೇಳ್ವರು ಸಂಯಮಿಗಳೆಲ್ಲ ॥ 1 ॥**

ಓಂ ಎಂಬ ಒಂದಕ್ಷರ, ಹರ ಅಥವಾ ಹಂಸವೆಂಬ ಎರಡಕ್ಷರದ, ಓಂ ನಮಶ್ಶಿವಾಯವೆಂಬ ಆರಕ್ಷರದ ಅಥವಾ ಎಂಟಕ್ಷರದ ಮಂತ್ರವಾಗಲಿ ತನ್ನ ಮನಸ್ಸಿಗೆ ಬಂದ (ಅಥವಾ ಗುರೂಪದಿಷ್ಟ) ಯಾವದೇ ಮಂತ್ರವನ್ನು ಗ್ರಹಿಸಿ ಕೊರತೆಯಿಲ್ಲದೆ ಜಪಿಸಬೇಕು. ಇದಕ್ಕೂ ಮೊದಲು ಆ ಮಂತ್ರದ ಛಂದಸ್ಸು, ಶಕ್ತಿ, ದೇವತಾ ಮೊದಲಾದವುಗಳನ್ನು (ಪರಮಾರ್ಥ ಪ್ರಕಾಶದಲ್ಲಿ ಹೇಳಿದ ಪ್ರಕಾರ) ತಿಳಿದು ಜಪಿಸುತ್ತಿರಬೇಕು. ಇದೇ ಮಂತ್ರಯೋಗವೆಂದು ಯತಿಗಳು ಹೇಳುತ್ತಾರೆ.

**ನಾದದ ನಿಜದೊಳಾಗಲಿ ಬಿಂದುವಿನ ರಮ್ಯ ।**
**ವಾದ ರೂಪದೊಳಾಗಲಸುಗೂಡಿ ॥**
**ಭೇದವಳಿದು ಮನವಿರೆ ಲಯಯೋಗವೆಂ ।**
**ದೋದಿ ಸೂರಿಗಳು ಸೂಚಿಸುವರು ॥ 2 ॥**

ಶ್ರೋತ್ರದಲ್ಲಿರುವ ಅನಾಹತನಾದದಲ್ಲಾಗಲೀ ನೇತ್ರದ ಜ್ಯೋತಿರೂಪ ಪ್ರಕಾಶದ (ಬಿಂದು) ಸುಂದರವಾದ ರೂಪದಲ್ಲಾಗಲೀ ಪ್ರಾಣ ಸಹಿತವಾಗಿ ಭೇದವಿಲ್ಲದೆ ಮನಸ್ಸು ಲಯಹೊಂದಲು ಅದಕ್ಕೆ ಜ್ಞಾನಿಗಳು ಲಯಯೋಗವೆಂದು ಹೇಳುವರು.

**ಹವಣಿಸಿದಷ್ಟಾಂಗದಿಂದೆ ಕರಣಮುದ್ರಾ ।**
**ನಿವಹದಿಂ ಬರಿಯ ಕುಂಭಕದಿಂದ ॥**
**ಪವನದ ವಿಜಯವೆ ಹಠಯೋಗವಪ್ಪುದೆಂ ।**
**ದವಿಚಲ ಮತಿಗಳೂಹಿಸುವರು ॥ 3 ॥**

ಯಮ ನಿಯಮಾದಿ ಅಷ್ಟಾಂಗಗಳಿಂದಲೂ, ಧೌತಿ, ನೇತಿ ಇತ್ಯಾದಿ ಆರು ಕರಣಗಳಿಂದಲೂ ಖೇಚರಿ ಮೊದಲಾದ ಮುದ್ರೆಗಳ ಸಮೂಹದಿಂದಲೂ ಮತ್ತು ಕೇವಲ

ಕುಂಭಕದಿಂದಲೂ ಪ್ರಾಣವಾಯುವನ್ನು ನಿರೋಧಿಸುವದಕ್ಕೆ ಹಠಯೋಗವೆಂದು ಸ್ಥಿರಮತಿಗಳು ತಿಳಿಯುವರು.

ಅರಿವಿನಿಂದೊಳ ಹೊರಗಣ ಮೂರು ಲಕ್ಷ್ಯದಿಂ।
ದರಿದು ತತ್ತ್ವವನು ಮಾನಸವೃತ್ತಿ।
ಕರಿಗೊಂಡು ನಿಂದೊಡನೆ ರಾಜಯೋಗವೆಂ।
ದರುಹಿ ತೋರುವ ರಚ್ಚೆಸುಖಿಗಳು ॥ 4 ॥

ಜ್ಞಾನದಿಂದಲೂ, ಅಂತರ್ಲಕ್ಷ್ಯ ಮಧ್ಯಲಕ್ಷ್ಯ ಬಾಹ್ಯಲಕ್ಷ್ಯವೆಂಬ ಮೂರು ಲಕ್ಷ್ಯದಿಂದಲೂ ತನ್ನ ಸ್ವರೂಪವಾದ ಪರಬ್ರಹ್ಮನನ್ನು ಅರಿತು ಮನೋವೃತ್ತಿಯು ಹೊಯ್ದಾಡದೆ ನಿಶ್ಚಲವಾಗಿ ಇದ್ದುದಾದರೆ, ದುಃಖಮಿಶ್ರಿತವಲ್ಲದ (ಆತ್ಮ) ಸುಖವನ್ನು ಅನುಭವಿಸಿದವರು ತಿಳಿಸಿಕೊಡುವರು.

ಗುರುಶಂಭುಲಿಂಗದರ್ಚನೆ ಯನುಸಂಧಾನ।
ವರವಿದ್ಯಾ ಭಕ್ತಿ ಸುವ್ರತವೈದು ॥
ನಿರುತದಿಂದಳವಟ್ಟುದನೆ ಶಿವಯೋಗವೆಂ।
ದೊರೆವರೊಲಿದು ವೇದವಿದುಗಳು ॥ 5 ॥

ಗುರುರೂಪನಾದ ಶಂಭುಲಿಂಗದ ಪೂಜೆ (ಟಿ–1) ಸಚ್ಚಿಂತನರೂಪ ಅನುಸಂಧಾನ, (ಟಿ–2) ತನ್ನ ಸ್ವರೂಪವನ್ನು ಅರಿಯುವಜ್ಞಾನ, (ಟಿ–3) ಅಭೇದ ಚಿಂತನರೂಪ ಭಕ್ತಿ (ಟಿ–4) ಶಂಭುಲಿಂಗದೊಡನಗಲದೆ ಸದಾ ಐಕ್ಯಭಾವದಿಂದ ಇರುವ ಸುವ್ರತ, (ಟಿ–5) ಈ ಐದು ನಿತ್ಯ ಪ್ರಾಪ್ತವಾದದ್ದನ್ನೇ ಶಿವಯೋಗವೆಂದು ವೇದ ಬಲ್ಲವರು ಸಂಪ್ರೀತರಾಗಿ ತಿಳಿಸುವರು.

1. [ ಟಿಪ್ಪಣಿ :– ಪೀಠ, ಗೋಮುಖ ಮೊದಲಾದವುಗಳಲ್ಲಿ ಬಿಂದುನಾದ ಕಲೆಗಳನ್ನು ಅನುಸಂಧಾನ ಮಾಡುತ್ತ ಇಷ್ಟವನ್ನು ಪೂಜಿಸುವದು. ] 2. [ ಟಿಪ್ಪಣಿ :– ಬಳಿಕ ಇಷ್ಟ ಪ್ರಾಣಭಾವ ಲಿಂಗಗಳದ್ವಾರಾ ಮಹಾಲಿಂಗವನ್ನು ಲಕ್ಷಿಸುವದೇ ಅನುಸಂಧಾನವು. ] 3. [ ಟಿಪ್ಪಣಿ:– ಅಂಥ ಮಹಾಲಿಂಗ ಅಥವಾ ಪರಬ್ರಹ್ಮದ ಸ್ವರೂಪವನ್ನು ಗುರುಮುಖದಿಂದಲೂ, ಆಗಮ ಪ್ರಮಾಣದಿಂದಲೂ ಸ್ವಾನುಭವದಿಂದಲೂ ತಿಳಿಯುವದೇ ವರಜ್ಞಾನವು. ] 4. [ ಟಿಪ್ಪಣಿ :– ಬಳಿಕ ಅದು ತನಗಿಂತಲೂ ಬೇರೆ ಅಲ್ಲ, ಅದೇ ನಾನೆಂದು ನಿಶ್ಚಲವಾಗಿ ತಿಳಿಯುವದೇ ಭಕ್ತಿ ] 5. [ ಟಿಪ್ಪಣಿ :– ಅದರಲ್ಲಿ ಸಂಶಯಾದಿಗಳು ಉದಯವಾಗದೆ, ಅದರಿಂದ ವಿಯೋಗ ಹೊಂದದೆ ಆ ಶಂಭುಲಿಂಗವೇ ತಾನೆಂಬ ಸ್ವಪ್ನಜಾಗ್ರಿಯು ಅಡಗಿ, ಉಳಿದ ಉಳುಮೆಯ ರೂಪವಾಗಿರುವದೇ ಸುವ್ರತವು. ]

— ಇತಿ ಯೋಗೀಶ್ವರನಿಗೆ ಮಂತ್ರಾದಿ ಯೋಗಪಂಚಕ ನಿರೂಪಣೆ —

## 21ನೇ ಸೂತ್ರ

ತಿಳಿದು ಸುದೇಶಂಗಳೊಳಗೈದುಕಾಲದೊ ।
ಳೆಳಸಿ ಮಾಳ್ಪುದು ಸಮಾಹಿತೆಯನು ॥

ಒಳ್ಳೇ ದೇಶ ಹಾಗೂ ಒಳ್ಳೇ ಕಾಲವನ್ನು ಶ್ರುತಿ ಮತ್ತುಗುರುಗಳಿಂದ ತಿಳಿದು ನಿತ್ಯ ಐದು ಸಮಯಗಳಲ್ಲಿ ಪ್ರೀತಿಯಿಂದ ಸಮಾಧಿಯನ್ನು ಯೋಗಿ ಅನುಷ್ಠಾನ ಮಾಡತಕ್ಕದ್ದು

ಕಮಲಾಕ್ಷಿ ದೇಶ ನಿಯಮವನಾ ಕಾಲ ನಿ ।
ಯಮವನಾ ಯೋಗಿಗೆ ವಿಧಿಯಿಂದೆ ॥
ವಿಮಲ ಸಮಾಧಿ ಸುಸ್ಥಿತಿಗೆ ಕಾರಣಮಾಗಿ ।
ಕ್ರಮದಿಂದೆ ಪೇಳ್ವೆನಾಲಿಸು ನೀರೆ ॥ 1 ॥

ಕಾಲನಿಯಮ ಮತ್ತು ದೇಶನಿಯಮ ನಿರ್ಮಲವಾದ ಸಮಾಧಿಯ ಸುಸ್ಥಿತಿಗೆ ಕಾರಣವಾದ ಕಟ್ಟಳೆ ಇರುವದರಿಂದ, ಕಮಲ ಸದೃಶ ಕಣ್ಣುಳ್ಳ ಮೈತ್ರೇಯಿ, ನಾನು ಕ್ರಮವಾಗಿ ಅವುಗಳನ್ನು ವಿವರಿಸುವೆನು ನೀನು ಲಕ್ಷವಿಟ್ಟು ಕೇಳು.

ಗಿರಿ, ಪುಣ್ಯ ತೀರ್ಥ, ಸಾಗರ, ಶಿವಗ್ರಹ ಗೋಷ್ಠ ।
ವರ ನಿಜಭವನಾದಿಗಳು ರಮ್ಯ ॥
ಕರವೆನಿಸಿರಲದೆ ತಿಳಿ ಸುದೇಶಂಗಳೆಂ ।
ದೊರೆವುದಾ ಶ್ರುತಿ ಯೋಗಿಗೊಲವಿಂದ ॥ 2 ॥

ಶ್ರೀಶೈಲಾದಿ ಪುಣ್ಯ ಪರ್ವತಗಳು, ಕಾಶಿ ಮೊದಲಾದ ಪವಿತ್ರ ಕ್ಷೇತ್ರಗಳು, ದೇವಮಂದಿರಗಳು, ಗೋಶಾಲೆಗಳು, ಪ್ರಶಸ್ತವಾದ ಸ್ವಂತ ಮನೆ ಮೊದಲಾದವುಗಳು ಮನೋಹರವಾಗಿದ್ದು ವಿಘ್ನಕರವಾಗಿರದಿದ್ದರೆ, ಯೋಗಿಗಳ ಸಮಾಧಿಗೆ ಅವೇ ಒಳ್ಳೇ ಸ್ಥಾನಗಳೆಂದು ಶ್ರುತಿಯು ಪ್ರೀತಿಯಿಂದ ಸಾರಿ ಹೇಳುವದು.

ತಿಳಿಯರುಣೋದಯವನು ಸಂಧ್ಯಾತ್ರಯವನು ।
ಬಳಿಕ ನಿದ್ರಾದಿ ಸಮಯವನು ॥
ಕಳಹಂಸಗಮನೆ ಯೋಗಿಗೆ ಸಮಾಹಿತೆಯೊಳು ।
ಸಲುವೈದು ಕಾಲವೆಂದಿವನಿಂತು ॥ 3 ॥

ರಾಜ ಹಂಸದಂತೆ ಗಮನವುಳ್ಳ ಮೈತ್ರೇಯಿ, ಅರುಣೋದಯ, (ಟಿ–1) ಸಂಧ್ಯಾತ್ರಯ ಅಂದರೆ ಸೂರ್ಯೋದಯ, ಮಧ್ಯಾಹ್ನ ಮತ್ತು ಸೂರ್ಯಾಸ್ತವೆಂಬ ತ್ರಿಕಾಲಗಳು ಮತ್ತು ನಿದ್ರಾಸಮಯ (ಟಿ–2) ಹೀಗೆ ಐದು ಸುಸಮಯಗಳು ಸಮಾಧಿಯನ್ನು ಆಚರಿಸಲು ಯೋಗ್ಯವಾದ ಕಾಲಗಳೆಂದು ನೀನು ತಿಳಿ.

1. [ ಟಿಪ್ಪಣಿ :– ಸೂರ್ಯೋದಯದ ಮೊದಲು ಅವನ ಸಾರಥಿ ಅರುಣನ ಉದಯವಾಗುವ ಸಮಯ. ] 2. [ ಟಿಪ್ಪಣಿ :– ನಿದ್ರಾವಸ್ಥೆ ಮತ್ತು ಜಾಗ್ರಾವಸ್ಥೆ ಇವೆರಡರ ಅಭಿಸಂಧಿಯಲ್ಲಿರುವ ಸಂಧ್ಯಾ ಸ್ಥಿತಿಗೆ ನಿದ್ರಾಸಮಯವೆನ್ನುವರು. ]

ವರಪಂಚ ಕಾಲದೊಳೆರಡು ಮುಹೂರ್ತವಾ।
ದರದಿಂದೆ ವಿರತಿಯೊಳಳವಟ್ಟು॥
ನಿರುತದೊಳೊಂದಿ ಸಮಾಧಿಯನೆಸಗಲ್ಕೆ।
ಪುರುಷಾರ್ಥವಿದು ಯೋಗಿ ಜನರಿಗೆ ॥ 4 ॥

ಮೇಲೆ ಹೇಳಿದ ಐದು ಸುಸಮಯಗಳಲ್ಲಿ ಎರಡು ಮುಹೂರ್ತ (ಟಿ) ಪರ್ಯಂತ ನಿಯಮಿತವಾಗಿ ನಿರ್ವಿಷಯಚಿತ್ತದಿಂದ ಪ್ರೀತಿಯೊಳೊಂದಿ ಸಮಾಧಿಯ ಅಭ್ಯಾಸವನ್ನು ಮಾಡಬೇಕು. ಹೀಗೆ ಸಾಧನ ಮಾಡಿ ಸಮಾಧಿಯನ್ನು ಸಾಧಿಸುವದು ಯೋಗಿ ಜನರ ಪರಮ ಪುರುಷಾರ್ಥವು.

ಇಂತು ಸಮಯವೈದರೊಳು ಸಮಾಧಿಗಳನೋ।
ರಂತೆ ಮಾಳ್ಪಧಿಕಾರಿ ಜನರಿಗೆ॥
ಮುಂತೆ ಮೂದೆರನಾಗಿ ತೋರುವ ಸೂಚನೆ।
ಯಂತವನೊರೆವೆನಾಲಿಸು ನೀರೆ ॥ 5 ॥

ಈ ಪ್ರಕಾರವಾಗಿ ಐದು ಸಮಯಗಳಲ್ಲಿ ಸಮಾಧಿಯನ್ನು ಸರಿಯಾಗಿ ಮಾಡುವ ಅಧಿಕಾರಿ ಸಾಧಕರಿಗೆ ಮುಂದಿನ ಸೂತ್ರದಲ್ಲಿ ಮೂರು ಪ್ರಕಾರವಾದ ಸೂಚನೆಗಳು ಕಂಡುಬರುವವು. ಲಾವಣ್ಯವತಿಯೆ ಅವುಗಳನ್ನು ನಾನು ವಿವರಿಸುವೆನು. ನೀನು ಚಿತ್ತಗೊಟ್ಟು ಕೇಳು.

[ ಟಿಪ್ಪಣಿ :– ಒಂದು ಮುಹೂರ್ತವೆಂದರೆ 48 ನಿಮಿಷ. ]

– ಇತಿ ಯೋಗೀಶ್ವರನಿಗೆ ಸಮಾಧಿಕಾಲ ಕ್ರಮ ನಿರೂಪಣೆ –

## 22ನೇ ಸೂತ್ರ

### ವನಿತೆ ಯೋಗಾಭ್ಯಾಸಿಗಳಿಗಾದಿಯೊಳು ಸೂಕ್ಷ್ಮ। ತನು ನಾದ ಸುಖಮಿವು ತೋರ್ಪುವು ॥

ಹೇ ಸ್ತ್ರೀಯಳೆ, ಯೋಗಾಭ್ಯಾಸವನ್ನು (ಮೇಲೆ ಹೇಳಿದಂತೆ) ಮಾಡುವ ಸಾಧಕರಿಗೆ ಪ್ರಾರಂಭದಲ್ಲಿ ಸೂಕ್ಷ್ಮ ಶರೀರ, ಘಂಟಾದಿಕ ನಾದಗಳು ಮತ್ತು ನಿರ್ವಿಷಯ ಸುಖವೆಂಬ ಸಂಜ್ಞೆಗಳು ಅವರವರ ಅಧಿಕಾರಕ್ಕನುಗುಣವಾಗಿ ತೋರುವವು.

ಮಂದ ಮಧ್ಯೋತ್ತಮರೆಂದಿಲ್ಲಿ ಮೂದೆರ।
ದಿಂದವಭ್ಯಾಸಿಗಳಿವರನು ॥
ಇಂದುವದನೆ ತೋರ್ಪ ಸೂಚನಾತ್ರಯದೊಡ।
ನೊಂದಿ ಕಾಣಿಸಲರಿವುದು ನೀನು ॥ 1 ॥

ಯೋಗಾಭ್ಯಾಸಿಗಳಲ್ಲಿ ಮಂದ, ಮಧ್ಯಮ ಉತ್ತಮ ಅಧಿಕಾರಿಯೆಂದು ಮೂರು

ಪ್ರಕಾರವಾಗಿರುವರು. ಚಂದ್ರಸದೃಶ ಮುಖವುಳ್ಳ ಮೈತ್ರೇಯಿ, ತೋರುವ ಮೂರು ತೆರನಾದ ಚಿಹ್ನಗಳಿಂದ ಗುರ್ತ್ಯಸಿ ನೀನು ಅವರನ್ನು ತಿಳಿ.

ನಿಯತವೆನಲು ಸೂಕ್ಷ್ಮತನು, ಘಂಟಾದಿಕ ನಾದ।
ಚಯ ವಚ್ಚಸುಖಮಿವಾ ಕ್ರಮದಿಂದ॥
ಪ್ರಿಯತಮೆ ಮಂಧ ಮಧ್ಯೋತ್ತಮರೊಳು ಚಿಹ್ನ।
ತ್ರಯವೆಂದು ನೀನವಧರಿಪುದು ॥ 2 ॥

ಪ್ರಿಯಳಾದ ಪತ್ನಿಯೆ, ಸೂಕ್ಷ್ಮತನು, (ಟಿ) ಘಂಟಾದಿ ನಾದಗಳು, ದುಃಖಮಿಶ್ರಿತವಲ್ಲದ ಸುಖವು ಮಂದ, ಮಧ್ಯಮ ಮತ್ತು ಉತ್ತಮರಲ್ಲಿ ಕ್ರಮವಾಗಿ ಈ ಮೂರು ಚಿಹ್ನಗಳಿಂದ ಅವರನ್ನು ನೀನು ತಿಳಿದುಕೊಳ್ಳತಕ್ಕದ್ದು.

ಮಾಸವೀರಾರು ಮಾಸವರಿಯೆ ಮೂರು।
ಮಾಸವಾ ಮಂದಾದಿ ಮೂವರ್ಗೆ॥
ಲೇಸೆನಿಪಂತನುಗತಿ ವಿಧಿಯೊಳು ಯೋಗಾ।
ಭ್ಯಾಸವೆ ಕರಣೀಯವಿದು ಸತ್ಯ ॥ 3 ॥

ಮಂದ, ಮಧ್ಯ ಮತ್ತು ಉತ್ತಮರಾದ ಮೂವರು ಅಧಿಕಾರಿಗಳು ಕ್ರಮವಾಗಿ ಹನ್ನೆರಡು ತಿಂಗಳು, ಮೂರು ತಿಂಗಳು, ಒಂದು ತಿಂಗಳು ಕಾಲದವರೆಗೆ ವಿಧಿಸಿದ ರೀತಿಯಲ್ಲಿ ಯೋಗಾಭ್ಯಾಸವನ್ನು ಮಾಡತಕ್ಕದ್ದಾಗಿದೆ. ಇದನ್ನು ಸತ್ಯವಾಗಿ ವಿಧಿಸಿದೆ.

ನಿಯತದಿಂದಭ್ಯಾಸ ಕ್ರಿಯೆಯನಿಂ ತೊಲಿದನು।
ನಯವನುಳಿಯದೆ ಮಾಳ್ಪವರಿಗೆ॥
ಪ್ರಿಯತಮೆ ಕೇಳಹುದಾಗಲಾರೂಢತೆ।
ಕ್ರಿಯೆ ಬಳಿಕೊಂದು ಮಿಲ್ಲಿದು ನಿಜ ॥ 4 ॥

ಈ ಪ್ರಕಾರವಾಗಿ ಯೋಗಾಭ್ಯಾಸವನ್ನು ನಿಯಮಿತವಾಗಿ ಆಸಕ್ತಿದಳೆದು ವಿನಯಶೀಲರಾಗಿ ಮಾಡುವ ಅಧಿಕಾರಿಗಳಿಗೆ ಹೇಳಿದೆ. ಆದರೆ ಪ್ರಿಯ ಸತಿಯೆ ಕೇಳು ಆರೂಢನು ಮಾಡತಕ್ಕಯಾವ ಕರ್ತವ್ಯವೂ ಉಳಿಯುವದಿಲ್ಲವೆಂಬುದು ನಿಜವು.

[ ಟಿಪ್ಪಣಿ :– ವರ ಯೋಗಿಗಳಿಗೆ ಸೂಕ್ಷ್ಮ(ಅಥವಾ ಲಿಂಗ) ಶರೀರ ಕಾಣಸುವದು. ಶ್ರೀ ಗುರುದೇವ ಆತ್ಮಾನಂದರಿಗೆ ಸೂಕ್ಷ್ಮದೇಹದಿಂದ ಸಂಚರಿಸುವ (ಅನ್ಯರನ್ನು ಪೀಡಿಸುವ) ಪಿಶಾಚಿಗಳು ಕಾಣಿಸುತ್ತಿದ್ದವು. ಆವರ ಪೂಜ್ಯ ಪಿತರಾದ ಶ್ರೀ ಶಿವಾನಂದಸ್ವಾಮಿಗಳು ಪ್ರವಚನ ಕಾಲಕ್ಕೆ ದೇವತೆಗಳು ಸೂಕ್ಷ್ಮದೇಹದಿಂದ ಸಾಲಾಗಿ ನಿಂತು ಆಲಿಸುವದನ್ನು ಕಣ್ಣಾರೆ ಕಂಡಿದ್ದಾರೆ. ಸೂಕ್ಷ್ಮಶರೀರವೆಂದರೆ ತಮ್ಮ ಶರೀರವು ಹಗುರಾಗುವದು, ಹಾಗೂ ಪಾದುಕಾ ಸಿದ್ಧಿಯಾಗುವದು. ಎಂದು ಕೆಲ ಯೋಗಿಗಳು ಅರ್ಥೈಸುವರು. ]

— ಇತಿ ಯೋಗಾಧಿಕಾರಿ ಭೇದ ಸೂಚನೆ ನಿರೂಪಣೆ —

## 23ನೇ ಸೂತ್ರ

ಊಟಕ್ಕೆ ವಿಷಯಕ್ಕೆ ಮರಗುತಿಪ್ಪಾತಂಗೆ ।
ಕೂಟವಪ್ಪುದೇ ಶಿವಪದದೊಳು ॥

ಮೃಷ್ಟಾನ್ನ ಭೋಜನಕ್ಕೆ ಮತ್ತು ವಸ್ತ್ರ ವಾಹನ, ವನಿತಾದಿ ವಿಷಯಗಳಿಗೆ ಮನದಲ್ಲಿ ಕೊರಗುವ ಯೋಗಾಭ್ಯಾಸಿಗೆ ಶಿವಸುಖರೂಪ ಸ್ವಸ್ವರೂಪದಲ್ಲಿ (ಅಂದರೆ ಪರಬ್ರಹ್ಮದಲ್ಲಿ) ಐಕ್ಯ ಸಿದ್ಧಿಸಲಾರದು.

ಜಲಜಾಕ್ಷಿ ಮೈತ್ರೇಯಿ ಯಲಸದಭ್ಯಾಸವ।
ನೊಲಿದು ಮಾಳ್ಪಾತನಾ ಸ್ತುತಿ ನಿಂದೆ॥
ಗೆಲವಪಜಯಮಿವರೊಳು ಸಮತಾ ಬುದ್ಧಿ।
ನಿಲೆ ಭಿಕ್ಷಾಟನವನಾಚರಪನು ॥ 1 ॥

ಕಮಲಾಕ್ಷಿ ಮೈತ್ರೇಯಿ, ಯೋಗೀಶ್ವರನು ಭಿಕ್ಷಾಟನ ಮಾಡುವ ಕಾಲಕ್ಕೆ ಕೆಲವರು ಅವನನ್ನು ಸ್ತುತಿಸಿ ವಂದಿಸುವರು. ಕೆಲವರು ನಿಂದಿಸಿ ಅಪಮಾನ ಮಾಡುವರು. ಕೆಲವೆಡೆ ಭಿಕ್ಷೆ ನೀಡುವರು ಕೆಲವೆಡೆ ನೀಡದೆ ಕಳಿಸುವರು. ಇವರಿಂದ ಯೋಗಿಯು ಈ ಸ್ತುತಿ ನಿಂದೆಗಳಿಗೆ ಅಲಸದೆ ಸಮಬುದ್ಧಿಯಿಂದ ತನ್ನ ಯೋಗಾಭ್ಯಾಸವನ್ನು ನಲ್ಮೆಯಿಂದ ಮಾಡುತ್ತ ಭಿಕ್ಷಾಟನವ್ರತ ಆಚರಿಸುವನು.

ಪರಮ ಸಜ್ಜನರ ಸತ್ಪುರುಷರ ಸದ್ಧರ್ಮ।
ಪರರ ಭಕ್ತರ ಗೃಹಂಗಳನೈದಿ॥
ತರಹರದೊಡನೆ ಭೈಕ್ಷೆಯನೊಲವಿಂದವಾ।
ಚರಿಸುಗಭ್ಯಾಸದ ದೆಶೆಯೊಳು ॥ 2 ॥

ಯೋಗಿಯು ಯೋಗಾಭ್ಯಾಸದ ಕಾಲದಲ್ಲಿ ಶಾಂತಿ ಸಮಾಧಾನದಿಂದ ಭಿಕ್ಷಾಟಣೆಯನ್ನು ಮಾಡುವನು. ಪರಮ ಸಜ್ಜನರ, ಮಹಾತ್ಮರ, ಧರ್ಮವಂತರ ಸದ್ಭಕ್ತರ ಮನೆಗಳಿಗೆ ಮಾತ್ರ ಹೋಗಿ ಭಿಕ್ಷೆ ಪಡೆಯುವನು.

ಜಲ ತಕ್ರ ದಧಿ ದುಗ್ಧ ಫಲ ಹವಿ ಯನ್ನಾಜ್ಯ।
ತಿಲ ಪಿಣ್ಯಕಾದಿಗಳೆಲ್ಲವ॥
ನಲವಿಂದೆ ಯೋಗಿ ಭಿಕ್ಷೆಯೊಳನುಕರಿಪುದು।
ಲಲನೆ ಲೇಸಭ್ಯಾಸ ಗತಿಗಿದು ॥ 3 ॥

ಸ್ತ್ರೀಯಳೆ, ಭಿಕ್ಷಾಟನ ಕಾಲದಲ್ಲಿ ನೀರು, ಮಜ್ಜಿಗೆ, ಮೊಸರು, ಹಾಲು, ಹಣ್ಣು ಹವಿಸ್ಸು, ಅನ್ನ, ತುಪ್ಪ, ಎಳ್ಳು ಚಟ್ನಿ ಮೊದಲಾದವುಗಳನ್ನು ಭಿಕ್ಷೆಗೆ ಸ್ವೀಕರಿಸಬೇಕು. ಇದು ಯೋಗಾಭ್ಯಾಸ ಕ್ರಮಕ್ಕೆ ಅನುಕೂಲಕರವಾಗಿರುವದು.

ಮೈತ್ರೇಯಿ ತಿಳಿ ಪಾಣಿಪಾತ್ರೆಯಾಗಲಿ ದಾರು।
ಪಾತ್ರೆಯಾಗಲಿ ಮೃದ್ವಿಕ್ಷತಮಾದ॥
ಪಾತ್ರೆಯಾಗಲಿ ಯೋಗಿವರನಿಗಹುದು ಭಿಕ್ಷಾ।
ಯಾತ್ರೆಯೊಳಖಿಳನ್ನವಿದು ಸತ್ಯ ॥ 4 ॥

ಮೈತ್ರೇಯಿಯೆ, ಈ ಎಲ್ಲ ಅನ್ನವನ್ನು ಸ್ವೀಕರಿಸಲು ಅಂಗೈಗಳ ಪಾತ್ರೆ, ಕಟ್ಟಿಗೆಯ ಪಾತ್ರೆ ಅಥವಾ ಮಣ್ಣಿನಿಂದಾದ ಪಾತ್ರೆ, ಈ ಯಾವದಾದರೊಂದು ಪಾತ್ರೆಯನ್ನು ಭಿಕ್ಷಾಟನ ಕಾಲದಲ್ಲಿ ಯೋಗಿವರನು ಉಪಯೋಗಿಸಬೇಕು.

– ಇತಿ ಯೋಗೀಶ್ವರನಿಗೆ ಭಿಕ್ಷಾಟನ ವಿಧಿ ನಿರೂಪಣೆ –

## 24ನೇ ಸೂತ್ರ

ಯೋಗಾಂತರಾಯಂಗಳಾಗಲ್ಕೆ ಯೋಗಿ ವಿ–।
ರಾಗದಿಂದವನುರೆ ಗೆಲುವುದು ॥

ಯೋಗಾಭ್ಯಾಸ ಮಾಡುವ ಕಾಲಕ್ಕೆ ಆಕಸ್ಮಿಕವಾಗಿ ಮೂರು ವಿಘ್ನಗಳು ಪ್ರಾಪ್ತವಾಗುವವು. ಶಾಂತ ಚಿತ್ತನಾಗಿ ಯೋಗಿವರನು ವೈರಾಗ್ಯ ವಿವೇಕಾದಿ ಬಲದಿಂದ ಆ ವಿಘ್ನಗಳನ್ನು ಪರಿಹರಿಸಿಕೊಳ್ಳಬೇಕು, ಗೆಲ್ಲಬೇಕು.

ಯೋಗವಿಘ್ನಂಗಳಾ ಯೋಗದಭ್ಯಾಸದೊ।
ಳಾಗಳಾಕಸ್ಮಿಕದೊಳು ತೋರೆ॥
ಯೋಗಿ ವಿವೇಕ ವಿರಾಗದೆ ತರಹರ।
ನಾಗಿ ತಾನಿರಬೇಹುದವರಲ್ಲಿ॥ 1 ॥

ಯೋಗಾಭ್ಯಾಸದಲ್ಲಿ ಆಕಸ್ಮಿಕವಾಗಿ ವಿಘ್ನಗಳು ಬಂದೊದಗಿದರೆ ಅಂತರಂಗ ಸಾಧನ ಚತುಷ್ಟಯಗಳ ಬಲದಿಂದ ಅವುಗಳಲ್ಲಿ ಯೋಗಿಯು ಶಾಂತನಾಗಿ ಇರಬೇಕು.

ವನಿತೆ ಕೇಳಭ್ಯಾಸ ದೆಶೆಯಲ್ಲಿ ಯೋಗಿಗೆ।
ಜನಿಪವಾ ಜ್ಞಾತೃವಿಕೃತಿಯೆಂದು॥
ಘನತರ ಜ್ಞಾನ, ವಿಜ್ಞೇಯ ವಿಕೃತಿಗಳೆಂ।
ದಿನಿಸು ವಿಘ್ನಂಗಳವನು ಪೇಳ್ವೆ॥ 2 ॥

ಯೋಗೀಶ್ವರನಿಗೆ ಅಭ್ಯಾಸದೆಶೆಯಲ್ಲಿ ಸ್ತ್ರೀಯಳೆ ಜಾತೃವಿಕೃತಿ ಮಹತ್ತರವಾದ ಜ್ಞಾನವಿಕೃತಿ ಹಾಗೂ ಜ್ಞೇಯವಿಕೃತಿಗಳೆಂದು ಮೂರು ವಿಘ್ನಗಳು ಪ್ರಾಪ್ತವಾಗುವವು. ಅವುಗಳನ್ನು ವಿವರವಾಗಿ ಹೇಳುವೆನು ಕೇಳು.

ಆಲಸತೆ ರೋಗ ಸಂಚಲತೆ ವಿಷಯ ಸಮಾ।
ಕುಲತೆ ಸಂಶಯ ವಿಸ್ಮೃತಿಗಳನು ॥
ತಿಳಿವುದು ಜ್ಞಾತೃವಿಕೃತಿಯೆಂಬ ವಿಘ್ನವೆಂ।
ದೆಳಸಿ ಮೈತ್ರೇಯಿ ನೀನೊಲವಿಂದೆ ॥ 3॥

ಯೋಗಾಭ್ಯಾಸವನ್ನು ನಾಳೆ ಮಾಡಿದರಾಯಿತೆಂದು ಮುಂದಕ್ಕೆ ಹಾಕುವದೆ ಆಲಸ್ಯವು. ಯೋಗವನ್ನು ಸಾಂಗವಾಗಿ ಮಾಡದಿರುವದಕ್ಕೆ ರೋಗಗಳು ಆತಂಕ ಮಾಡುವವು, ವಿಷಯಾಸಕ್ತಿಯಿಂದ ಮನಸ್ಸು ಚಂಚಲವಾಗುವದು, ನನಗೆ ಯೋಗವು ಸಾಧಿಸುವದೋ ಇಲ್ಲವೋ ಎಂಬುದೆ ಸಂಶಯವು. ನೀನು ಸಚ್ಚಿದಾನಂದಾತ್ಮನೆ ಇದ್ದಿಯೆಂಬ ಗುರುವಿನ ಉಪದೇಶಾದಿಗಳನ್ನು ಮರೆಯುವದೆ ವಿಸ್ಮೃತಿಯು. ಹೆ, ಮೈತ್ರೇಯಿ, ಇವು ಜ್ಞಾತೃವಿಕೃತಿಯೆನಿಪ ಚಿದಾಭಾಸಜೀವನ ವಿಕೃತಿಯೆಂಬ ವಿಘ್ನವೆಂದು ನೀನು ಆಸಕ್ತಿವಹಿಸಿ ನಿಶ್ಚಯಿಸತಕ್ಕದ್ದು.

ಗುಣನಿಧಿ ಕೇಳು ನಿರ್ಗುಣ ವಿರೋಧಿಗಳೆನಿ।
ಪಣಿಮಾದಿ ಸಕಲ ಸಂಪದಮುಖ್ಯ ॥
ಗುಣಯೋಗ ಸಿದ್ಧಿಗಳೆನಿಪ ವಿಘ್ನಂಗಳಿ।
ವೆಣಿಸಲಾ ಜ್ಞಾನ ವಿಕೃತಿಗಳು ॥ 4 ॥

ಹೇ ಸದ್ಗುಣ ಸಂಪನ್ನೆಯಾದ ಮೈತ್ರೇಯಿ ಕೇಳು, ಸಕಾಮತಪದಿಂದ ಪ್ರಾಪ್ತವಾದ ಅಣಿಮಾದಿ ಅಷ್ಟಸಿದ್ಧಿಗಳು ಮತ್ತು ಇಹಪರ ಭೋಗಾದಿ ಸಕಲ ಸಂಪತ್ತುಗಳು ನಿರ್ಗುಣಯೋಗ ಸಾಧನೆಗೆ ವಿರೋಧಿಗಳಾಗಿ ವಿಘ್ನಗಳಾಗಿರುವವು. ವಿಚಾರಿಸಿ ನೋಡಲಾಗಿ ಇವೇ ಜ್ಞಾನ ವಿಕೃತಿಗಳು.

ಮನದ ವಿಕಾರ ದುಃಖಾದಿ ವಿಕಲ್ಪನೆ।
ಕನಸು ನಿದ್ರಾ ತಮೋ ಭ್ರಮೆಯೆಂಬ ॥
ಇನಿತು ವಿಘ್ನಂಗಳೆ ಜ್ಞೇಯ ವಿಕೃತಿಯೆಂದು।
ಮನದನ್ನೆ ಮೈತ್ರೇಯಿ ತಿಳಿ ನೀನು ॥ 5 ॥

ಕಾಮಾದಿ ಷಡ್ರಿಪುಗಳೆಂಬ ಮನಸಿನ ವಿಕಾರಗಳು, ಅನಿಷ್ಟ ಚಿಂತನೆಯಿಂದುಂಟಾದ ವೇದನೆಗಳು, ಮುಂದೆ ತನಗೇನು ಸಂಭವಿಸುವದೋ ಎಂಬ ವಿಪರೀತ ವಿಕಲ್ಪನೆಯಿಂದಾದ ನಿದ್ರಾಭಂಗವು, ಮನದೊಳಗೆ ಜಾಗ್ರದ ವಾಸನಾಮಯ ದುಃಖಾದಿಗಳನ್ನು ಅನುಭವಿಸುವ ಕನಸು, ಸಕಲ ಇಂದ್ರಿಯ ಮತ್ತುಮನಾದಿ ಅಂತಃಕರಣ ವೃತ್ತಿಗಳ ಅಭಾವರೂಪ ನಿದ್ರೆ, ಕತ್ತಲೆಯ ಸದೃಶವಾದ ತಮಸ್ಸು, ಇದ್ದದ್ದನ್ನು ಬಿಟ್ಟು ಇಲ್ಲದ್ದನ್ನು ಕಲ್ಪಿಸುವ ಭ್ರಮೆ, ಈ ರೀತಿಯ ಎಲ್ಲ ಪ್ರತೀತಿಗಳೇ ಜ್ಞೇಯ ವಿಕೃತಿಗಳೆಂಬ ವಿಘ್ನಗಳೆಂದು, ಮನಸ್ಸನ್ನು ಅಲ್ಹಾದಗೊಳಿಸುವ ಮೈತ್ರೇಯಿಯೆ ನೀನು ತಿಳಿ.

ಯೋಗ ವಿಘ್ನಂಗಳಿವನು ಯೋಗಿ ತಧ್ಯಾನ।
ಯೋಗ ವಿರತಿ ಗುರುಪದಭಕ್ತಿ ॥
ಪೂಗವೆಂಬಿವನಭಿಯೋಗದಿಂದ ಗೆಲೆದನು।
ರಾಗದೆ ಮಾಳ್ಪುದಭ್ಯಾಸವ ॥ 6 ॥

ಮೇಲೆ ವಿವರಿಸಿದ ಈ ಎಲ್ಲ ಯೋಗದ ವಿಘ್ನಗಳನ್ನು, ಸಚ್ಚಿದಾನಂದಾತ್ಮ ಪರಬ್ರಹ್ಮನ ಧ್ಯಾನ, ತಲ್ಲೀನತೆ ಎಂಬ ಸಮಾಹಿತೆ, ಇಹಪರ ಭೋಗದಲ್ಲಿ ವೈರಾಗ್ಯ, ಸದ್ಗುರುಪಾದದಲ್ಲಿ ಪರಮಭಕ್ತಿ ಮೊದಲಾದ ಸದ್ಗುಣಗಳ ಸಹಯೋಗದಿಂದ ಜಯಿಸಿ, ಅತ್ಯಂತ ಪ್ರೀತಿಯಿಂದ ಯೋಗಾಭ್ಯಾಸವನ್ನು ಮಾಡುವದು ಯೋಗಿ ಪರುಷನ ಆದ್ಯ ಕರ್ತವ್ಯವಾಗಿರುವದು.

ಇದುವೆ ಸಗುಣಯೋಗ ಮಾರ್ಗಸುರಹಸ್ಯ।
ವಿದನಿಂತುಂಟೆಂದೊಲಿದರುಪುವ ॥
ಸದಮಳ ಗುರುಲಕ್ಷಣವನೆನಗಲಸದೆ।
ಮುದದಿಂದೆ ಪೇಳು ಸನ್ಮುನಿಮುಖ್ಯ ॥ 7 ॥

ಇದುವೆ ಸಗುಣಯೋಗ ಮಾರ್ಗವು. ಇದರ ರಹಸ್ಯವು ಈ ಪ್ರಕಾರವಾಗಿರುವದೆಂದು ಕೃಪಾಪೂರ್ಣವಾಗಿ ವಿವರಿಸುವ. ಸದ್ಗುರುವಿನ ಹಾಗೂ ಸಚ್ಛಿಷ್ಯನ ಲಕ್ಷಣಗಳನ್ನು ಬೇಸರ ಪಟ್ಟುಕೊಳ್ಳದೆ ನನಗೆ ಸಂತೋಷದಿಂದ ತಿಳಿಸಬೇಕೆಂದು ಮೈತ್ರಾದೇವಿಯು ಮುನೀಶ್ವರನಾದ ತನ್ನ ಪತಿ ಶ್ರೀಯಾಜ್ಞವಲ್ಕ್ಯರನ್ನು ಕೇಳಿಕೊಂಡಳು.

ಇದು ನಿಜಗುಣಯೋಗಿ ಮುದದಿಂದೆ ತಿಳಿಯ ಪೇ।
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ।
ಒದವಿದ ಸಂವಾದದೊಳಗೈದನೆಯ ಸಂಧಿ।
ಸದಮಳ ಪರಮಾನುಭವ ಬಂಧಿ ॥ 8 ॥

ಶ್ರೀನಿಜಗುಣ ಶಿವಯೋಗಿಗಳು ಸಂತೋಷದಿಂದ ಉಪದೇಶ ಮಾಡಿದ ಶ್ರೀಯಾಜ್ಞವಲ್ಕ್ಯ ಮತ್ತು ಮೈತ್ರೇಯಿ ಇವರಲ್ಲಿ ನಡೆದ ಸಂವಾದದೊಳಗೆ ಇದು ಪರಮ ಪವಿತ್ರವಾದ ಸಚ್ಚಿದಾನಂದಾತ್ಮದ ಸ್ವಾನುಭವರೂಪ ಶಾಸನವಾಗಿರುವದೆಂದು ಹೇಳಿ ಪರಮಾನುಭವಬೋಧೆಯಲ್ಲಿಯ ಈ ಐದನೆಯ ಸಂಧಿಗೆ ಮಂಗಳಪಾಡುತ್ತಾರೆ.

– ಇತಿ ಯೋಗ ವಿಘ್ನೋಪಶಾಂತಿ ನಿದರ್ಶನ ನಿರೂಪಣೆ –

ಸಂಧಿ ಐದು ಸೂತ್ರ 24 ಕ್ಕೆ ಸಂಪೂರ್ಣ

ಮಂಗಳಮಸ್ತು



****

ಶ್ರೀಗುರು ಶಂಭುಲಿಂಗಾಯ ನಮಃ

ಪರಮಾನುಭವ ಬೋಧೆ

## 6ನೇ ಸಂಧಿ

# ಗುರು ಶಿಷ್ಯಾದಿ ಲಕ್ಷಣ

1ನೇ ಸೂತ್ರ

ಗುಣಯೋಗವನುಪೇಳ್ವಗುರುಸೇವೆಯಿಂದ ನಿ–।
ರ್ಗುಣ ಮುಕ್ತಿ ತನಗೆ ಸಂಭವಿಪುದು ॥

ಸಗುಣಯೋಗವನ್ನು ಬೋಧಿಸುವ ಸದ್ಗುರು ಸೇವೆಯನ್ನು ತ್ರಿಕರಣ ಪೂರ್ವಕ ಮಾಡುವದರಿಂದ ತನಗೆ ನಿರ್ಗುಣ ಮುಕ್ತಿ ಪ್ರಾಪ್ತವಾಗುವದು.

ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ।
ಧಾಮಂಗೆ ಸತ್ಯ ಚಿದ್ರೂಪಂಗೆ ॥
ಕಾಮಿತಜನ ಕಲ್ಪಭೂಜಂಗೆ ಶಂಭುವಿಂ।
ಗಾಮೋದದಿಂದೆ ವಂದಿಸುವೆನು ॥ 1 ॥

ಉಮಾಸಹಿತನೂ, ಪೂರ್ಣಸುಖದ ನಿಲಯನೂ, ಸಚ್ಚಿದ್ರೂಪನೂ, ಬೇಡಿದವರಿಗೆ ಬೇಡಿದ್ದನ್ನು ಕೊಡುವ ಕಲ್ಪವೃಕ್ಷ ಸ್ವರೂಪನೂ ಆದ ಶ್ರೀ ಮಹಾದೇವ ಶಂಭುಲಿಂಗನಿಗೆ ಭಕ್ತಿಪೂರ್ವಕವಾಗಿ ವಂದಿಸುವೆನು.

ಶ್ರೀನಿಧಿ ಸಕಲವಿದ್ಯಾಮೂರ್ತಿ ಸುಕೃತಿ ಸು।
ಜ್ಞಾನಿ ಸುಗುಣಿ ಸತ್ಯಮಯವಾಣಿ ॥
ಆನಂದಶರಧಿ ಸನ್ಮುನಿ ಯಾಜ್ಞವಲ್ಕ್ಯ ನಿ।
ರ್ಮಾನಿ ದಯಾಪೂರ್ಣ ಹೃದಯನು ॥ 2 ॥

ಅಷ್ಟೈಶ್ವರ್ಯನಿಧಿಯೂ, ಸಕಲ ವಿದ್ಯಾಮೂರ್ತಿಯೂ ಪುಣ್ಯಶಾಲಿಯೂ, ಪರಮಜ್ಞಾನಿಯೂ, ಸದ್ಗುಣ ಸಂಪನ್ನನೂ, ಸತ್ಯಸಂಧನೂ, ಆನಂದಸಾಗರನೂ ಆದ ಯಾಜ್ಞವಲ್ಕ್ಯ ಮುನಿಶ್ರೇಷ್ಠನು ನಿರಭಿಮಾನಿಯೂ ದಯಾಸಂಪೂರ್ಣ ಹೃದಯವುಳ್ಳವನೂ ಆಗಿದ್ದನು.

ಮೈತ್ರೇಯಿಗುತ್ಪಲನೇತ್ರಿಗೆ ನಿರ್ಮಲ।
ಗಾತ್ರಿಗೆ ಸುಗುಣ ಸನ್ಮಣಿಗಣ ॥
ಸೂತ್ರಿಗೆ ಗುರುಭೇದವನು ಕೂರ್ತು ಸುಖವನ।
ಚೈತ್ರಿಗೆ ಪೇಳ್ದ ನಿಂತೊಲವಿಂದ ॥ 3 ॥

ಕಮಲಾಕ್ಷಿಯೂ ನಿರ್ಮಲಹೃದಯ(ಗಾತ್ರ)ಳೂ, ಸದ್ಗುಣರೂಪ ಶ್ರೇಷ್ಠಮಣಿಗಣಕ್ಕೆ ಸೂತ್ರದಂತಿರುವ ಹಾಗೂ ಸುಖವನಕ್ಕೆ ವಸಂತಮಾಸದಂತಿರುವ ವಳೂ ಆದ ಮೈತ್ರೇಯಿಗೆ ಮನದೊಲವಿಂದ ಗುರುಭೇದವನ್ನು ಕುರಿತು ವಿವರಿಸಿದನು.

ಕಾಮಿನಿ ಕೇಳಿಹದೊಳು ಸುಖವನು ಬಳಿ।
ಕಾ ಮಹಾನರಕ ದುಃಖವನೀವ ॥
ನೇಮವಿಡಿದು ಪೇಳ್ವ ಬಗೆವಿಡಿರ್ಪನೆ।
ತಾಮಸನೆನಿಸುವ ಗುರುವಕ್ಕು ॥ 4 ॥

ಕುಲೀನ ಸ್ತ್ರೀಯಳೆ ಕೇಳು. ಈ ಲೋಕದಲ್ಲಿ ಸುಖವನ್ನೂ ಅನಂತರ ಮಹಾನರಕ ದುಃಖವನ್ನೂ ಕೊಡತಕ್ಕ ಮಾರ್ಗವನ್ನು ಬೋಧಿಸುವ ಗುರುವಿಗೆ ತಾಮಸಗುರುವೆಂದು ಕರೆಯುವರು.

ಈ ಜಗತ್ರಯದೊಳು ರಾಜಿಪ ಸಾಮ್ರಾಜ್ಯ।
ಭಾಜನವೆನಿಸುವ ಗತಿಯನು ॥
ಓಜೆಯಿಂದೊರೆಯಬಲ್ಲಾತನೆನಿಸುವನು।
ರಾಜ್ಯಾಸ್ಯೆ ರಾಜಸ ಗುರುವೆಂದು ॥ 5 ॥

ಚಂದ್ರಮುಖಿಯೇ, ಮೂರು ಲೋಕಗಳಲ್ಲಿ ಪ್ರಸಿದ್ಧವಾದ ರಾಜಭೋಗವನ್ನು ಕೊಡತಕ್ಕ ಮಾರ್ಗವನ್ನು ಕ್ರಮಬದ್ಧವಾಗಿ ತಿಳಿಸಿಕೊಡಬಲ್ಲವನೇ ರಾಜಸಗುರುವೆಂದೆನಿಸಿಕೊಳ್ಳುವನು.

ಸತ್ತ್ವದಿಂದನುಪಾಧಿಕತ್ವವೆನಿಸುವ ಮ।
ಹತ್ವದ ಮುಕ್ತಿಪದವನೀವ ॥
ತತ್ತ್ವವಿದೆಂದು ತಿಳುಹಬಲ್ಲವನು ತಾನೆ।
ಸಾತ್ವಿಕನೆನಿಪ ಸದ್ಗುರವಕ್ಕು ॥ 6 ॥

ಸತ್ವಗುಣದಿಂದ ನಿರುಪಾಧಿಕವಾದ ಶ್ರೇಷ್ಠತರ ಮುಕ್ತಿಯನ್ನುಕೊಡತಕ್ಕ ತತ್ತ್ವವನ್ನು ತಿಳಿಸಿಕೊಡಬಲ್ಲವನೇ ಸದ್ಗುರುವೆಂದು ಹೇಳಿಸಿಕೊಳ್ಳುವನು.

ಅಣಿಮಾದಿ ಪದವೀವ ಗುಣಯೋಗ।
ಮುಳಿದು ನೀರ್ಗುಣಮುಕ್ತಿದೋರುತಿರ್ಪಾತನು ॥
ಗುಣಗಂಧಯುಕ್ತ ಪರಮಗುರುವೆಂದು ಸ।
ದ್ಗುಣನಿಧಿ ನೀನು ನಿಶ್ಚಯಿಪುದು ॥ 7 ॥

ಸದ್ಗುಣನಿಧಿಯಾದ ಮೈತ್ರೇಯಿ, ಅಣಿಮಾದಿ ಸಿದ್ಧಿಗಳನ್ನು ಒದಗಿಸಿಕೊಡಬಲ್ಲ ಸಗುಣಯೋಗವನ್ನು ಬಿಟ್ಟು ನಿರ್ಗುಣವಾದ ಮುಕ್ತಿ ಸುಖವನ್ನು ದಯಪಾಲಿಸಬಲ್ಲ ಗುಣಗಂಧಯುಕ್ತನ್ನೇ ಪರಮಗುರುವೆಂದು ನೀನು ನಿಶ್ಚಯವಾಗಿ ತಿಳಿ.

ನಿರಭಿಮಾನಿಕ ಸುಖಿ ಪರಿಪೂರ್ಣನ ಖಿಳಜ್ಞ।
ನುರುತರ ಕರುಣಾಂಬುನಿಧಿ ಬೋಧ॥
ಪರನಭಿವಾಂಛೆ ದೋರುವ ಕೃತಕೃತ್ಯನೆ।
ಪರಮ ಸದ್ಗುರುವೆಂದು ತಿಳಿ ನೀರೆ ॥ 8 ॥

ಪ್ರಿಯಳೆ, ಇನ್ನು ನಿರಭಿಮಾನಿಯೂ, ಸುಖರೂಪನೂ, ಪರಿಪೂರ್ಣನೂ, ಸರ್ವಜ್ಞನೂ, ಸರ್ವಶ್ರೇಷ್ಠನೂ, ಕರುಣಾಸಾಗರನೂ, ಜ್ಞಾನಘನನೂ, ಇಚ್ಛಿತಾರ್ಥವನ್ನು ಕೊಡುವವನೂ ಆದ ಕೃತತ್ಯನೆ ಪರಮಸದ್ಗುರುವೆನಿಸುವನು ಎಂದು ತಿಳಿ.

– ಇತಿ ಗುರುಭೇದ ನಿರೂಪಣೆ –

## 2ನೇ ಸೂತ್ರ

### ತರುಣಿ ಸೂಚಕನು ವಾಚಕನು ಕಾರಕನೆಂದು । ಗುರು ಮೂವರಂದವನು ಕೇಳು

ಅಧ್ಯಾತ್ಮವಿದ್ಯೆಯನ್ನು ಗ್ರಹಿಸಲು ಸಮರ್ಥಳಾದ (ತರುಣಿ) ಮೈತ್ರೇಯಿ, ಗುರುಗಳು ಸೂಚಕ ವಾಚಕ ಕಾರಕವೆಂದು ಮೂರು ತೆರನಾಗಿರುವರು. ಅವರ ಸ್ವರೂಪ ವನ್ನು ವಿವರಿಸುವನು ಚಿತ್ತಗೊಟ್ಟು ಕೇಳು.

ನೀಚರರಖಿಳ ವಿಷಯವೃತ್ತಿ ಗೆಡಿಸಿಯಾ।
ತ್ಮಾಚಾರ ಮಾರ್ಗವರ್ತಿಗಳಾಗೆ॥
ಯೋಚನೆ ಎಡಿದು ಬೋಧಿಸಬಲ್ಲವನು ತಾನೆ।
ಸೂಚಕ ಗುರುವೆಂದೆನಿಸುತಿರ್ಕು ॥ 1 ॥

ಜಡಬುದ್ಧಿಯುಳ್ಳವರ ವಿಷಯಾಸಕ್ತಿಯನ್ನು ಪೂರ್ಣ ಹೋಗಲಾಡಿಸಿ, (ಶಿಷ್ಯರಿಗೆ) ಆತ್ಮಾನುಸಂಧಾನದಲ್ಲಿ ಪ್ರವೃತ್ತರಾಗುವಂತೆ ವಿಚಾರ ಮಾರ್ಗವನ್ನು ತೋರಿಸಬಲ್ಲವನೆ ಸೂಚಕ ಗುರುವೆಂದು ಹೇಳಿಸಿಕೊಳ್ಳುವನು.

ಆಚಾರ ನಿಷ್ಠರೆನಿಸುವರ್ಗೆ ಬ್ರಹ್ಮವ।
ದಾಚಾರವಲ್ಲದೇನಿಲ್ಲೆಂದು॥
ರೋಚಿಸುವಂತೆ ತಿಳುಹಬಲ್ಲೊಡವನು।
ವಾಚಕ ಗುರುವೆಂದು ಬಗೆವುದು ॥ 2 ॥

ಸದಾಚಾರದಲ್ಲಿ ನಿಷ್ಠೆಯುಳ್ಳವರಿಗೆ ಬ್ರಹ್ಮಾನುಸಂಧಾನವೇ ಆಚಾರವಲ್ಲದೆ ಇನ್ನೊಂದಿಲ್ಲವೆಂದು ರೋಚಕವಾಕ್ಯದಿಂದ ತಿಳುಹಬಲ್ಲವನೇ ವಾಚಕ ಗುರುವೆನಿಸುವನು.

ಸಾರಸ ಮುಖಿಯೆ ವಿಚಾರಿತವಿದು ನೀನೆ।
ಪಾರಮಾರ್ಥಿಕ ನಿಷ್ಕ್ರಿಯಾತ್ಮಿಕ॥
ಸಾರತರ ಬ್ರಹ್ಮವೆಂದು ಬೋಧಿಸುವನೆ।
ಕಾರಕಗುರುವೆಂದು ತಿಳಿ ನೀನು॥ 3 ॥

ನೀನೆ ಪರಮಾರ್ಥವಾದ ನಿಷ್ಕ್ರಿಯಾತ್ಮಕ ಶ್ರೇಷ್ಠತರ ಪರಬ್ರಹ್ಮವೆಂದು ವಿಚಾರಿಸತಕ್ಕದ್ದೆಂದು ಬೋಧಿಸುವವನೆ ಕಾರಕಗುರುವೆಂದು ಕಮಲಮುಖಿಯಾದ ಮೈತ್ರೇಯಿ ನೀನು ತಿಳಿ.

ವೇದವೇದಾಂತ ಸಿದ್ಧಾಂತ ಪುರಾಣ ಶಾ।
ಸ್ತ್ರಾದಿ ರಹಸ್ಯಾರ್ಥವೆಲ್ಲವ॥
ಸಾದರದಿಂದೆ ತಿಳಿದು ಬೋಧಿಸಲು ಬಲ್ಲ।
ನಾ ದಯಾಮೂರ್ತಿಪರಮಗುರು॥ 4 ॥

ವೇದಗಳು ಉಪನಿಷತ್ತುಗಳು ಸಿದ್ಧಾಂತ ಪುರಾಣ ಶಾಸ್ತ್ರ ಮೊದಲಾದವುಗಳು ಒಳಗೊಂಡಿರುವ ಎಲ್ಲ ಗೂಢಾರ್ಥವನ್ನು ತಾನು ಅನುಭವಕ್ಕೆ ತೆಗೆದುಕೊಂಡು ಶಿಷ್ಯರಿಗೆ ಬೋಧಿಸಲು ಸಮರ್ಥನಾದಂತಹ ಕರುಣಾಮೂರ್ತಿಯೆ ಪರಮಗುರುವೆನಿಸುವನು.

ಪರಮಾರ್ಥವೆನಿಸಿದ ಪರಮ ವಿರತಿಯುಳ್ಳ।
ವರಶಿಷ್ಯರೊಳು ಪೆರತೊಂದನು॥
ಪರಿಕಿಸಿ ನೋಡದೆ ಗುರುಬೋಧಿಪುದು ಪರ।
ತರ ತತ್ತ್ವವಿಷಯವನೊಲವಿಂದ॥ 5 ॥

ಶ್ರೇಷ್ಠ ಸಾಧನವಾದ ಪರಮ ವೈರಾಗ್ಯವನ್ನು ಅಳವಡಿಸಿಕೊಂಡ ಸಚ್ಛಿಷ್ಯರಲ್ಲಿ ಬೇರೇನೂ ಎಂದರೆ ಕುಲ, ಜಾತಿ, ಮತ, ವಯಸ್ಸು ಲಿಂಗಗಳನ್ನು ವಿಚಾರಿಸಿ ನೋಡದೆ ಪರಮ ಶ್ರೇಷ್ಠವಾದ ಬ್ರಹ್ಮಪದವನ್ನು ಪ್ರೇಮದಿಂದ ಗುರುಬೋಧಿಸತಕ್ಕದ್ದು.

ವರಶಿಷ್ಯನೆಡೆಯೊಳು ಗುರುವಾಂಛೆವಿಡಿಯದೆ।
ಪರತತ್ತ್ವವನು ಗೋಪ್ಯತರಮಾಗಿ॥
ಒರೆವುದು ದಕ್ಷಿಣ ಕರ್ಣ ವಿವರದೊಳು।
ಕರುಣರಸಾರ್ದ್ರಭಾವನೆಯಿಂದ॥ 6 ॥

ಸಚ್ಛಿಷ್ಯನಿಂದ ಗುರುಗಳು ಯಾವ ಪ್ರತಿಫಲವನ್ನು ಬಯಸದೆ ಕರುಣಾರಸ ಭರಿತಭಾವದಿಂದ ಪರಮಾತ್ಮತತ್ತ್ವವನ್ನು ಅತ್ಯಂತ ರಹಸ್ಯವಾಗಿ ಬಲಗಿವಿಯಲ್ಲಿ ಬೋಧಿಸತಕ್ಕದ್ದು

ಪರತತ್ತ್ವವಿಷಯದರಿಕೆಯುಳ್ಳ ಗುರುವರನಾ।
ದರದಿಂದೆ ವರಶಿಷ್ಯನುರೆ ನಂಬಿ॥
ಪಿರಿಯನಿವನು ಕಿರಿಯನು ಕುಲಜನು ಕುಲ।
ವಿಹೀನನೆಂಬುದ ನುಳಿವುದು॥ 7 ॥

ಪರಮಾತ್ಮತತ್ತ್ವವನ್ನು ಅನುಭವಪೂರ್ವಕ ಅರಿತ ಶ್ರೋತ್ರಿಯ ಬ್ರಹ್ಮನಿಷ್ಠನಾದ ಸದ್ಗುರುವನ್ನು ಸಚ್ಛಿಷ್ಯನು ಪರಮ ಭಕ್ತಿಯಿಂದ ನಂಬಿ, ಅವನು ವಯಸ್ಸಿನಿಂದ ತನಗಿಂತ ಹಿರಿಯನು ಅಥವಾ ಕಿರಿಯನೆಂದು ಮತ್ತು ಅವನು ಸತ್ಕುಲಜಾತನು ಅಥವಾ ಹೀನಕುಲದವನೆಂಬುದನ್ನು ವಿಚಾರ ಮಾಡಬಾರದು.

ತನುರಹಿತಾತ್ಮನೊಳಗೆ ತನುಧರ್ಮ ವಿ।
ದನು ನೋಡದನುದಿನದೊಳು ನಂಬಿ ॥
ಘನ ಪರಬ್ರಹ್ಮ ವಿಷಯವನು ತಿಳಿವುದು।
ಮುನಿಮತವಿದು ಶಿಷ್ಯನೆನಿಪಂಗೆ ॥ 8 ॥

ಆತ್ಮನು ನಿರ್ದೇಹಿಯಾದುದರಿಂದ ಗುರುವಿನಲ್ಲಿ ದೇಹಧರ್ಮಗಳನ್ನು ವಿಚಾರಿಸದೆ ಯಾವಾಗಲೂ ಅವನನ್ನು ನೆರೆನಂಬಿ ಘನತರ ಪರಬ್ರಹ್ಮ ವಿಷಯವನ್ನು ತಿಳಿದುಕೊಳ್ಳಬೇಕು. ಇದು ಮುನಿಗಳಿಗೆ ಸಮ್ಮತವಾಗಿರುವದೆಂದು ಶಿಷ್ಯನು ತಿಳಿಯಬೇಕು.

ಅವರಿವರೆನ್ನದೆ ಪರತತ್ತ್ವವನು ತಿಳಿ।
ದವರನೆ ಬಲವಿಡಿದೊಲವಿಂದ ॥
ತವೆ ತನ್ನ ನಿಜವನರಿವು ದನುಮತವಿದು।
ಸುವಿಚಾರಿ ಶಿಷ್ಯನೆನಿಸುವಂಗೆ ॥ 9 ॥

ವಿಚಾರವಂತನಾದ ಶಿಷ್ಯನು ಪರತತ್ತ್ವವನ್ನು ಖಚಿತವಾಗಿ ತಿಳಿದ ಜ್ಞಾನಿಯು ಯಾರಾದರೂ ಸರಿ, ಅವನಿಗೆ ಭಯಭಕ್ತಿಯಿಂದ ಶರಣಾಗತನಾಗಿ ತನ್ನ ನಿಜ ಸ್ವರೂಪವಾದ ಆತ್ಮನನ್ನು ತಿಳಿದುಕೊಳ್ಳಬೇಕು. ಇದು ಸಕಲರ ಅನುಮತವಾಗಿರುವದು.

ಪರಮ ವಿರಕ್ತಿಯೊಂದನೆ ಪರೀಕ್ಷಿಸುವನು।
ಗುರು ಶಿಷ್ಯರೊಳು ಜಾತಿ ಕುಲ ವಿದ್ಯಾ ॥
ವರಗುಣಗಣವನಾರೈವನೆ ತನುಧರ್ಮ।
ದಿರವೆಂದು ತಿಳಿದವನೆಲ್ಲವ ॥ 10 ॥

ಶ್ರೀ ಗುರು, ಶಿಷ್ಯರಲ್ಲಿ ಪರಮ ವೈರಾಗ್ಯವನ್ನು ಮಾತ್ರ ಪರೀಕ್ಷಿಸಿ ನೋಡುವನು ಆದರೆ ಜಾತಿ, ಕುಲ, ವಿದ್ಯಾ ಹಾಗೂ ಸದ್ಗುಣಗಳೆಲ್ಲವನ್ನು ಶರೀರದ ಧರ್ಮಗಳೆಂದು ತಿಳಿದು ಅವುಗಳನ್ನು ವಿಚಾರಿಸುವದಿಲ್ಲ.

– ಇತಿ ಗುರೂಪದೇಶ ತಾರತಮ್ಯ ನಿರೂಪಣೆ –

## 3ನೇ ಸೂತ್ರ

ನಿರಹಂತೆ ಪರಮವಿರಕ್ತಿ ಸದ್ಗುರುಭಕ್ತಿ ।
ದೊರೆದೊಡಾತನೆಶಿಷ್ಯನೆನಿಪನು ॥

ದೇಹ ನಾನೆಂಬ ಅಭಿಮಾನವಿಲ್ಲದೆ ಕಿಂಕರಭಾವವುಳ್ಳವನೂ, ಇಹಪರಭೋಗಗಳಲ್ಲಿ ಪೂರ್ಣ ಅನಾಸಕ್ತನಾಗಿಯೂ, ಶ್ರೀಗುರು ಸಾಕ್ಷಾತ್ ಪರಬ್ರಹ್ಮನೆ ಎಂಬ ಉತ್ಕಟ ಭಕ್ತಿಯುಳ್ಳವನೂ ಆದ ಸಾಧಕನೇ ಸಚ್ಛಿಷ್ಯನೆನಿಸುವನು.

ಗುರುಭೇದ ಗತಿಯನಿಂತೊರೆದೆ ಲೇಸೆನಿಸಿ ಸ।
ದ್ಗುರುಪದವನು ಭಕ್ತಿಭರದಿಂದ॥
ಪಿರಿದು ವಿಶ್ವಾಸದೊಡನೆ ಸೇವಿಸುವ ಶಿಷ್ಯ।
ನಿರವನೆನಗೆ ಪೇಳು ಮುನಿಮುಖ್ಯ ॥ 1 ॥

'ಮುನಿಗಳಲ್ಲಿ ಶಿರೋಮಣಿಯಂತೆ ಇರುವ ಯಾಜ್ಞವಲ್ಕ್ಯರೆ, ಗುರುಗಳು ಬೇರೆ ಬೇರೆಯಾಗಿರುವರೆಂಬುದನ್ನು ತಾವು ವಿವರಿಸಿದಿರಿ. ಭಕ್ತಿಭಾವದಿಂದ ತುಂಬಿ ಅತ್ಯಂತ ವಿಶ್ವಾಸದೊಡನೆ ಸದ್ಗುರು ಸೇವೆಯನ್ನು ಮಾಡುವ ನಿಜ ಶಿಷ್ಯನ ಸ್ವರೂಪವನ್ನು ನನಗೆ ತಿಳಿಯುವಂತೆ ಹೇಳಬೇಕು' ಎಂದು ಮೈತ್ರಾದೇವಿಯು ಕೇಳಿಕೊಂಡಳು.

ಎಂದು ಬಿನ್ನೈಸಿ ವಂದಿಸಿದ ಮೈತ್ರೇಯಿಗಾ।
ನಂದದಿಂದಾ ಮುನಿವರನಂದು॥
ಎಂದನಿಂತೆಂದು ಶಿಷ್ಯನ ಲಕ್ಷಣವ ನಿನ।
ಗಿಂದುವದನೆ ಪೇಳ್ವೆನಾಲಿಸು ॥ 2 ॥

ಈ ರೀತಿ ಬಿನ್ನಹ ಮಾಡಿಕೊಂಡು ನಮಸ್ಕರಿಸಿದ ಮೈತ್ರೇಯಿಗೆ, 'ಚಂದ್ರಸದೃಶ ಮುಖವುಳ್ಳವಳೇ, ನಿನಗೆ ಶಿಷ್ಯನ ಲಕ್ಷಣವನ್ನು ಹೀಗೆಯೇ ಇರುವದೆಂದು ಹೇಳುವೆನು ನೀನು ಲಕ್ಷ್ಯಪೂರ್ವಕವಾಗಿ ಕೇಳು' ಎಂದು ಮುನಿಶ್ರೇಷ್ಠನು ಹೇಳಿದನು.

ಗುರುಭಕ್ತಿ ನಿರಹಮ್ಮು ನಿರಪೇಕ್ಷೆಸೈರಣೆ।
ಕರಣಾನುಕೂಲತೆ ಪರಿಣಾಮ॥
ಸುರಸ ಸುಸ್ಥಿರಬುದ್ಧಿ ಸದ್ಗುಣವಿರಲಾತ।
ವರಶಿಷ್ಯನೆನಿಸುವ ಲಲಿತಾಂಗಿ ॥ 3 ॥

ತನ್ನಲ್ಲಿರುವಂತೆ ಗುರುವಿನಲ್ಲಿ ಪ್ರೀತಿಯಿಡುವದೇ ಗುರುಭಕ್ತಿಯು. ಗುರುಸನ್ನಿಧಾನದಲ್ಲಿ ಗುರುವಿನ ಸೇವಕರ ಸೇವಕನಾಗಿರುವದು ನಿರಹಂಕಾರವು. ಶರೀರ ನಿರ್ವಹಣೆ ಹೊರತುಪಡಿಸಿ ಯಾವ ಭೋಗಗಳನ್ನು ಅಪೇಕ್ಷಿಸದಿರುವದೇ ನಿರಪೇಕ್ಷೆಯು. ಅದೃಷ್ಟವಶಾತ್ ಯಾವ ದುಃಖಗಳು ಬಂದರೂ ಅವುಗಳೆಲ್ಲವನ್ನೂ ಪ್ರತೀಕಾರವಿಲ್ಲದೆ ಸಹಿಸಿಕೊಂಡು ತನ್ನ ಅಭ್ಯಾಸವನ್ನು ಮಾಡುವದು ಸೈರಣೆಯೆನಿಸಿಕೊಳ್ಳುವದು.

ಮಿತಾಹಾರಾದಿಗಳಿಂದ ತನ್ನ ಶರೀರ ಇಂದ್ರಿಯ ಅಂತಃಕರಣಗಳನ್ನು ತನ್ನ ಸ್ವಾಧೀನದಲ್ಲಿರಿಸಿಕೊಳ್ಳುವದು ಕರಣಾನುಕೂಲತೆಯು. ಅದೃಷ್ಟವಶದಿಂದ ತನಗೆ ಎಷ್ಟು ಅನ್ನವಸ್ತ್ರಾದಿಗಳು ಪ್ರಾಪ್ತವಾಗುವವೋ ಅವುಗಳಲ್ಲಿಯೇ ತೃಪ್ತಿಯನ್ನು ಹೊಂದುವದು ಪರಿಣಾಮವೆಂದು ಹೇಳಿಸಿಕೊಳ್ಳುವದು. ಎಲ್ಲರೊಡನೆ ಪ್ರೀತಿಯಿಂದ ವ್ಯವಹರಿಸುವದು ಸುರಸವು. ಬುದ್ಧಿಯ ನಿಶ್ಚಯವು ಕದಲದಿರುವದೆ ಸುಸ್ಥಿರಬುದ್ಧಿಯು. ಈ ಎಲ್ಲ ಸದ್ಗುಣಗಳಿಂದ ಕೂಡಿರುವವನೇ ಸಚ್ಚಿಷ್ಯನೆನಿಸುವನು.

ಪರಹಿತನಮಳನೂರ್ಜಿತನಚಲಿತ ಶಾಂತ।
ನುರುದಯಾ ಶುಚಿ ಧೀರ ನವಿಕಾರಿ ॥
ಪರಮವಿರಕ್ತನುನ್ನತನೆಂದೆನಿಸಿ ತೋರು।
ತಿರಲವ ನೆಲೆ ವರಶಿಷ್ಯನು ॥ 4 ॥

ಶರೀರ ಮಾತು ಮನಸ್ಸುಗಳೆಂಬ ಈ ತ್ರಿಕರಣಪೂರ್ವಕ ಪರರಿಗೆ ಉಪಕಾರ ಮಾಡುವವನೂ, ಕಾಮಾದಿ ಅರಿಷಡ್ವರ್ಗವಿಲ್ಲದ ಪರಿಶುದ್ಧನೂ, ಅತ್ಯಂತ ಶ್ರೇಷ್ಠನೂ, ಸುಸ್ಥಿರವಾದ ಶಾಂತಿಯುಳ್ಳವನೂ, ನೆಲೆಗಾಣದ ದಯಾಸಾಗರನೂ, ಬಹಿಶ್ಶುದ್ಧಿ ಅಂತಃಶ್ಶುದ್ಧಿ ಎರಡನ್ನು ಪಡೆದವನೂ, ಬುದ್ಧಿಶಾಲಿಯೂ ವಿಕಾರರಹಿತನೂ, ಇಹಪರ ಭೋಗಗಳಲ್ಲಿ ಸ್ವವಾಂತದಂತೆ ತಿರಸ್ಕಾರಬುದ್ಧಿಯುಳ್ಳವನೂ ಉದಾರಚಿತ್ತನೂ ಆಗಿರುವವನೇ, ಎಲೆ ಮೈತ್ರೇಯಿ, ಯೋಗ್ಯ ಶಿಷ್ಯನೆಂದೆನಿಸುವನು.

ಮೃದುವಾಣಿ ಸಾತ್ವಿಕ ನನುಪಮಾನಂದಾಬ್ಧಿ।
ಮದ ಮತ್ಸರಾದಿ ವಿದೂರನು ॥
ಪದುಳಿಗನಾತ್ಮರತನು ಸತ್ಯನೆಂದೆನಿ।
ಸಿದಡಿಲ್ಲ ವರಶಿಷ್ಯನೆನಿಪನು ॥ 5 ॥

ಹಿತಮಿತ ಭಾಷಣವುಳ್ಳ ವಿನಯಶೀಲನೂ, ಶಾಂತವಾದ ಸ್ವಭಾವವುಳ್ಳವನೂ, ಉಪಮಿಸಲಾಗದ ಆನಂದಸಾಗರನೂ, ಗರ್ವ, ಹೊಟ್ಟೆಕಿಚ್ಚು ಮೊದಲಾದ ಕುತ್ಸಿತಮನವಿಲ್ಲದವನೂ, ಸಮಾಧಾನಚಿತ್ತನೂ, ತನ್ನ ಸ್ವರೂಪವಾದ ಆತ್ಮನಲ್ಲಿಯೇ ಪರಮಪ್ರೀತಿಯುಳ್ಳವನೂ, ಎಂಥ ಪ್ರಸಂಗದಲ್ಲಿಯೂ ಖರೆತನವನ್ನು ಬಿಡದವನೂ ಆಗಿರಲಾಗಿ ಅವನು ಸಚ್ಛಿಷ್ಯನೆಂದು ಕರೆಯಿಸಿಕೊಳ್ಳುವನು.

ಗುರುಪರಮೇಷ್ಠಿ ಸದ್ಗುರು ಶೌರಿ ಗುರುತಾನೆ।
ಗಿರಿಜಾಧಿಪತಿ ಗುರು ಪರತತ್ತ್ವ॥
ಗುರು ವಿಶ್ವವೆಂದು ನಂಬಿರಲವನನು ಕಾಂತೆ।
ವರಶಿಷ್ಯನೆಂದು ನೀನರಿವುದು ॥ 6 ॥

ಸದ್ಗುರು(ಟಿ) ಜ್ಞಾನವನ್ನುಂಟು ಮಾಡುವದರಿಂದ ಬ್ರಹ್ಮನೆಂದು ಹೇಳಿಸಿಕೊಳ್ಳುವನು. ಆ ಉತ್ಪತ್ತಿಯಾದ ಜ್ಞಾನವನ್ನು ಸಂಶಯಾದಿ ಭಾವನೆಗಳಿಂದ ಗುರು ರಕ್ಷಿಸುವದರಿಂದ ವಿಷ್ಣುವೆನಿಸುವನು. ಜ್ಞಾನದಲ್ಲಿ ತೋರಿದ ಅಜ್ಞಾನ, ಅದರ ಕಾರ್ಯವಾದ ಜಗತ್ತನ್ನು ನಾಶಮಾಡುವದರಿಂದ ಶ್ರೀಗುರು ರುದ್ರನೆನಿಸಿ ಕೊಳ್ಳುವನು. ಗುರು ಪರಿಪೂರ್ಣನಿರುವದರಿಂದ ಅವನು ಸಾಕ್ಷಾತ್ ಪರಬ್ರಹ್ಮನೇ ಇರುವನು. ಗುರುವೇ ಸಮಸ್ತ ವಿಶ್ವನಾಗಿ ಆವಿರ್ಭವಿಸಿದಂತೆ ತೋರುವನು. ಈ ಪ್ರಕಾರ ಗುರುವಿನ ಬಗ್ಗೆ ಸದ್ಭಾವವನಿಟ್ಟುಕೊಂಡು ನಂಬಿರುವವನೇ ಯೋಗ್ಯ ಶಿಷ್ಯನು ಎಂದು ಹೇ ಪತ್ನಿಯೇ, ನೀನು ತಿಳಿದುಕೊಳ್ಳಬೇಕು.

ಗುರುವೇದ ಶಾಸ್ತ್ರಾಳಿ ಗುರುದೈವ ತೀರ್ಥಾಳಿ।
ಗುರು ಬಂಧು ಬಾಂಧವಾಳಿಗಳೆಂದು ॥
ಗುರುಪಾದವನೆ ನಂಬಿ ಪಿರಿದು ಸೇವಿಸುತಿರೆ।
ವರಶಿಷ್ಯನವನಂಬುಜಾನನೆ ॥ 7 ॥

ಸದ್ಗುರುವೇ ವೇದಾಗಮರೂಪ ಜ್ಞಾನಭಂಡಾರನೂ, ಗುರುವೇ ಸಮಸ್ತ ಶಾಸ್ತ್ರರೂಪನೂ ಅಹುದು. ಅವನೇ ಬ್ರಹ್ಮಾದಿ ತ್ರಿಮೂರ್ತಿರೂಪದೈವನು. ಅವನು ಗಂಗಾದಿ ಪುಣ್ಯತೀರ್ಥಗಳಾಗಿರುವನು. ಗುರುವೇ ನಮ್ಮೆಲ್ಲ ಬಂಧು ಬಳಗ ಬಾಂಧವರೂಪನಾಗಿರುವನು. ಹೀಗೆ ಶ್ರೀ ಗುರುಪಾದ ಪದ್ಮವನ್ನೇ (ಪರಮ ಭಕ್ತಿಯಿಂದ) ನಂಬಿ ಅತ್ಯಂತ ತತ್ಪರತೆಯಿಂದ ಗುರು ಸೇವೆಯನ್ನು ಮಾಡುವ ಸಾಧಕನನ್ನು, ಕಮಲದಂತೆ ಮುಖವುಳ್ಳ ಮೈತ್ರೇಯಿ, ನಿಜವಾದ ಶಿಷ್ಯನೆಂದು ನೀನು ನಂಬು.

ತನು ಮನೋ ಧನ ಧಾನ್ಯ ವನಿತೆ ವಾಹನ ವಸ್ತ್ರ।
ವೆನಿಸುವಖಿಳ ವಸ್ತುಚಯವನು ॥
ಇನಿತು ವಂಚಿಸದೆ ಸದ್ಗುರುವಿನೊಳರ್ಪಿತ।
ನೆನಿಪನು ವರಶಿಷ್ಯನರಿಯಲ್ಕೆ ॥ 8 ॥

ಶರೀರ ಮನಸ್ಸು ಐಶ್ವರ್ಯ ಕಾಳುಕಡಿಗಳು ಅಶ್ವಾದಿ ವಾಹನಗಳು ವಸ್ತ್ರಾದಿ ಸಕಲ ವಸ್ತು ಒಡವೆಗಳನ್ನು ಸ್ವಲ್ಪವೂ ವಂಚನೆಯಿಲ್ಲದೆ ಸದ್ಗುರುವಿಗೆ ಬೇರೇನನೂ ವಿಚಾರಿಸದೆ ಪೂರ್ಣ ಅರ್ಪಣೆ ಮಾಡುವವನು ಯೋಗ್ಯ ಶಿಷ್ಯನೆನಿಸಿಕೊಳ್ಳುವನು. ಆದರೆ ಕೆಲವರು ಗುರುಗಳಲ್ಲಿ ಶಿಷ್ಯನಂತೆ ನಟಿಸಿ ಅವರ ಧನ ಕನಕಾದಿಗಳನ್ನು ಅಪಹರಿಸುವವರು ಇದ್ದಾರೆ. ಅಂಥವರು ಶಿಷ್ಯರೆನಿಸಲಾರರು. ಇವರು ದುಷ್ಟ ಶಿಷ್ಯರು.

[ ಟಿಪ್ಪಣಿ :– ಗುರುರ್ಬ್ರಹ್ಮ ಗುರುರ್ವಿಷ್ಣು ಗುರುದೇವೋ ಮಹೇಶ್ವರಃ ಗುರುಸ್ಸಾಕ್ಷಾತ್ ಪರಬ್ರಹ್ಮತಸ್ಮೈ ಶ್ರೀ ಗುರುವೆ ನಮಃ – ಗುರುಗೀತಾ. ]

ಗುರುವರನುಳಿದು ಮಿಕ್ಕವರನಾಶೆಗೈಯದೆ।
ಗುರುವಿಗೆ ಪರಿಚರ್ಯಾಂಗಳ ॥
ಪರಮ ವಿಶ್ವಾಸದೊಡನೆ ಮಾಳ್ಪಭಕ್ತಿತ।
ತ್ಪರನೆನಿಪನು ವರಶಿಷ್ಯನು ॥ 9 ॥

ಸದ್ಗುರುಗಳನ್ನು ಹೊರತು ಪಡಿಸಿ ಬೇರೆ ಯಾರನ್ನೂ ಅಪೇಕ್ಷೆ ಪಡದೆ, ಆಪ್ತ ಅಂಗಾದಿ ಚತುರ್ವಿಧ ಗುರುಸೇವೆಯನ್ನು ಅತ್ಯಂತ ಭಯಭಕ್ತಿಯಿಂದ ಮಾಡತಕ್ಕವನೇ ನಿಜವಾದ ಶಿಷ್ಯನು. ಅವನು ತನಗೆ ಸದ್ಗುರುವೊಬ್ಬನೇ ದೇವನು. ಆತನ ಹೊರತಾಗಿ ತನಗೆ ದೈವವೆಂಬುವದು, ಗುರುವೆಂಬುವವರು ಬೇರೆ ಯಾರು ಇಲ್ಲವೆಂದು ನೆರೆ ನಂಬಿ ಸಾಧನ ಮಾಡುವನು. ಅವನೇ ಸಚ್ಛಿಷ್ಯನು.

ಗುರುವಾಳ್ದನಾಳು ತಾನೆನಿಸಿರವೇಳ್ಕುಮಾ।
ಗುರುಸನ್ನಿಧಿಯೊಳು ಸಚ್ಛಿಷ್ಯನು ॥
ಮೊರೆವ ಹಂಕೃತಿ ತನ್ನೊಳುಡುಗಿ ತಾನಿರ್ಪನ್ನ।
ವರವಿದು ಸತ್ಯವಂಗನೆ ನಂಬು ॥ 10 ॥

ಹೇ ಮಡದಿಯೆ, ನಿಜವಾದ ಶಿಷ್ಯನಾದವನು ಗುರು ಸಾಮೀಪ್ಯದಲ್ಲಿ ತಾನಿರುವಾಗ ಗುರುವಿನ ಆಳಿನ ಆಳು ತಾನಾಗಿರುವನು. ಅವನು ಜೀವಿಸಿಕೊಂಡಿರುವವರೆಗೆ, ಭೋರ್ಗರೆವ ತನ್ನ ಅಹಂಕಾರವು ಶಕ್ತಿಯನ್ನು ಕಳೆದುಕೊಂಡು ನಾಶವಾಗಬೇಕು. ಇದು ಸತ್ಯವೆಂದು ನೀನು ನಂಬು.

– ಇತಿ ವರಶಿಷ್ಯ ಲಕ್ಷಣ ನಿರೂಪಣೆ –

## 4ನೇ ಸೂತ್ರ

ಗುರುವರನೊಲವಿಲ್ಲದವನೇನನೋದಲು ।
ದೊರೆಯಲರಿಯದು ಸಮ್ಯಜ್ಞಾನ ॥

ಮನಃಪೂರ್ವಕ ಆಪ್ತ ಅಂಗಾದಿ ಸೇವೆಯನ್ನು ಮಾಡಿ ಗುರುಗಳನ್ನು ಒಲಿಸಿಕೊಳ್ಳಬೇಕು. ಆಗ ಗುರು ಸಂಪ್ರೀತನಾಗಿ ಕೃಪಾಪೂರ್ವಕ ಉಪದೇಶ ಮಾಡುವನು. ಅದರಿಂದ ಶಿಷ್ಯನಿಗೆ ಸ್ವರೂಪಜ್ಞಾನವು ಸಲೀಸವಾಗಿ ಪ್ರಾಪ್ತವಾಗುವದು. ಗುರು ಸೇವೆ ಘಟಿಸದಿದ್ದರೆ ಶಿಷ್ಯನು ಎಷ್ಟೇ ಕೇಳಲಿ ಏನೇ ಓದಲಿ, ಎಂಥ ಪ್ರಕಾಂಡ ಪಂಡಿತನಿದ್ದರೂ ನಿಜವಾದ ಆತ್ಮಜ್ಞಾನ ಪ್ರಾಪ್ತವಾಗಲು ಸಾಧ್ಯವಿಲ್ಲ.ಆದ್ದರಿಂದ ಆತ್ಮಜ್ಞಾನ ಬಯಸುವ ಪ್ರತಿಯೊಬ್ಬ ಸಾಧಕನು ಗುರು ಸೇವೆಯನ್ನು ಮನಸ್ಸುಗೊಟ್ಟು ಮೊದಲು ಅವಶ್ಯವಾಗಿ ಮಾಡತಕ್ಕದ್ದು.

ಗುರುವಿನೊಳೋವರಿ ಗುರುವಿನೊಳ್ಮರೆ ಮಿಥ್ಯೆ।
ಗುರುವಿನೊಳಗೆ ತರ್ಕಪುಸಿ ನಿಂದೆ॥
ದೊರಕೊಂಡ ನರನಿಗೆ ನರಕ ತಪ್ಪದು ನೀರೆ।
ವರವೇದ ಶಾಸ್ತ್ರಾನುಮತವಿದು ॥ 1 ॥

ಗುರುಗಳಿಗೆ ತಾನು ಸರಿಸಮಾನನೆಂದು ಭಾವಿಸಿ ಆಸನಾದಿಗಳಲ್ಲಿ ಕುಳಿತುಕೊಳ್ಳುವದು, ತನಗೆ ಪ್ರಿಯವಾದ ವಿಷಯಗಳನ್ನು ತನ್ನ ಸ್ವಾರ್ಥ ಸಾಧನೆಗಾಗಿ ಗುರುಗಳಿಗೆ ತಿಳಿಸದೆ ಮುಚ್ಚಿಡುವದು, ಗುರುಗಳೊಡನೆ ವಾದ ಮಾಡುತ್ತ ಅವರಿಗೆ ಅರ್ಥಜ್ಞಾನವಿಲ್ಲವೆಂದು ಅವರಲ್ಲಿ ಅಜ್ಞಾನವನ್ನು ಕಲ್ಪಿಸುವದು, ಗುರುಗಳೊಡನೆ ಯಾವದೇ ವಿಷಯದಲ್ಲಿ ವಾದವಿವಾದಕ್ಕಿಳಿಯುವದು, ಅಂದರೆ ಸಿದ್ಧಾರ್ಥವನ್ನು ಯುಕ್ತಿಯಿಂದ ಖಂಡಿಸಲು ಪ್ರಯತ್ನಿಸುವದು, ಗುರುಗಳಲ್ಲಿ ಸುಳ್ಳು ಮಾತಾಡುವದು, ಅವರಲ್ಲಿ ಇಲ್ಲದ ದೋಷಾರೋಪಣೆ ಮಾಡಿ ಅವರನ್ನು ನಿಂದಿಸುವದು, ಈ ಮೊದಲಾದ ದುರ್ಗುಣಗಳಿಂದೊಡಗೂಡಿದ ಶಿಷ್ಯನಿಗೆ ರವರವನರಕ ಪ್ರಾಪ್ತವಾಗುವದು ತಪ್ಪದು, ಹೇ ಪರಿಶುದ್ಧಾಂತಃಕರಣವುಳ್ಳ ಮೈತ್ರೇಯಿ, ಈ ಮಾತು ಸ್ವಕಪೋಲ ಕಲ್ಪಿತವಾದದ್ದಲ್ಲ, ಕಿಂತು ಶ್ರೇಷ್ಠವಾದ ವೇದ ಹಾಗೂ ಸಚ್ಛಾಸ್ತ್ರಗಳ ಅನುಶಾಸನವಾಗಿದೆ.

ಪ್ರತಿಕೂಲನಭಿಮಾನಿ ಮತಿಹೀನ ನಸ್ಥಿರ।
ನತಿಮೂರ್ಖ ನುರುತರ ಪಿಸುಣನು॥
ರತಿಕರನತಿಕ್ರೂರನತಿ ಕ್ಷುದ್ರನೆನಿಪ ದು।
ಸ್ಥಿತಿಯುಳ್ಳವನೆ ನಿರಾಕೃತ ಶಿಷ್ಯ ॥ 2 ॥

ಗುರುಗಳ ಮನೋಭಾವವನ್ನು ಅರಿತುಕೊಂಡು ಅವರಿಗೆ ಅನುಕೂಲವಾಗಿ ನಡೆದುಕೊಳ್ಳದೆ ವಿರೋಧವಾಗಿ ವರ್ತಿಸುವವದು, ತಾನು ಶ್ರೇಷ್ಠನೆಂದು ಭಾವಿಸಿಕೊಂಡು ಕೆಳತರಗತಿಯ ಸೇವೆಯನ್ನು ಮಾಡಲು ಹಿಂಜರಿಯುವ ದುರಭಿಮಾನವುಳ್ಳವನು, ಗುರುಗಳು ಬೋಧಿಸಿದ ವಿಷಯವನ್ನು ಸರಿಯಾಗಿ ಅರ್ಥೈಸಿಕೊಳ್ಳದ ಮತಿಹೀನನು, ಒಂದು ವೇಳೆ ತಿಳಿದುಕೊಂಡರೂ ಅದು ಸ್ಥಿರವಾಗಿ ನಿಲ್ಲದಿರುವ ಅಸ್ಥಿರನು, ಏನನ್ನೂ ತಿಳಿಯಲಾರದ ಮೂರ್ಖನು, ಒಬ್ಬರ ವಿಷಯವನ್ನು ತೆಗೆದುಕೊಂಡು ಮತ್ತೊಬ್ಬರಿಗೆ ಹೀಯಾಳಿಸಿ ಹೇಳುವ ಪಿಸುಣಿಗನು, ಎಂದರೆ ಚಾಡಿ ಹೇಳುವವನು. ವಿಷಯ ಪ್ರಾಪ್ತಿಯೇ ಪರಮ ಪುರುಷಾರ್ಥವೆಂದು ತಿಳಿದ ವಿಷಯಲಂಪಟನಾದ ರತಿಕರನು, ಶರೀರ ಮಾತು ಮನಗಳಿಂದ ಪರರನ್ನು ವಿನಾಕಾರಣ ಹಿಂಸಿಸುವವನು, ಅತಿಕ್ರೂರನು, ಇಂಥ ಹೀನ ಸ್ಥಿತಿಗೆಗತಿಯುಳ್ಳ ಶಿಷ್ಯನು ತ್ಯಜಿಸಲ್ಪಡಲು ಯೋಗ್ಯನಾಗಿರುವನು.

ಆಲಸನು ಪರಪೀಡಕನು ನಿದ್ರಾಪರ ನತಿ।
ಖಳನಧಮನು ಕೋಪಿ ಕುಲಹೀನ॥
ಛಲವುಳ್ಳವನು ಭಕ್ತಿರಹಿತನೆನಿಸುವನು।
ತಿಳಿಯೆ ದುಶ್ಶಿಷ್ಯ ನೆನಿಸುವನು ॥ 3 ॥

ಗುರುಸೇವೆಯನ್ನು ಮಾಡುವಲ್ಲಾಗಲಿ, ಗುರುವಾಜ್ಞೆ ಪಾಲಿಸುವಲ್ಲಾಗಲಿ ತತ್ಪರತೆಯನ್ನು ತೋರಿಸದೆ ಮುಂದಕ್ಕೆ ಹಾಕುವ ಆಲಸಿಯು, ವಿನಾಕಾರಣವಾಗಿ ಪರರಿಗೆ ತೊಂದರೆಯನ್ನು ಕೊಡುವವನು ತಮೋಗುಣ ಲಕ್ಷಣವಾದ ನಿದ್ರೆಯಲ್ಲಿಯೇ ಕಾಲ ಕಳೆಯುವವನು, ಪರರ ಬಗ್ಗೆ ಯಾವಾಗಲೂ ಕೆಟ್ಟ ವಿಚಾರವನ್ನೇ ಮಾಡಿ ಅವರನ್ನು ವಂಚಿಸುವವನು, ಅತಿಖಳನು, ನೀತಿಯನ್ನು ಹೇಳಿದರೂ ಕೇಳದೆ ಅನೀತಿಯಿಂದ ನಡೆಯುವವನು. ಅಧಮನು, ಎಳ್ಳಷ್ಟು ಸ್ಮೈರಣೆಯಿಲ್ಲದೆ ಅಲ್ಪಕಾರಣಕ್ಕಾಗಿ ಸಿಟ್ಟಿಗೇಳುವವನು, ಸುಸಂಸ್ಕಾರವಿಲ್ಲದ ಹೀನ ಕುಲದಲ್ಲಿ ಹುಟ್ಟಿದವನು. ತನ್ನ ಅಭಿಪ್ರಾಯವು ತಪ್ಪಿದ್ದರೂ ಅದೇ ಸತ್ಯ ಅದೇ ಹಿತಕರವಾದದ್ದೆಂದು ಹಠಸಾಧಿಸುವ ಛಲಿಯು, ದೇವರಲ್ಲಿ ಗುರುಗಳಲ್ಲಿ ಸದ್ಭಾವವಿಲ್ಲದ ನಾಸ್ತಿಕನು, ಪರೀಕ್ಷಿಸಿ ನೋಡಲಾಗಿ ಈ ದುರ್ಗುಣಗಳುಳ್ಳವನು ದುಷ್ಟ ಶಿಷ್ಯನೆಂದು ಹೇಳಿಸಿಕೊಳ್ಳುವನು.

ಗುರುದೂಷಕನು ಪರಪುರುಷಾರ್ಥವಿಲ್ಲದ।
ನುರುಲೋಭಿ ದುರುಳನು ಧೂರ್ತನು ॥
ನಿರಸನು ನಿಷ್ಠುರಾಲಾಪನು ಚೋರನು।
ವರಶಿಷ್ಯನೆನಿಸಲಾರನೆಂದು ॥ 4 ॥

ಸಚ್ಚಿದಾನಂದ ಸ್ವರೂಪನಾದ ಸದ್ಗುರುವಿನಲ್ಲಿ ದೋಷಗಳಿರಲಾರವು ಆದರೆ ಶಿಷ್ಯನಲ್ಲದವನು ಸಾಮಾನ್ಯ ಮನುಷ್ಯನಂತೆ ಗುರುವಿನ ಶರೀರ ನೋಡಿ ಅವರಲ್ಲಿಲ್ಲದ ದೋಷಗಳನ್ನು ಆರೋಪಿಸುವವನು, ಪರಮಸುಖರೂಪವಾದ ಮೋಕ್ಷದ ಅಪೇಕ್ಷೆ ಇಲ್ಲದವನು, ಧನ ಕನಕಗಳಲ್ಲಿ ಅತ್ಯಂತ ಪ್ರೀತಿಯುಳ್ಳವನಾಗಿ ತಾನೂ ಅವುಗಳನ್ನುಪಯೋಗಿಸದೆ (ಉಣ್ಣದೆ) ಅನ್ಯರಿಗೂ ಕೊಡದೆ ಸರ್ಪಗಾವಲಾಗಿ ಅವನ್ನು ರಕ್ಷಿಸಿಕೊಂಡಿರುವ ಲೋಭಿಯು, ಸದ್ಗುಣಗಳನ್ನು ವೈರಿಗಳಂತೆ ದ್ವೇಷಿಸಿ ದುರ್ಗುಣಗಳನ್ನು ಬರಮಾಡಿಕೊಳ್ಳುವ ದುರುಳನು, ಸ್ವಹಿತಕ್ಕಾಗಿ ಜನರನ್ನು ವಂಚಿಸುವ ಧೂರ್ತನು, ಪ್ರೀತಿಯೆಂಬುದನ್ನೇ ಅರಿಯದ ಕಟುಕನು (ನಿರಸನು) ಹೆಜ್ಜೆಹೆಜ್ಜೆಗೆ ಜನರಿಗೆ ಕಠೋರ ಮಾತುಗಳನ್ನಾಡುವವನು, ಪರರ ವಸ್ತುಗಳನ್ನು ಅಪಹರಿಸುವ ಕಳ್ಳನು ಇಂಥ ದುರ್ಗುಣವುಳ್ಳವನು ಯೋಗ್ಯ ಶಿಷ್ಯನಾಗಲಾರನು.

– ಇತಿ ಅಶಿಷ್ಯ ಲಕ್ಷಣ ನಿರೂಪಣೆ –

## 5ನೇ ಸೂತ್ರ

ಶ್ರವಣ ಮನನ ನಿದಿಧ್ಯಾಸನವಿಲ್ಲದೆ ।
ಭವಬಂಧವಳಿಯದು ತನಗೆಂದು ॥

ವೇದಾಂತ ವಾಕ್ಯಗಳ ಅರ್ಥವನ್ನು ಶ್ರೀಗುರು ಮುಖದಿಂದ ಶ್ರುತಿ ಷಡ್ಲಿಂಗಪೂರ್ವಕವಾಗಿ ಕೇಳುವದೇ ಶ್ರವಣವು. ಕೇಳಿದ ವಿಷಯವನ್ನು ಯುಕ್ತಿ ಅನುಮಾನ ದೃಷ್ಟಾಂತಗಳ ಸಹಾಯದಿಂದ ಚಿಂತನ ಮಾಡುವದೇ ಮನನವು. ಮನನದಿಂದ ಅನುಭವಿಸಿದ ಸದ್ವಸ್ತುವಿನ ಸ್ವರೂಪಾಕಾರ ವೃತ್ತಿಯನ್ನು ಸ್ಥಿರಗೊಳಿಸಿಕೊಳ್ಳುವದೇ ನಿದಿಧ್ಯಾಸನವು. ಈ ಸಾಧನಗಳನ್ನು ಮಾಡದೆ ಜನನ ಮರಣ ರೂಪ ಸಂಸಾರಬಂಧನವು ಎಂದೂ ನಾಶವಾಗದು.

ಶ್ರವಣ ಮನನ ನಿಧಿಧ್ಯಾಸನವೆನಿಸುವಂ ।
ತವಿರಳ ಪರತತ್ತ್ವವಿಷಯವ ॥
ಭವಬಂಧವಳಿಯಲಾ ವರಶಿಷ್ಯರಿಗೆ ಗುರು ।
ಸುವಿಚಾರ ಮುಖದಿಂದೆ ತಿಳಿಪುದು ॥ 1 ॥

ಶ್ರೀ ಸದ್ಗುರುಗಳು ಪರಿಪೂರ್ಣ ಅದ್ವಯ ಪರಬ್ರಹ್ಮದ ವಿಷಯ ಕುರಿತು ಆತ್ಮಾ ಮತ್ತು ಅನಾತ್ಮಗಳನ್ನು ಬೇರ್ಪಡಿಸುವ ಸುವಿಚಾರದ ಮೂಲಕ ಯೋಗ್ಯ (ಟಿ) ಶಿಷ್ಯರಿಗೆ ಬೋಧಿಸಿ ಆ ಶ್ರವಣದದ್ವಾರಾ ಮನನ ನಿಧಿಧ್ಯಾಸನಗಳು ಉಂಟಾಗುವಂತೆ ಮತ್ತು ಆದರಿಂದ ಸಂಸಾರದುಃಖರೂಪ ಬಂಧನವು ನಾಶವಾಗುವಂತೆ ತಿಳಿಸಿಕೊಡಬೇಕು.

ಪರಮ ಭಕ್ತಿಯೊಳಧ್ಯಾತ್ಮವನು ತನ್ನನುಭವ ।
ಕರವೆನಿಪಂತೆ ಸದ್ಗುರುವಿಂದ ॥
ನಿರುತವೆನಲು ಕೇಳ್ವವರಗುಣವದು ತಾನೆ ।
ತರುಣಿ ಸುಶ್ರವಣವೆಂದೆನಿಪುದು ॥ 2 ॥

ಅಧ್ಯಾತ್ಮ ತತ್ತ್ವವನ್ನು ತಿಳಿಯಲು ಯೋಗ್ಯತೆ ಪಡೆದ (ತರುಣಿ) ಮೈತ್ರೇಯಿ ಅತ್ಯಧಿಕ ಭಕ್ತಿಯಿಂದ, ಪರಬ್ರಹ್ಮಕ್ಕೆ ಅಭಿನ್ನವಾದ ಪ್ರತ್ಯಗಾತ್ಮಸ್ವರೂಪವನ್ನು ತನ್ನ ಮನಕ್ಕೆ ಅಹುದೆನಿಸಿ ಅನುಭವಕ್ಕೆ ಬರುವಂತೆ, ಶ್ರೋತ್ರಿಯ ಬ್ರಹ್ಮನಿಷ್ಠ ಸದ್ಗುರುವಿನಿಂದ ನಿಯಮಿತವಾಗಿ ಲಕ್ಷ್ಯಗೊಟ್ಟು ಕೇಳುವದೇ ಶ್ರೇಷ್ಠವಾದ ಜ್ಞಾನಕ್ಕೆ ಬೀಜವಾದ ಶ್ರವಣವೆಂದು ಹೇಳಿಸಿಕೊಳ್ಳುವದು.

[ ಟಿಪ್ಪಣಿ :– ಮುನ್ನವೆ ಭಕ್ತಿಕ್ರಿಯೆಯಿಂದಂ ನೆರೆ ಪರಿಶುದ್ಧವಾದ ಬುದ್ಧಿಯನುಳ್ಳ ಸ। ಮುನ್ನತ ಸದ್ಗುಣ ಸಂಪನ್ನರ್ಗೆನಿಜಸ್ವರೂಪಮಿದರೊಳ್ಸಧ್ಯಂ ॥ – ಶ್ರೀ ನಿಜಗುಣರು. ]

ಅನುಭವಗೋಚರ ವೆನಿಸುವ ಶ್ರವಣವ।
ನನುಮಾನ ಯುಕ್ತಿಗಳೊಡಗೂಡಿ ॥
ಅನುದಿನವೆಡೆವರಿಯದೆ ಚಿಂತಿಪುದು ತಾನೆ।
ಮನನವೆನಿಪುದು ಮಾನಿನಿರನ್ನೆ॥ 3 ॥

ಸಭ್ಯ ಸ್ತ್ರೀಯರಲ್ಲಿ ರತ್ನಪ್ರಾಯಳಾದ ಮೈತ್ರೇಯಿ, ಶ್ರೀ ಗುರುಮುಖದಿಂದ ಕೇಳಿದ ಆತ್ಮವಿಷಯವು ತನ್ನ ಅನುಭವಕ್ಕೆ ಬರುವಂತೆ, ಅನುಮಾನ ಪ್ರಮಾಣ ಯೋಗ್ಯಯುಕ್ತಿಗಳ ಸಹಾಯದಿಂದ ಪ್ರತಿನಿತ್ಯ ಬಿಟ್ಟುಬಿಡದೆ ಆತ್ಮಚಿಂತನವನ್ನು ಮಾಡುವದೇ ಮನನವೆಂದು ಕರೆಯಿಸಿಕೊಳ್ಳುವದು. ಈ ಮನನದಿಂದ ಸಕಲ ಸಂಶಯವಳಿದು ಆತ್ಮವು ಅನುಭವಕ್ಕೆ ಬರುವದು.

ಮನನಕ್ಕೆ ಬಂದರ್ಥವನುಭವಗಮ್ಯವೆಂ।
ದೆನಿಸಿ ಸಮಾಹಿತೆಯೊಳು ನಿಂದು ॥
ಜನಿತ ನಿಶ್ಚಯ ವಚ್ಚಳಿಯದೆ ನೆಲೆಯಾದು।
ದನೆ ನಿದಿಧ್ಯಾಸವೆನಿಪರು ॥ 4 ॥

ಶ್ರವಣ ಮನನಗಳಿಂದ ತಾನು ನಿಶ್ಚಯಿಸಿದ ಆತ್ಮತತ್ತ್ವವು ತನ್ನ ಅನುಭವಕ್ಕೆ ಬರುವದು. ಬಳಿಕ ಆತ್ಮಾಕಾರ ವೃತ್ತಿಯು ಸ್ಥಿರವಾಗಿ ಗಾಳಿಯಿಲ್ಲದ ಅಚಲ ದೀಪದಂತೆ ನಿಲ್ಲುವದೇ (ಟಿಪ್ಪಣಿ :– ಅನಾತ್ಮಾಕಾರ ವೃತ್ತಿ ವ್ಯವಧಾನರಹಿತ ಆತ್ಮಾಕಾರ ವೃತ್ತಿ ಸ್ಥಿತಿ ನಿದಿಧ್ಯಾಸನ ಕಹಿಯೆ– ವಿಚಾರಸಾಗರ.) ನಿಧಿಧ್ಯಾಸವೆಂದು ಹೇಳಿಸಿಕೊಳ್ಳುವದು.

ವನಿತೆ ಸುಶ್ರವಣ ಮನನ ನಿದಿಧ್ಯಾಸನ।
ವೆನಿಪವನನುದಿನ ವಲಸದೆ ॥
ಮನವೊಲಿದಭ್ಯಾಸವನು ಮಾಡುತಿರ್ಪುದು।
ತನಗನ್ಯಭಾವನೆಯಳಿವನ್ನೆ॥ 5 ॥

ಹೇ ಪತ್ನಿಯೆ, ತನಗೆ ಅನ್ಯವಾದ ಅನಾತ್ಮ ಭಾವನೆಗಳು ಪೂರ್ಣನಾಶ ವಾಗುವವರೆಗೆ, ಈ ಶ್ರೇಷ್ಠವಾದ ಶ್ರವಣ ಮನನ ನಿದಿಧ್ಯಾಸನರೂಪ ಮೋಕ್ಷ ಸಾಧನ ಗಳನ್ನು ಬೇಸರ ಪಟ್ಟುಕೊಳ್ಳದೆ ಮನಃಪೂರ್ವಕವಾಗಿ ದಿನದಿನವೂ ಮಾಡತಕ್ಕದ್ದು.

– ಇತಿ ಶ್ರವಣಾದಿ ತ್ರಯ ನಿರೂಪಣೆ –

## 6ನೇ ಸೂತ್ರ

ವನಿತಾದಿವಿಷಯಂಗಳನು ವಿಷವೆಂದರಿ ।
ದನೆ ಮುಮುಕ್ಷುವೆನಿಪ್ಪನಿನಿಯಳೆ ॥

ಹೇ ಪ್ರೀಯಳೆ, ಈಲೋಕದಲ್ಲಾಗಲಿ ಅಥವಾ ಪರಲೋಕದಲ್ಲಾಗಲಿ ಇರುವ ಸ್ತ್ರೀಯೆ ಮೊದಲಾದ ಸರ್ವ ವಿಷಯಗಳು ವಿಷದ ಸಮಾನ ಘಾತುಕಗಳಾಗಿವೆ ಎಂದು ತಿಳಿದು ಅವುಗಳನ್ನು ತ್ಯಾಗ ಮಾಡಿ, ತನ್ನ ಯೋಗಕ್ಷೇಮಗಳೆಲ್ಲ ಪ್ರಾರಬ್ಧಕ್ಕನುಸಾರವಾದವುಗಳೆಂದು ನಿಶ್ಚಯಿಸಿ, ಸ್ವರೂಪ ಜ್ಞಾನ ಮಾಡಿಕೊಳ್ಳುವಲ್ಲಿ ಪ್ರಯತ್ನಶೀಲನಾದವನೇ ಮುಮುಕ್ಷುವೆಂದು ಹೇಳಿಸಿಕೊಳ್ಳುವನು.

ವನಜಾಸ್ಯೆ ಕೇಳು ಮುಮುಕ್ಷು ಮುಂತಾದ ಸು ।
ಜನರ ಲಕ್ಷಣವನೊಲಿದು ನಿನ್ನ ॥
ಮನದನುರಾಗವಲರೆ ಪೇಳ್ವೆನಖಿಳ ಸ ।
ನ್ಮುನಿಮತವೆನೆ ವೇದವಿಧಿಯಿಂದ ॥ 1 ॥

ಕಮಲಮುಖಿಯೇ ಕೇಳು, ಮುಮುಕ್ಷು ಅಭ್ಯಾಸಿ ಅನುಭವಿ ಆರೂಢಾದಿ ಸತ್ಪುರುಷರ ಲಕ್ಷಣಗಳನ್ನು (ನೀನವರನ್ನು ಗುರ್ತಿಸುವ ಹಾಗೆ) ನಿನ್ನ ಮನಸ್ಸಿನ ಪ್ರೇಮವು ವಿಕಾಸಗೊಳ್ಳುವಂತೆ ನಾನು ಪ್ರೀತಿಯಿಂದ ವೇದ ಪ್ರಮಾಣಕ್ಕನುಸರಿಸಿ ಎಲ್ಲಮುನಿಶ್ರೇಷ್ಠರು ಒಪ್ಪುವ ರೀತಿಯಲ್ಲಿ ಹೇಳುವೆನು ಕೇಳು.

ಪರಮ ಸುಜ್ಞಾನಾರ್ಥವೆನಿಸಿ ಭಕ್ತಿಯೊಳು ಸ ।
ದ್ಗುರುವನಾಶ್ರಯಿಸಿ ನಂಬುಗೆ ಗೂಡಿ ॥
ಪರಿಚರಿಯಂಗಳ ನಲಸದೆ ಮಾಳ್ಪ ಸ ।
ಚ್ಚರಿತನೆ ಮುಮುಕ್ಷುವೆನಿಕ್ಕು ॥ 2 ॥

ಅತ್ಯಧಿಕವೆನಿಸುವ ತನ್ನ ಸ್ವರೂಪಜ್ಞಾನವನ್ನು ಪಡೆದುಕೊಳ್ಳಬೇಕೆಂಬ ಹಂಬಲವುಳ್ಳವನಾಗಿ ಪ್ರೀತಿಯಿಂದ ಶ್ರೀ ಸದ್ಗುರುವನ್ನು ಆಶ್ರಯಿಸಿ, ಅವನ ಸನ್ನಿಧಾನದಲ್ಲಿ ವಾಸಮಾಡಿಕೊಂಡಿದ್ದು ಸರ್ವವಿಧದಿಂದ ಅವರ ಸೇವಾದಿಗಳನ್ನು ಬೇಸರಿಸದೆ ಮಾಡುತ್ತ ಅವರಿಂದ ಶ್ರವಣಾದಿಗಳನ್ನು ಮಾಡಿಕೊಂಡು ಇರುವ ಅವನು ಮುಮುಕ್ಷು ಎಂದು ಕರೆಯಿಸಿಕೊಳ್ಳುವನು.

ಎಂಜಲಿಸಿದೊಡೆಂತು ನಂಜು ಕೊಲ್ವುದು ಕೊಲು ।
ಗುಂ ಜಗತ್ರಯವನೀ ವಧುವೆಂಬ ॥
ನಂಜು ನೆನಹು ಮಾತ್ರದಿಂದ ವೆಂದದನುಳಿ ।
ದಂಜದಿರ್ಪವನೆ ಮೋಕ್ಷಾರ್ಥಿಯು ॥ 3 ॥

ವಿಷವನ್ನು ಸೇವಿಸಿದಾಗ ಮಾತ್ರ ಅದು ಅವನನ್ನು ಕೊಲ್ಲುವದಲ್ಲದೆ ಅದನ್ನು ನೋಡಿದರಾಗಲಿ ಅಥವಾ ಅದರ ಸಾಮೀಪ್ಯದಲ್ಲಿ ಇದ್ದಾಗಾಗಲಿ ಅದು ಘಾತಿಸದು ಆದರೆ ಸ್ತ್ರೀಯೆಂಬ ವಿಷವು ಮೂರು ಲೋಕಗಳನ್ನು ಅದರ ನೆನಹು ಮಾತ್ರದಿಂದ ನಾಶಮಾಡುವದು. ಆದ್ದರಿಂದ ಮೋಕ್ಷಾಪೇಕ್ಷಿಯು ಈ ಸತ್ಯವನ್ನರಿದು ಸ್ತ್ರೀಯನ್ನು ತ್ಯಜಿಸಿ ಹಾಯಾಗಿ ಇರತಕ್ಕದ್ದು.

ವಿಷಯವೆಲ್ಲವನು ದುರ್ವಿಷವೆಂದು ಕಂಡ ನಿ।
ರ್ವಿಷಯಿ ಮುಮುಕ್ಷುವಹನು ಮುಕ್ತಿ ॥
ವಿಷಯದೊಳೆಂದು ನೀನೊಲವಿಂದೆ ತಿಳಿವುದು।
ಬಿಸಜಾಸ್ಯೆ ಮೈತ್ರೇಯಿ ನಿಜವಿದು ॥ 4 ॥

ವನಿತಾದಿ ಸಕಲ ವಿಷಯಗಳನ್ನು ಭಯಂಕರವಾದ ವಿಷವೆಂದು ತಿಳಿದು ವಿಷಯಗಳಲ್ಲಿ ಆಸಕ್ತಿ ಇಲ್ಲದವನೇ ಮುಮುಕ್ಷುವೆಂದು ಕರೆಯಲ್ಪಡುವವನು. ಕಮಲಮುಖಿಯಾದ ಮೈತ್ರೇಯಿ, ಮುಕ್ತಿಯ ಸಂಬಂಧವಾಗಿ ಇದು ಸತ್ಯವಾಗಿರುವದೆಂದು ನೀನು ತಿಳಿಯಬೇಕು. ಇದರಲ್ಲಿ ಯಾವ ಸಂಶಯವಿಲ್ಲ.

ಸುರೆಗುಡಿದಲ್ಲದೆ ಮರುಳೆನಿಸದು ವಧು।
ಸುರೆ ನೋಡಿ ನುಡಿಸಿ ನೆನೆವರನು ॥
ಪಿರಿದು ವಿಕಳತೆ ಗೊಳಿಪುದರಿಂ ದದನೆಂದು।
ವರಿಸದಾತನೆ ಮುಕ್ತಿರತನಕ್ಕು ॥ 5 ॥

ಮದ್ಯವು ಕುಡಿದರೆಮಾತ್ರ ಅಮಲು (ಮಬ್ಬು) ತರುವದು. ಆದರೆ ಸ್ತ್ರೀಯೆಂಬ ಮದ್ಯವು ನೋಡಿದವರನ್ನು, ಮಾತಾಡಿಸಿದವರನ್ನು ಮತ್ತು ಸ್ಮರಣ ಮಾಡಿದವರನ್ನು ಸಹ ಅತ್ಯಂತವಾಗಿ ಭ್ರಮಿಷ್ಟರನ್ನಾಗಿ ಮಾಡುವದು. ಆದ್ದರಿಂದ ಆ ಸ್ತ್ರೀಯನ್ನು ಗ್ರಹಿಸದೆ ಇದ್ದವನೇ ಮುಮುಕ್ಷುವಾಗಿರುವನು.

ತನಗೆ ನಿಷ್ಕಂಟಕಮೆನಿಸಿ ರಹಸ್ಯದೊ।
ಳನುಕೂಲ ವಿಷಯಮೊಂದೊದಗಲು ॥
ಮನವೆಳಸದೆ ನೇತಿಗಳೆವ ನಿರಾಸಕ।
ನೆನಿಪನೆ ವರಮುಮುಕ್ಷುವೆನಿಕ್ಕು ॥ 6 ॥

ತನಗೆ ಏನೊಂದೂ ಆತಂಕವಿಲ್ಲದೆ ಏಕಾಂತದಲ್ಲಿ ತನ್ನ ಇಷ್ಟಾನುಸಾರವಾಗಿರುವ ಯಾವದೊಂದು ವಿಷಯವು ತನಗೆ ಪ್ರಾಪ್ತವಾಗಲು ಅದನ್ನು ಪಡೆಯಬೇಕೆಂದು ಬಯಸದೆ ತಿರಸ್ಕಾರ ಮಾಡಲು ಸಮರ್ಥನಾದ ಪರಮ ವೈರಾಗ್ಯಶೀಲನೇ ತೀವ್ರ ಮುಮುಕ್ಷುವೆಂದು ಹೇಳಿಸಿಕೊಳ್ಳುವನು.

ಬಯಸಿದೊಡಾಗಿ ಬಯಸದಿರೆ ಪೋಗಲು।
ಬಯಸುವದುಚಿತವದಿಲ್ಲಾಗಿ॥
ಬಯಸಲಾಗದು ವಿಷಯವನು ಮುಮುಕ್ಷುನಿ।
ಶ್ಚಯವಿದೆಲ್ಲವು ದೈವಗತಿಯೆಂದು ॥ 7 ॥

ನಿನ್ನ ಪ್ರಾರಬ್ಧಕ್ಕೆ ಅನುಸರಿಸಿ, ನೀನು ಬಯಸದೆ ಇದ್ದರೂ ರೋಗಾದಿಗಳ ಬಾಧೆ ಬರುವವು. ಅದೇ ರೀತಿ ಪುಣ್ಯಫಲವಾದ ಸುಖಗಳೂ ಬಂದು ಭೋಗವೀಯುವವು. ಈ ದೈವಗತಿಯು ಅರ್ಥಾತ್ ''ಬಾರದು ಬಪ್ಪದು, ಬಪ್ಪುದು ತಪ್ಪದು'' ಎಂಬ ನಿಯಮವು ಮುಮುಕ್ಷುವಿಗೂ ಅನ್ವಯಿಸುವದು. ಆದ್ದರಿಂದ ಆತನು ವಿಷಯವನ್ನು ಬಯಸಬಾರದು. ತನುಭೋಗಗಳಲ್ಲಿ ತಾನು ಶಾಂತನಾಗಿರಬೇಕು. (ಇದೇ ಭಾವವನ್ನು ಮುಂದಿನ ಪದದಲ್ಲಿ ಮುಂದುವರಿಸುವರು.)

ಬಯಸದಿರ್ದೊಡೆ ಸುಖವಹುದು ಬಯಸೆ ದುಃಖ।
ಮಯವದರಿಂದಖಿಳಾರ್ಥವ॥
ಬಯಸಲಾಗದು ಮುಮುಕ್ಷುವೆನಿಪನದು ಶಾಸ್ತ್ರ।
ಚಯದನುಮತವಿದು ಪ್ರಿಯತಮೆ ॥ 8 ॥

ಅಧಿಕ ಪ್ರೀತಿಗೆ ಪಾತ್ರಳಾದ ಮೈತ್ರೇಯಿ, ಯಾವ ವಿಷಯವನ್ನೂ ಬಯಸದಿದ್ದರೆ ಆನಂದವೆ ಇರುವದು. ತದ್ವಿರುದ್ಧವಾಗಿ ಏನನ್ನಾದರೂ ಅಪೇಕ್ಷೆ ಮಾಡಿದ್ದಾದರೆ ಅತ್ಯಂತ ದುಃಖವಾಗುವದು. ಆದ್ದರಿಂದ ಮೋಕ್ಷ ಬಯಸುವವನು ಯಾವ ವಿಷಯವನ್ನು ಅಪೇಕ್ಷಿಸದೆ ಪರಮವೈರಾಗ್ಯಶೀಲನಾಗಬೇಕು. ಇದು ಕಲ್ಪನೆ ಮಾಡಿ ಹೇಳಿದ ಮಾತಾಗಿರದೆ ಸರ್ವಶಾಸ್ತ್ರಗಳ ಅನುಶಾಸನವಾಗಿರುವದು.

ವಿಷಯವಲ್ಲರ್ರಿಯೆ ನಿರ್ವಿಷಯವಾದಾತ್ಮನು।
ವಿಷಯಿಗೆ ತೆಂಕಲೈದುವನಿಗೆ॥
ಬಿಸಜದಳಾಯತ ಲೋಚನೆ ಕಾಣಲ್ಕೆ।
ವಿಷಯವೆನಿಸದವೋಲಮರಾದ್ರಿ॥ 9 ॥

ಹೇಗೆ ದಕ್ಷಿಣ ದಿಕ್ಕಿಗೆ ಪ್ರಯಾಣಿಸುವವನಿಗೆ ಉತ್ತರದಲ್ಲಿದ್ದ ಮೇರು (ಹಿಮಾಲಯ) ಪರ್ವತವು ಗೋಚರವಾಗುವದಿಲ್ಲವೋ ಹಾಗೆ, ಕಮಲದಳದಂತೆ ಕಣ್ಣುಳ್ಳ ಮೈತ್ರಾದೇವಿ, ನಿರ್ವಿಷಯನಾದ ಆತ್ಮನು ವಿಷಯಾಸಕ್ತನಾದ ಪಾಮರನಿಗೆ ವಿಷಯವಾಗಲಾರನು, ಅಂದರೆ ಅನುಭವಕ್ಕೆ ಬರಲಾರನು.

ಅದರಿನೀ ತ್ರೈಲೋಕ್ಯದೊಳಗೊಂದನೇನನು।
ವದಿಸದೆ ತನ್ನನರಿದು ನಿತ್ಯ॥
ಪದದೊಳು ಪದುಳದಿಂದೊಡಗೂಡಿ ನೆರೆನಿಲು।
ವುದೆ ಬುದ್ಧಿ ಮೋಕ್ಷಾರ್ಥಿಯೆನಿಪಂಗೆ॥ 10 ॥

ಈ ಕಾರಣದಿಂದ, ಕೇವಲ ಮೋಕ್ಷವನ್ನೇ ಅಪೇಕ್ಷಿಸುವವನು, ಈ ಮೂರು ಲೋಕಗಳಲ್ಲಿ ಬೇರೇನೊಂದನ್ನೂ ಬಯಸದೆ ಪರಮ ವಿರಕ್ತನಾಗಬೇಕು. ನಂತರ ಶ್ರೀಗುರುವಿನಿಂದ ತಾನರೆಂಬುದನ್ನು ತಿಳಿದು, ಸಚ್ಚಿದಾನಂದ ನಿತ್ಯ ಪರಿಪೂರ್ಣಾತ್ಮ ಪದದಲ್ಲಿ ಕರಿಗೊಂಡು ಸುಸ್ಥಿರವಾಗಿ ನೆಲೆ ನಿಂತು ಸಂತೋಷದಿಂದ ಇರುವದೇ ಮುಮುಕ್ಷುವಿನ ಕರ್ತವ್ಯವಾಗಿದೆ.

– ಇತಿ ಅಭ್ಯಾಸಿಯ ಲಕ್ಷಣ ನಿರೂಪಣೆ –

## 7ನೇ ಸೂತ್ರ

ದ್ವೈತವಿರಕ್ತನದ್ವೈತಾನುರಕ್ತನ–।
ಪ್ಪಾತನಭ್ಯಾಸಿಯೆಂದೆನಿಪನು ॥

ನಾಮರೂಪಾತ್ಮಕ ದ್ವೈತಪ್ರಪಂಚದಲ್ಲಿ ಅನಾಸಕ್ತನು ಮತ್ತು ಸಚ್ಚಿದಾನಂದ ನಿತ್ಯ ಪರಿಪೂರ್ಣವಾಗಿ ಇರುವ ವಸ್ತು ಒಂದೇ ಎಂಬ ಭಾವದಲ್ಲಿ ನಿಷ್ಠೆಯುಳ್ಳವನೂ ಆದ ಸಾಧಕನು ಅಭ್ಯಾಸಿ ಎಂದು ಹೇಳಿಸಿಕೊಳ್ಳುವನು.

ಯಮನಿಯಮಾನ್ವಿತನಚಲನನಾಲಸ್ಯ ।
ನಮಿತಾತ್ಮನಿಷ್ಠನಾ ಶ್ರವಣಾದಿ ॥
ಕ್ರಮವಿದನಮಲ ನಖಿಳ ತತ್ತ್ವಭಾವಿ ನಿ।
ರ್ಮಮನಾದೊಡಭ್ಯಾಸಿಯೆನಿಪನು ॥ 1 ॥

ಯಮನಿಯಮಾಂಗಗಳಲ್ಲಿ ನಿರ್ದೇಶಿಸಿದ ಸಕಲ ಸದ್ಗುಣಗಳನು ಸಾಧಕನು ಅಳವಡಿಸಿಕೊಳ್ಳುವನು. ಸ್ಥಿರಬುದ್ಧಿಯುಳ್ಳವನೂ ಜ್ಞಾನಸಾಧನೆಯಲ್ಲಿ ಆಲಸ್ಯವಿಲ್ಲದವನೂ ಇರುವನು. ಅನಾದ್ಯನಂತವಾದ ಆತ್ಮನಲ್ಲಿ ನಿಷ್ಠೆಯುಳ್ಳವನಿರುವನು. ಶ್ರೀಗುರುಮುಖದಿಂದ ತಾನಾರೆಂಬ ವಿಷಯವನ್ನು ಶ್ರವಣ ಮಾಡುವನು. ಕೇಳಿ ತಿಳಿದ ವಿಷಯವನ್ನು ಅನುಮಾನ ಯುಕ್ತಿ ದೃಷ್ಟಾಂತಗಳಿಂದ ಮನನ ಮಾಡುವನು. ಮನನದಿಂದ ಪಡೆದ ಆತ್ಮಾಕಾರ ವೃತ್ತಿಯಲ್ಲಿ ನೆಲೆ ನಿಲ್ಲುವ ನಿಧಿಧ್ಯಾಸನವನ್ನು ಆಚರಿಸುವನು. ಶುದ್ಧಾಂತಃಕರಣವುಳ್ಳವನಾಗಿ ಎಲ್ಲ ತತ್ತ್ವಗಳನ್ನು ತಿಳಿಯುವನು. ದೇಹಾದಿ ಸರ್ವಪ್ರಪಂಚದಲ್ಲಿ ಮಮಕಾರವನ್ನು ತ್ಯಜಿಸುವನು. ಇವನೆ ಅಭ್ಯಾಸಿಯೆನಿಸುವನು.

ತನಗಾತ್ಮ ವಿಷಯದೊಳನುಭೂತಿ ಯಾಯಾಸ।
ವಿನಿತಿಲ್ಲದೊದಗಿ ನಿಜಾನಂದ ॥
ಜನಿಸಿ ಸುಸ್ಥಿರ ಬುದ್ಧಿಯೊಳು ದೃಢಮಾಗಿರ।
ಲೆನಿಸುವನಭ್ಯಾಸಿಯವನೆಂದು ॥ 2 ॥

ತನಗೆ ಎಷ್ಟೂ ತೊಂದರೆ ಇಲ್ಲದೆ ಆತ್ಮಸ್ವರೂಪದ ಅನುಭವವಾಗುವದು. ಆಗ ಸ್ವರೂಪಾನಂದವು ಪ್ರಕಟವಾಗಿ ಚಂಚಲತೆಯಿಲ್ಲದ ಶುದ್ಧ ಬುದ್ಧಿಯಲ್ಲಿ (ದೇಹಾತ್ಮ ಬುದ್ಧಿಯಂತೆ) ದೃಢವಾಗಿ ಅದು ನೆಲೆನಿಲ್ಲುವದು. ಇಂತಹ ಸ್ಥಿತಿಯನ್ನು ಪಡೆದ ಸಾಧಕನು ಅಭ್ಯಾಸಿಯೆನಿಸುವನು.

ಸ್ಮೃತಿಯೊಳು ಚಿತ್ರ ವಿಚಿತ್ರ ವಿಷಯದೊಳು।
ಗತಿಗಳೊಳಖಿಳ ಸಿದ್ಧಿಗಳೊಳು॥
ಸತಿ ಕೇಳು ದೇಹಾದಿಯೊಳು ನಿಜವೈರಾಗ್ಯ।
ರತನಾದೊಡಭ್ಯಾಸಿಯೆನಿಪನು ॥ 3 ॥

ಹೇ ಸತಿಯೆಳೇ ಕೇಳು, ವಿಷಯ ಧಾರಣ ಮಾಡುವಲ್ಲಿ ಸುಂದರ ಮತ್ತು ಆಶ್ಚರ್ಯಕರವಾದ ಸಂಗತಿಗಳಲ್ಲಿ ಸ್ವರ್ಗಾದಿ ಗತಿಗಳಲ್ಲಿ ಅಣಿಮಾ ಮಹಿಮಾ, ಲಘಿಮಾ ಪ್ರಾಪ್ತಿ ಪ್ರಾಕಾಮ್ಯಾದಿ ಸಕಲ ಸಿದ್ಧಿಗಳಲ್ಲಿ ದೇಹ, ಇಂದ್ರಿಯ ಮನ ಬುದ್ಧ್ಯಾದಿಗಳಲ್ಲಿ ಯಥಾರ್ಥವಾದ ವೈರಾಗ್ಯ (ಟಿ) ತಾಳಿ, ಅವುಗಳಲ್ಲಿ ಪುನಃ ಆಸಕ್ತಿ ಹೊಂದದವನು ಅಭ್ಯಾಸಿ ಎಂದು ಹೇಳಿಸಿಕೊಳ್ಳುವನು.

ಅತಿಶಯದಿಂದಾತ್ಮರತಿ ಶಾಸ್ತ್ರರತಿ ಕರ್ಮ।
ರತಿ ಬಳಿಕಭ್ಯಾಸದೆಡೆಯೊಳು॥
ರತಿ ಲೋಕ ಭಯದೊಳು ವಿರತಿಯುಳ್ಳಾತನೆ।
ಸತಿ ಕೇಳಭ್ಯಾಸಿಯೆಂದೆನಿಪನು ॥ 4 ॥

ಹೇ ಮಡದಿಯೇ ಕೇಳು, ಶಾಸ್ತ್ರಶ್ರವಣ ಮಾಡುವದು, ಆತ್ಮಾನಾತ್ಮಸುವಿಚಾರದಲ್ಲಿ ತಲ್ಲೀನನಿರುವದು, ಆತ್ಮನನ್ನು ತಿಳಿದುಕೊಳ್ಳುವದು, ಆತ್ಮಚಿಂತನರೂಪ ಅಭ್ಯಾಸ ಮಾಡುವದು, ಈ ಎಲ್ಲ ವಿಷಯಗಳಲ್ಲಿ ಸಾಧಕನು ಅತ್ಯಧಿಕವಾದ ಪ್ರೀತಿಯುಳ್ಳವನಾಗಿರುವನು. ಆದರೆ ತನ್ನ ಬಗ್ಗೆ ಲೋಕದ ಜನರು ಏನೆನ್ನುವರೊ ಎಂಬ ಭಯದಲ್ಲಿ ಮಾತ್ರ ವೈರಾಗ್ಯವುಳ್ಳವನಾಗಿರುವನು. ಇವನೇ ಅಭ್ಯಾಸಿಯೆನಿಸುವನು.

[ ಟಿಪ್ಪಣಿ :– ಯಾಕೆ ವಿರತಿಯನುಳಿದು ಹೀನ ವಿಷಯವನೊಲಿವೆ। ಕಾಕು ಮಾನಸವೆ ನಿನಗದ ರೊಳೇನುಂಟು ॥ ಗತಿಯೊಳುತ್ತಮ ಶಂಭುಲಿಂಗವಾಗಿಹ ಮುಕ್ತಿ। ಯತಿಶಯವನುಳಿದು ಲೌಕಿಕದೊಳೊಡವೆರವೆ ॥ (ಜೀವಸಂ. ಸ್ಥಳ 15) ]

– ಇತಿ ಅಭ್ಯಾಸಿಯ ಲಕ್ಷಣ ನಿರೂಪಣೆ –

## 8ನೇ ಸೂತ್ರ

ದ್ವೈತಾದ್ವೈತವನುಳಿದವನನುಭವಿ ಕೃತ್ಯ ।
ಜಾತವಿಲ್ಲದವನಾರೂಢನು ॥

ತಾನು ಇದಿರೆಂಬ ಭೇದ ಭಾವವೇ ದ್ವೈತವು. ನಿಜವಾಗಿ ಇರುವದು ಒಂದೇ ಒಂದು ಸದ್ವಸ್ತುವೆಂಬ ಭಾವವೇ ಅದ್ವೈತವು. ಇವೆರಡು ಭಾವಗಳನ್ನು ತ್ಯಜಿಸಿದವನು ಅನುಭವಿಯು. ಮಾಡತಕ್ಕ ಕರ್ತವ್ಯವು ಏನೊಂದೂ ಇಲ್ಲವೆಂದು ತಿಳಿದು ಸುಮ್ಮನಿರುವವನು ಆರೂಢನೆಂದು ಹೇಳಿಸಿಕೊಳ್ಳುವನು.

ಸ್ಮೃತಿಮಾತ್ರದಿಂದಾತ್ಮರತಿ ಸುಖ ವಾಯಾಸ।
ಗತಿದೋರದಳವಟ್ಟು ಚಲಿಸದೆ॥
ಮತಿಯೊಳುದಾರತೆ ಸಮತೆ ಚಿತ್ತದೊಳಿರೆ।
ಸತಿ ತಿಳಿ ಯನುಭವಿಯವನೆಂದು ॥ 1 ॥

ಹೇ ಮಡದಿಯೆ, ಕರ್ಮ ಉಪಾಸನೆಗಳನ್ನು ಆಚರಿಸಿ ಶ್ರಮಪಟ್ಟರೂ ಪ್ರಾಪ್ತವಾಗದ ಆತ್ಮಾನುಭವವನ್ನು, ಕೇವಲ ಸ್ಮರಣ ಮಾತ್ರ ಮಾಡುವದರಿಂದ ಪಡೆಯುವನು. ಆತ್ಮಸ್ವರೂಪದಲ್ಲಿ ಚಿತ್ತವು ರಮಿಸಲು ಆತ್ಮಾನಂದವು ಪ್ರಕಟವಾಗಿ ಸಂಶಯಾದಿಗಳಿಂದ ಚಂಚಲವಾಗದೆ ಸ್ಥಿರವಾಗಿ ನಿಲ್ಲುವದು. ಬುದ್ಧಿಯಲ್ಲಿ ಔದಾರ್ಯವು ಗಟ್ಟಿಗೊಳ್ಳುವದು. ಚಿತ್ತದಲ್ಲಿ ಸಮಭಾವವು ಪ್ರತೀತಿಯಾಗಿ ಪೂರ್ಣಾತ್ಮನ ಭಾವದಲ್ಲಿಯೇ ಇರುವನು. ಇವನು ಅನುಭವಿಯೆಂದು ತಿಳಿ.

ರತಿಯಾತ್ಮರತಿಶಾಸ್ತ್ರರತಿಕರ್ಮರತಿಯೋಗ।
ರತಿ ಲೋಕಭೀತಿ ವಿರತಿಗಳ॥
ತತಿಯೊಳು ವೈರಾಗ್ಯ ಜನಿಸಿದೊಡಾತನೆ।
ಸತಿ ಯನುಭವಿಯೆಂದು ತಿಳಿ ನೀನು ॥ 2 ॥

ಎಲೆ ಮಡದಿಯೆ, ಆತ್ಮಚಿಂತನ, ಶಾಸ್ತ್ರಶ್ರವಣಾದಿಗಳು, ಸತ್ಕರ್ಮಾಚರಣೆ ಇವುಗಳಲ್ಲಿ ಪ್ರೀತಿ ಇರುವದು, ಲೋಕದ ಭಯದಲ್ಲಿ ವೈರಾಗ್ಯ ಅಥವಾ ಅನಾಸಕ್ತಿ ಇರುವದು, ಇಂತು ವೈರಾಗ್ಯವು ಅವನಲ್ಲಿ ಉಂಟಾದರೆ, ಅವನು ಅನುಭವಿಯೆಂದು ನೀನು ತಿಳಿ.

ತನು ಮನೋಧನ ಧಾನ್ಯ ವನಿತಾತ್ಮಜಾದಿಗ।
ಳೆನಿಪಲ್ಲಿ ರತಿ ವಿರತಿಗಳೊಮ್ಮೆ॥
ಜನಿಸದೆ ನಿಜಭಾವನೆಯೊಳೊಂದಿ ನಿಂದನೆಂ।
ದೆನಲವ ನಾರೂಢನೆನಿಪನು ॥ 3 ॥

ಶರೀರ, ಮನಸ್ಸು, ದ್ರವ್ಯ, ಕಾಳುಕಡಿ, ಮಡದಿ ಮಕ್ಕಳು ಮೊದಲಾದ ವಿಷಯಗಳಲ್ಲಿ ರತಿ (ಆಸಕ್ತಿ) ಅಥವಾ ವಿರತಿ ಒಮ್ಮೆಯೂ ಪ್ರತೀತಿಯಾಗದೆ, ಆತ್ಮಾಕಾರ ವೃತ್ತಿಯಲ್ಲಿಯೇ ದೃಢವಾಗಿ ನೆಲೆನಿಂತವನು ಆರೂಢನೆಂದು ಹೇಳಿಸಿಕೊಳ್ಳುವನು.

ವಿಷಯಂಗಳೊಳು ಭೋಗವಿಷಯಂಗಳೊಳು ತತ್ತ್ವ।
ವಿಷಯಂಗಳೊಳು ಕರ್ಮಕುಲವೆಂಬ ॥
ವಿಷಯಂಗಳೊಳು ರತಿವಿರತಿಯನುಳಿದ ನಿ।
ರ್ವಿಷಯಿ ಯಾರೂಡನೆನಿಸುತಿರ್ಕು ॥ 4 ॥

ದೇಹೇಂದ್ರಿಯ ಮನಾದಿ ಕರಣಗಳಲ್ಲಿಯೂ, ಶಬ್ದಾದಿ ವಿಷಯಗಳಲ್ಲಿಯೂ, ಭೂಮ್ಯಾದಿ ಪಂಚಭೂತಗಳು ಅಥವಾ ಇಪ್ಪತ್ತೈದು ತತ್ತ್ವಗಳಲ್ಲಿಯೂ, ಪ್ರಾರಬ್ಧಾದಿ ಕರ್ಮ ಫಲಗಳಲ್ಲಿಯೂ, ಪ್ರೀತಿ ಅಪ್ರೀತಿಗಳೆರಡನ್ನೂ ತ್ಯಜಿಸಿ, ನಿರ್ವಿಷಯನಾಗಿ ಎಂದರೆ ತಾನು ವಿಷಯೀಯಾಗದೆ ಇರುವವನು. ಇವನೇ ಆರೂಢನೆಂದೆನಿಸಿಕೊಳ್ಳುವನು.

ತನಗೆ ನಿಖಿಳ ಕರ್ಮದೊಳು ವಿಷಯಂಗಳೊ।
ಳಿನಿಸು ಸಂಕಲ್ಪ ವಿಕಲ್ಪನೆ॥
ಜನಿಸದೆ ಸರ್ವ ಸಮತ್ವಭಾವನೆಯುಳ್ಳ।
ವನು ತಾನೆ ಯಾರೂಢನೆನಿಪನು ॥ 5 ॥

ತನಗೆ ಎಲ್ಲ ಕರ್ಮಗಳಲ್ಲಿ ಶಬ್ದಾದಿ ಸರ್ವ ವಿಷಯಗಳಲ್ಲಿ ಸ್ವಲ್ಪವೂ ಒಳ್ಳೆಯ ಕಲ್ಪನೆಯಾಗಲಿ ಅಥವಾ ಇತರ ಕಲ್ಪನೆಯಾಗಲಿ ಉಂಟಾಗದೆ ಎಲ್ಲೆಡೆಯಲ್ಲಿ ಸಮಭಾವ ಎಂದರೆ ಸಚ್ಚಿದಾನಂದ ಸ್ವರೂಪಸ್ಥಿತಿಯನ್ನು ಅನುಭವಿಸುವವನು ಆರೂಢನೆಂದು ಕರೆಯಿಸಿಕೊಳ್ಳುವನು.

ತನಗೊಂದು ಬಾಧೆ ಸಂಜನಿಸದೆ ಕರಣೀಯ।
ವಿನಿತಿಲ್ಲವೆನಿಸಿ ಪೂರ್ಣಾನಂದ॥
ಘನ ಚಿದಚಲ ನಿರ್ವಿಕಲ್ಪ ನಿರ್ದ್ವಂದ್ವಾತ್ಮ।
ನೆನಿಪನಾರೂಢನೆಂದರಿವುದು ॥ 6 ॥

ಆಧ್ಯಾತ್ಮಿಕಾದಿ ಯಾವದೊಂದು ದುಃಖವು ತನಗಿಲ್ಲವಾಗಿ, ಮಾಡಬೇಕಾದ ಕರ್ತವ್ಯವು ತನಗೆ ಎಷ್ಟು ಮಾತ್ರವೂ ಇಲ್ಲವೆನಿಸಿ, ತಾನು ಕಾಲಾದಿ ತ್ರಿವಿಧ ಪರಿಚ್ಛೇದ ರಹಿತನಾದ ಪೂರ್ಣರೂಪನೂ, ದುಃಖ ಮಿಶ್ರಿತವಲ್ಲದ ಆನಂದದ ಗಟ್ಟಿಯೂ, ಶುದ್ಧಚೈತನ್ಯ ಸ್ವರೂಪನೂ, ಪೂರ್ಣನಿರುವದರಿಂದ ನಿಶ್ಚಲನೂ, ತಾನೇ ತಾನಾದ ನಿರ್ವಿಕಲ್ಪರೂಪನೂ, ಸುಖದುಃಖಾದಿ ಸರ್ವದ್ವಂದ್ವ ರಹಿತನೂ ತಾನು ತನ್ನಂತೆ ಇರುವವನೂ ಆದವನು ಆರೂಢನೆಂದು ತಿಳಿಯಬೇಕು.

— ಇತಿ ಅನುಭವಿ ಹಾಗೂ ಆರೂಢರ ಲಕ್ಷಣ ನಿರೂಪಣೆ —

## 9ನೇ ಸೂತ್ರ

ರಾಗವಿರಾಗತನ್ಮಿಶ್ರವಮುಳ್ಳವರಲ್ಲಿ ।
ಯೋಗಿಸು ಕರ್ಮಚಿದ್ಭಕ್ತಿಯ ॥

ವಿಷಯಾಸಕ್ತಿಯುಳ್ಳವರಿಗೆ ಕರ್ಮಕಾಂಡವನ್ನು, ವೈರಾಗ್ಯವುಳ್ಳವರಿಗೆ ಜ್ಞಾನಕಾಂಡವನ್ನು, ರಾಗ ವಿರಾಗಗಳೆರಡೂ ಇರುವವರಿಗೆ ಉಪಾಸನಾ ಕಾಂಡವನ್ನು ಗುರುಗಳು ಜೋಡಿ (ಯೋಜಿ)ಸಬೇಕು. ವೈದ್ಯರು ರೋಗಕ್ಕನುಸರಿಸಿ ಬೇರೆ ಬೇರೆ ಮಾತ್ರೆಗಳನ್ನು ಕೊಡುವಂತೆ, ಗುರುಗಳು ಶಿಷ್ಯರ ಅಧಿಕಾರಕ್ಕೆ ತಕ್ಕಂತೆ ಆಯಾ ಕಾಂಡಗಳನ್ನು ಹೊಂದಿಸಿ ಬೋಧಮಾಡಬೇಕು.

**ರಾಗಿಗೆ ಕರ್ಮದೊಳಧಿಕಾರವಹುದು ವಿ।**
**ರಾಗಿಗೆ ಜ್ಞಾನದೊಳಧಿಕಾರ॥**
**ರಾಗವಿರಾಗಮುಳ್ಳವನಿಗೆ ನಿಜಭಕ್ತಿ।**
**ಯೋಗದೊಳಧಿಕಾರವೆನಿಸುಗು ॥ 1 ॥**

ವಿಷಯಾಸಕ್ತನಿಗೆ ಕರ್ಮಕ್ಕೆ ಅಧಿಕಾರವಿರುವದರಿಂದ ಸತ್ಕರ್ಮಾದಿಗಳನ್ನೇ ಹೇಳಬೇಕು. (ಅವನು ಜ್ಞಾನಕ್ಕೆ ಅಧಿಕಾರಿಯಾಗಲಾರನು) ಜ್ಞಾನಕ್ಕೆ ಅಧಿಕಾರಿಯಾದ ಉತ್ತಮನಿಗೆ ತಾನಾರು ತನ್ನ ಸ್ವರೂಪವೇನು, ಎಂಬ ವಿಚಾರವನ್ನು ತಿಳಿಸಬೇಕು. ಹಾಗೆಯೇ ಮಧ್ಯಮನಿಗೆ ಉಪಾಸನೆಯನ್ನು ಬೋಧಿಸುವದರಿಂದ ಅವನು ಶುದ್ಧಾಂತಃಕರಣನಾಗಿ ಕ್ರಮೇಣ ಜ್ಞಾನಕ್ಕೆ ಅಧಿಕಾರಿಯಾಗುವನು.

**ಶ್ರುತಿಯೊಳು ಬೋಧಿತವೆನಿಸುವ ಕರ್ಮದ।**
**ಗತಿಯೆರಡಲ್ಲಿ ಪ್ರವರ್ತಕ॥**
**ನುತನಿವರ್ತಕಮಿವು ತಾವಸತ್ಕೃತಿಯು ಸ।**
**ತ್ಕೃತಿಯೆಂದು ಪರಿವಿಡಿದೆಸವವು ॥ 2 ॥**

(1ನೇ ಸಂಧಿ ಸೂತ್ರ 15 ಮತ್ತು 16 ರಲ್ಲಿ ಇದೇ ವಿಷಯ ವಿಸ್ತಾರವಾಗಿ ಹೇಳಿದ್ದಾರೆ). ವೇದ ಉಪನಿಷತ್ತುಗಳಲ್ಲಿ ಬೋಧಿಸಿದ ಕರ್ಮವು ಎರಡು ಪ್ರಕಾರವಾಗಿದೆ. ಪ್ರವರ್ತಕ ಕರ್ಮವೊಂದು ಮತ್ತು ಸ್ತುತಿಗೆ ಯೋಗ್ಯವಾದ ಇನ್ನೊಂದು ನಿವರ್ತಕ ಕರ್ಮವು. ಅವು ಕ್ರಮವಾಗಿ ತ್ಯಾಗಯೋಗ್ಯವಾದುದು ಮತ್ತು ಮಾಡಲರ್ಹ ವಾದದ್ದೆಂದೆನಿಸಿಕೊಳ್ಳುವವು. ಯಾಕೆಂದರೆ ಮೊದಲನೆಯದು ಜನನ ಮರಣರೂಪ ಸಂಸಾರಕ್ಕೆ ಕಾರಣವಾದರೆ ಎರಡನೆಯದು ಸಂಸಾರ ದುಃಖ ಸಾಗರದಿಂದ ದಾಟಿಸುವ ಮುಕ್ತಿಮಾರ್ಗವು. (ಟಿ)

[ಟಿಪ್ಪಣಿ:– "ಸಮವೂ ಶಾಂತವೂ ಸಚ್ಚಿದಾನಂದವೂ ಆದ ಬ್ರಹ್ಮವೇ ನಾನಿದ್ದೇನೆ. ಅಸತ್ಯವಾದ ದೇಹ ಸಂಘಾತ ನಾನಲ್ಲವೆಂದು ಸ್ವಾನುಭವ ಪೂರ್ವಕ ತಿಳಿಯುವದೇ ಜ್ಞಾನ"– ಗಣಪತರಾವ ಮಹಾರಾಜರು.]

[ಟಿಪ್ಪಣಿ:– ತೋರುವ ವಸ್ತುಗಳೆಲ್ಲ ಅಡಗಿ ತಾನೊಬ್ಬನೇ ತನ್ನ ಅನುಭವರೂಪದಿಂದ ಉಳಿದರೆ ಅದೇ ನಿಜಮುಕ್ತಿ]

ಭಾಮಿನಿ ಕೇಳು ವರ್ಣಾಶ್ರಮದೊಡನೊಂದಿ।
ಕಾಮ ಸಂಕಲ್ಪದ ಮನದಿಂದ॥
ನೇಮಿಸಿ ಮಾಳ್ಪಕರ್ಮಕ್ಕೆ ಪ್ರವರ್ತಕ।
ನಾಮವದಹುದು ಸಂಸೃತಿ ಬೀಜ॥ 3 ॥

ಪ್ರಿಯ ಸತಿಕೇಳು. ಕರ್ಮಿಗಳು ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳಿಗನುಸರಿಸಿ, ಮನದಲ್ಲಿ ಬೇರೊಂದು ಕಾಮನೆ ಮತ್ತು ಸಂಕಲ್ಪದೊಡನೆಕೂಡಿ ಮಾಡುವ ಕರ್ಮಕ್ಕೆ ಪ್ರವರ್ತಕವೆಂದು ಕರೆಯುವರು. ಇದು ಸಂಸಾರಕ್ಕೆ ಬೀಜವು.

ಬಯಸದೆ ಮಾಳ್ಪಸದ್ವಿಧಿಯೆ ಬ್ರಹ್ಮಾರ್ಪಿತ।
ಕ್ರಿಯೆ ನಿವರ್ತಕಮೆನಿಸುಗುಮದು॥
ಪ್ರಿಯತಮೆ ಸಂಸೃತಿಯನು ನಿವರ್ತಿಪುದು ನಿ।
ಶ್ಚಯವಾಶ್ರಮಾನ್ವಿತವಿದು ತಾನು ॥ 4 ॥

ಯಾವ ಫಲವನ್ನು ಬಯಸದೆ ವೇದೋಕ್ತ ಕರ್ಮವನ್ನು ಕೇವಲ ಬ್ರಹ್ಮಾರ್ಪಿತವೆಂದು ಮಾಡಬೇಕು. ಅದು ನಿವರ್ತಕ ಕರ್ಮವೆಂದು ಹೇಳಿಸಿಕೊಳ್ಳುವದು, ಪ್ರೀತಿಗೆ ಪಾತ್ರಳಾದ ಮೈತ್ರೇಯಿ, ಈ ಕರ್ಮವು ದುಃಖರೂಪ ಸಂಸಾರವನ್ನು ನಿಶ್ಚಯವಾಗಿ ನಾಶ ಮಾಡುವದು ಮತ್ತು ಅದನ್ನು ಆಶ್ರಮಕ್ಕನುಸರಿಸಿಯೇ ಮಾಡಬೇಕು.

ಅದು ತಾನೆರಡು ತೆರನೆನಿಪುದು ಬಾಹ್ಯಾಂತ।
ರದ ಸಾಧನದೊಳು ಮಾಳ್ಪುದರಿಂದ॥
ಅದು ಮುಕ್ತಿಸುಖದಾದಿ ಬೀಜವೆಂದೆನಿಪುದು।
ಸುದತಿ ಸತ್ಕರ್ಮವೆಂದೆನಿಪುದು॥ 5 ॥

ಆ ಸತ್ಕರ್ಮವು ಒಳಗೆ ಮನಸ್ಸಿನಿಂದಲೂ ಹೊರಗೆ ಇಂದ್ರಿಯಗಳಿಂದಲೂ ಮಾಡಲ್ಪಡುವದರಿಂದ ಒಳಹೊರಗೆಂದು ಎರಡು ಪ್ರಕಾರವಾಗಿರುವದು. ಅದು ಮೋಕ್ಷ ಸುಖದ ಪ್ರಾಪ್ತಿಗೆ ಮೂಲ ಕಾರಣವಾಗಿದೆ. ಸುಂದರ ದಂತ ಪಂಕ್ತಿಯುಳ್ಳ ಮೈತ್ರೇಯಿ, ಅದು ಸತ್ಕರ್ಮವೆಂದು ಕರೆಯಲ್ಪಡುವದು.

ಬಯಸದಿರಲು ಸುಖವಹುದು ಬಯಸಲತಿ।
ಶಯವಾಗಿ ದುಃಖವಪ್ಪುದರಿಂದ॥
ಪ್ರಿಯತಮೆ ಮೋಕ್ಷಾರ್ಥಿ ಜನರು ಸದ್ವಿಧಿಯನು।
ಬಯಸದೆ ಮಾಳ್ಪುದು ನಿಜವಾಗಿ॥ 6 ॥

ಅಧಿಕ ಪ್ರೀತಿಗೆ ಪಾತ್ರಳಾದ ಮೈತ್ರೇಯಿ, ಯಾವ ಪ್ರತಿ ಫಲವನ್ನು ಅಪೇಕ್ಷಿಸದೆ ಕರ್ಮವನ್ನು ಮಾಡಲಾಗಿ ಸುಖವು ಪ್ರಾಪ್ತವಾಗುವದು. ಪ್ರತಿ ಫಲವನ್ನು ಬಯಸಿ ಮಾಡಿದರೆ ಅತ್ಯಂತ ದುಃಖ ಉಂಟಾಗುವದು. ಆದ್ದರಿಂದ ಮೋಕ್ಷವನ್ನು ಇಚ್ಛಿಸುವ ಸಾಧಕರು ಏನನ್ನೂ ಬಯಸದೆ ಸತ್ಕರ್ಮವನ್ನು ಮಾಡುವದುಚಿತವು. ಆದರಿಂದ ಅಂತಃಕರಣದ ಶುದ್ಧಿಯಾಗುವದು.

– ಇತಿ ಕಾಂಡತ್ರಯಾದಿ ಭೇದ ನಿರೂಪಣೆ –

## 10ನೇ ಸೂತ್ರ

ವರವುಮುಮುಕ್ಷ್ವಾದಿಗಳಿಗೆ ಕರ್ಮನಿರತವಾ ।
ಪರವಮಾರೂಢನಿಗೊಂದು ಕ್ರಿಯೆಯಿಲ್ಲ ॥

ತ್ರಿಲೋಕದ ಯಾವ ವಿಷಯಗಳನ್ನು ಬಯಸದ ಮುಮುಕ್ಷು, ಆತ್ಮಾಕಾರ ವೃತ್ತಿರೂಪ ನಿಧಿಧ್ಯಾಸವನ್ನು ಆಚರಿಸುವ ಅಭ್ಯಾಸಿ, ದ್ವೈತಾದ್ವೈತಭಾವವನ್ನುಳಿದ ಅನುಭವಿ ಈ ಮೂವರು ಸತ್ಕರ್ಮವನ್ನು ಫಲಬಯಸದೆ ಮಾಡತಕ್ಕದ್ದು. ಆದರೆ ಆತ್ಮಸ್ವರೂಪದಲ್ಲಿ ಸ್ಥಿತನಾಗಿ ತನಗನ್ಯವಾಗಿ ಇನ್ನೊಂದನ್ನು ಕಾಣದ ಪರಮಾರೂಢನಿಗೆ ಯಾವ ಕರ್ಮವು ಇಲ್ಲ.

ಕರ್ಮವನೆಳಸದೆ ನಿರ್ಮಮತೆಯೊಳು ಸ ।
ತ್ಕರ್ಮವನಾ ಬ್ರಹ್ಮಾರ್ಪಣವೆಂದು ॥
ಮರ್ಮವ ನರಿದವಧಾನಿಸಿ ಮಾಳ್ಪುದು ।
ಧರ್ಮವಹುದು ಮುಮುಕ್ಷುವಿಗಿದು ॥ 1 ॥

ಮುಮುಕ್ಷು ವೇದೋಕ್ತ ಸತ್ಕರ್ಮವನ್ನು ರಹಸ್ಯವರಿತು ಫಲವನ್ನಪೇಕ್ಷಿಸದೆ ಲಕ್ಷ್ಯಗೊಟ್ಟು ಬ್ರಹ್ಮಾರ್ಪಣ ಭಾವದಿಂದ ಮಾಡುವದು ಮುಮುಕ್ಷುವಿನ ಧರ್ಮವಾಗಿರುವದು.

ಎನಿತು ಕೃತ್ಯಂಗಳುಂ ಟನಿತನು ತನ್ನಯ ।
ಮನದಿಂದೆ ನಿಯಮಪೂರ್ವಕವಾಗಿ ॥
ಅನುದಿನದೊಳು ಮಾಳ್ಪುದಭ್ಯಾಸಿ ಎನಿಪಾತ ।
ನಿನಿಯಳೆ ಬಯಸ ದೇನೊಂದನು ॥ 2 ॥

ಸ್ತ್ರೀಯಳೆ, ತನಗೆ ಮಾಡತಕ್ಕ ಕರ್ತವ್ಯಗಳೆಷ್ಟಿರುವವೋ ಅಷ್ಟೆಲ್ಲವನ್ನು ಮನಸ್ಸಿನಿಂದ ಚಾಚೂತಪ್ಪದೆ ಮಾಡುವವನು ಅಭ್ಯಾಸಿಯೆನಿಸುವನು. ಆದರೆ ಏನೊಂದು ಫಲವನ್ನು ಬಯಸದೆ ದಿನಾಲೂ ಮಾಡುವನು.

ಈ ಕಾಲದೊಳು ತನಗೀ ಕರ್ಮ ಕೃತಮೆನು ।
ತಾ ಕಾಲದೊಳು ಸಮಾಹಿತೆಯನು ॥
ಜೋಕೆವಿಡಿದು ಮಾಡಲಭ್ಯಾಸಿಯೆನಿಪನಿ ।
ಗಾ ಕರ್ಮವದು ಕೃತವೆನಿಸುಗು ॥ 3 ॥

ಈ ಸಮಯದಲ್ಲಿ ಈ ಕರ್ಮವನ್ನು ಮಾಡಬೇಕು, ಎನ್ನುವಾಗ ಆ ಕಾಲದಲ್ಲಿ ಎಚ್ಚರಿಕೆಯಿಂದ ಸಮಾಧಿಯನ್ನು ಆಚರಿಸುವವನು ಅಭ್ಯಾಸಿಯೆಂದು ಹೇಳಿಸಿಕೊಳ್ಳುವನು. ಆಗ ಆ ಕರ್ಮವು ಪೂರ್ಣಗೊಂಡಿರುವದು.

ಇದನೀ ಕಾಲದೊಳು ತಾನೊದವಿ ಮಾಡಲು ಬೇಹು ।
ದದನಾತನೊಮ್ಮೆ ನೆನೆದು ಬಿಡೆ ॥
ಅದು ತಾನೆ ಸಂಪೂರ್ಣ ಕೃತಕರ್ಮವೆನಿಪುದು ।
ಸುದತಿ ಕೇಳನಭವಿಗಿದು ಸತ್ಯ ॥ 4 ॥

ಈ ಕಾಲದಲ್ಲಿ ಈ ಕರ್ಮವನ್ನು ತಾನು ಒಲವಿನಿಂದ ಮಾಡತಕ್ಕದ್ದೆಂದು ತಿಳಿದು ಅನುಭವಿಯು ತಾನೊಮ್ಮೆ ಅದನ್ನು ಸ್ಮರಣ ಮಾಡಿಬಿಡಲು, ಅವನಿಂದ ಆ ಕರ್ಮವು ಸಂಪೂರ್ಣವಾಗಿ ಮಾಡಲ್ಪಟ್ಟಿತೆನಿಸುವದು. ಹೇ ಸ್ತ್ರೀಯಳೆ, ಇದು ಸತ್ಯವೆಂದು ತಿಳಿ.

ಆರೂಢನೆನಿಸುವನಾರಬ್ಧ ಲೀಲಾನು ।
ಸಾರದಿಂದೆಸಗಲಾ ಕ್ರಿಯೆಗಳ ॥
ನಾರಿ ನೀನರಿವು ದಾತನಿಗೊಂದು ವಿಧಿ ಸುವಿ ।
ಚಾರಿಸಿ ನೋಡಲಿಲ್ಲಿದು ಸಿದ್ಧ ॥ 5 ॥

ಸಿದ್ಧ (ಆರೂಢ)ನೆಂದು ಕರೆಯಿಸಿಕೊಳ್ಳುವವನು ಪ್ರಾರಬ್ಧಕರ್ಮಕ್ಕನುಸರಿಸಿ ಲೀಲೆಯಿಂದ ಕರ್ಮಗಳನ್ನು ಮಾಡುವನು. (ಲೀಲೆಯಲ್ಲಿ ಅಭಿಮಾನವಿಲ್ಲದ್ದರಿಂದ ದುಃಖಕ್ಕೆ ಅಲ್ಲಿ ಆಸ್ಪದವಿಲ್ಲ) ಆದ್ದರಿಂದ ವಿಚಾರಿಸಿ ನೋಡಲಾಗಿ ಅವನಿಗೆ ಯಾವ ವಿಧಿ ನಿಯಮವೂ ಇಲ್ಲ, ಹೇ ಕುಲೀನ ಸ್ತ್ರೀಯಳೆ, ಇದು ಸಿದ್ಧಾಂತವೆಂದು ನೀನು ತಿಳಿ.

ಮದಿರ ಮದಾಂಧನುಟ್ಟುಧನಾರಯ್ಯದವೊಲು ।
ಸುದತಿ ದೇಹಸ್ಥಿತಿಗತಿಯದು ॥
ಒದವಿದಾರಬ್ಧದ ವಶನಾಗಿ ತಾನೆಣಿ ।
ಸದೆ ನಿಂದನಾರೂಡನೆನಿಪನು ॥ 6 ॥

ಮದಿರ (ಸೆರೆ)ವನ್ನು ಸೇವಿಸಿದವನು ಮತ್ತನಾಗಿ ತನ್ನ ಉಟ್ಟ ಬಟ್ಟೆಗಳು ಕಳಚಿ ಹೋಗಿವೆ ಎಂಬ ಪರವೆಯೂ ಸಹ ಇಲ್ಲದಿರುವನು. ಅದರಂತೆಯೆ, ಮೈತ್ರೇಯಿ (ಸುದತಿ) ಶರೀರದ ಆಗು ಹೋಗುಗಳು ಪ್ರಾಪ್ತ ಪ್ರಾರಬ್ಧಕರ್ಮದ ಅಧೀನ ವಾಗಿರುವದರಿಂದ ಅದನ್ನು ಗಮನಿಸದೆ ತಾನು ತನ್ನಂತೆ ಇರುವವನು ಆರೂಢನೆನಿಸುವನು.

ಒಡಲನು ಬಿಡುವೆಡೆಯೊಳಗೆ ತದ್ಧರ್ಮದೊ।
ಳೊಡಗೂಡದೇನನು ನೆನೆಯದೆ ॥
ತಡಿಯದೆ ತಾನೆ ತಾನೆನಿಸಿದೊಡಾತನೆ।
ಮಡದಿ ತಾತ್ಕಾಲಿಕ ಚರಮನು ॥ 7 ॥

ಶರೀರ ತ್ಯಾಗ ಮಾಡುವ ಕಾಲಕ್ಕೆ ಆದರ ಧರ್ಮದೊಡನೆ ಸಮರಸವಾಗದೆ, ಬೇರೆ ಏನೊಂದನ್ನೂ ನೆನೆಯದೆ, ಯಾವದನ್ನೂ ಪ್ರತಿಬಂಧಿಸದೆ, ತನ್ನ ಸ್ವರೂಪಾವಸ್ಥಿತಿಯಲ್ಲಿ ತಾನೆ ತಾನಾಗಿ ಸ್ಥಿತನಾದವನು ಸತಿಯೆ, ಸದ್ಯಃಕಾಲದಲ್ಲಿಯೇ ಮುಕ್ತನಾಗಿರುವನೆಂದು ತಿಳಿ.

– ಇತಿ ಮುಮುಕ್ಷ್ವಾದಿಗಳ ವಿಧಿನಿಯಮ ನಿರೂಪಣೆ –

## 11ನೇ ಸೂತ್ರ

ಗುಣಮೂರರಿಂದೆ ಬೋಧಾದ್ವಯದೊಳು ಯೋಗಿ-।
ಗೆಣಿಸಲಾರೆನಿಪವಸ್ಥೆಗಳಕ್ಕು ॥

ನಾನು ಸಚ್ಚಿದಾನಂದ ನಿತ್ಯ ಪರಿಪೂರ್ಣನಾದ ಪರಬ್ರಹ್ಮಸ್ವರೂಪನೆ ಇದ್ದೇನೆಂಬ ನಿಶ್ಚಯ ಜ್ಞಾನವುಳ್ಳ ವರಯೋಗಿಗಳಿಗೆ ವಿಚಾರ ಮಾಡಲಾಗಿ ನೇತ್ಯಾತ್ಮದಿಂದ ಮೂರವಸ್ಥೆಗಳು, ಸರ್ವಾತ್ಮಕದಿಂದ ಮೂರವಸ್ಥೆಗಳು. ಇಂತು ಆರವಸ್ಥೆಗಳು ಪ್ರಾಪ್ತವಾಗುವವು.

ವನಜಾಸ್ಯೆ ಬಾಲಕೋನ್ಮತ್ತ ಪಿಶಾಚನೆಂ।
ದೆನಿಸುವ ಮೂರವಸ್ಥೆಗಳಿವು ॥
ಜನಿಪವಾ ಯೊಗೀಶನೊಳು ನೇತ್ಯಾತ್ಮದಿಂದ।
ವನುಗತಿವಿಡಿದು ಗುಣಂಗಳು ॥ 1 ॥

ಅನ್ನಮಯಾದಿ ಪಂಚಕೋಶಗಳಾವವೂ ನೀನಲ್ಲವೆಂಬ ನೇತ್ಯಾತ್ಮಕ ಉಪದೇಶದಿಂದ ತನ್ನ ಸ್ವರೂಪವನ್ನರಿತು ಕೃತಕೃತ್ಯನಾದ ಯೋಗೀಶ್ವರನಿಗೆ ಸತ್ತ್ವ ರಜ ತಮೋ ಗುಣಗಳಿಗೆ ಅನುಸರಿಸಿ, ಕಮಲದಂತೆ ಮುಖವುಳ್ಳ ಮೈತ್ರೇಯಿಯೆ, ಕ್ರಮವಾಗಿ ಮೂರವಸ್ಥೆಗಳು ಪ್ರಾಪ್ತವಾಗುವವು. ಅವು ಯಾವವೆಂದರೆ ಬೇರೇನುವರಿಯದ ನಿಷ್ಕಪಟ ಮುಗ್ಧ ಬಾಲಕನಂತೆಯೂ, ಅಹಂಕಾರಪೂರಿತನಾದ ಮದೋನ್ಮತ್ತನಂತೆಯೂ, ಭೂತ ಪ್ರೇತಗಳಂತೆ ಭಯಾನಕವಾದ ಪಿಶಾಚನಂತೆಯೂ ಯೋಗೀಶ ತೋರುವನು. (ಇವರ ವರ್ತನೆಯನ್ನು ಮುಂದೆ ನೋಡಿರಿ).

ಅವಿಕಲ್ಪವೆನಿಸಿದರುವಿನಿಂದೆ ವಿಧಿ ನಿಷೇ।
ಧವನುಳಿದಿರ್ಪ ವರ್ತನದಿಂದೆ॥
ಭುವನವೆಳಸದ ರೂಪಿಂದೆ ಬಾಲಾದ್ಯರೊ।
ಪ್ಪುವರನುಗತಿವಿಡಿದಂಗನೆ ॥ 2 ॥

ನಿರ್ವಿಕಲ್ಪ ಸ್ವರೂಪ ಜ್ಞಾನರಿಂದ ಯೋಗೀಶ್ವರನು ಬಾಲಕನಂತೆ ತೋರುವನು. ಅಂದರೆ ಯಾವ ವಿಶೇಷ ಜ್ಞಾನವಿಲ್ಲದೆ ಸಾಮಾನ್ಯ ಜ್ಞಾನಯುಕ್ತನಾಗಿ ರಾಗದ್ವೇಷಗಳಿಲ್ಲದೆ ಇರುವದರಿಂದ ಬಾಲಕನೆನಿಸುವನು. ವೇದೋಕ್ತ ವಿಧಿ ನಿಷೇಧ ಎಂದರೆ ಮಾಡತಕ್ಕ ಕರ್ಮ ಹಾಗೂ ಮಾಡಬಾರದ ಕರ್ಮವೆಂದು ವಿಚಾರಿಸದೆ ಸ್ವೇಚ್ಛಾನುಸಾರ ತಾನಿರುವದರಿಂದ ಮದೋನ್ಮತ್ತನಂತೆ ತೋರುವನು. (ಆದರೆ ಮದೋನ್ಮತ್ತನಲ್ಲ) ಪಿಶಾಚಿಯಂತಿರುವಾತನು ಜನರನ್ನಾಗಲಿ ಅಥವಾ ಲೋಕವನ್ನಾಗಲಿ ಅಪೇಕ್ಷಿಸದೆ ಇರುವವನಾಗಿ ಭಯಾನಕ ಭೂತಗಳಂತೆ ತೋರುವನು. ಈ ಮೂರವಸ್ಥೆಗಳು ನೇತ್ಯಾತ್ಮಕ ಬೋಧದಿಂದ ತೋರುವವೆಂಬ ತಾತ್ಪರ್ಯವು.

ಇನಿಯಳೆ ಕರ್ಮಿ ಸುಭೋಗಿ ಮೂಢಾತ್ಮಕ।
ನೆನಿಸು ವವಸ್ಥಾತ್ರಯಂಗಳು ॥
ಜನಿಪವಾ ಯೋಗಿಗೆ ಸಲೆ ಸರ್ವಾತ್ಮಕದಿಂದ।
ವನುಗುಣಮಾಗಿ ಗುಣಂಗಳು ॥ 3 ॥

ಪ್ರಿಯಳೆ, ನೀರಿನಲ್ಲಿ ತೋರಿದ ತರಂಗಾದಿಗಳು ನೀರೆ ಎನ್ನಿಸಿಕೊಳ್ಳುವಂತೆ, ಪರಮಾತ್ಮನಲ್ಲಿ ತೋರಿದ ಸರ್ವನಾಮರೂಪಾತ್ಮ ಜಗತ್ತು ಪರಮಾತ್ಮನೇ ಎಂಬುವದು ಸರ್ವಾತ್ಮಕವು. ಈ ಸರ್ವಾತ್ಮಕ ಜ್ಞಾನದಿಂದ ವರಯೋಗಿಯು ಸರ್ವವೂ ತಾನೆ ಎಂದು ತಿಳಿದು ಕರ್ಮವನ್ನು ಮಾಡುವದರಿಂದ ಕರ್ಮಿಯೆಂತಲೂ, ಎಲ್ಲೆಡೆಯಲ್ಲಿ ಸುಖವನ್ನು ಉಪಭೋಗಿಸುವದರಿಂದ ಸುಭೋಗಿಯೆಂತಲೂ, ಏನನ್ನು ತಿಳಿಯದವನಂತೆ ತನ್ನ (ಲೌಕಿಕ) ಜಾಣ್ಮೆ ತೋರದಿರುವದರಿಂದ ಮೂಢನಂತಿರುವನು. ಈ ಮೂರವಸ್ಥೆಗಳು ಕ್ರಮವಾಗಿ ಸತ್ವ, ರಜ, ತಮೋಗುಣಗಳಿಂದ ತೋರುವವು.

ತಿಳಿ ಸತ್ತ್ವಗುಣಲೀಲೆಯೊಳು ರಜೋಗುಣಲೀಲೆ।
ಯೊಳು ತಮೋಗುಣಲೀಲೆಯೊಳಗಿಂತು ॥
ಸುಳಿವನೀ ಜಗದವರೊಡಗೂಡಿಯೋಗಿ ನಿ।
ರ್ಮಳವೆನಿಪಾತ್ಮ ಲೀಲೆಯೊಳೊಂದಿ ॥ 4 ॥

ಸ್ವಸ್ವರೂಪಜ್ಞಾನ ಸಿದ್ಧನಾದ ಯೋಗಿಯು ಸತ್ವಗುಣದ ವ್ಯವಹಾರದೊಳಗೆ ಕರ್ಮಿಯಾಗಿ ರಜೋಗುಣ ವ್ಯವಹಾರದಲ್ಲಿ ಭೋಗಿಯೆನಿಸಿ, ತಮೋಗುಣ ವ್ಯವಹಾರದಲ್ಲಿ ಮೂಢನಂತೆ ಲೋಕದ ಜನರೊಡನೆ ಸಂಚರಿಸಿದರೂ, ಅವನು

ಪರಿಶುದ್ದನಾಗಿ ತನ್ನೊಳಗೆ ತಾನು ತನ್ನ ಸ್ವರೂಪಾನಂದದಲ್ಲಿ ತಲ್ಲೀನನಾಗಿ ಲೀಲೆಯಿಂದ ಇರುವನೆಂದು ನೀನು ತಿಳಿ.

ಎಲ್ಲವು ತಾನೆಂಬ ತಿಳಿವೆ ಸರ್ವಾತ್ಮಕ।
ವೆಲ್ಲವು ತಾನಲ್ಲವೆಂಬುದು ॥
ಎಲ್ಲರರಿಯಲು ನೇತ್ಯಾತ್ಮಕವೆನಿಪು ದಿಂ।
ತಿಲ್ಲಿ ಬೋಧದ್ವಯಮಿವು ನೋಡು ॥ 5 ॥

ತೋರತಕ್ಕ ಸರ್ವನಾಮರೂಪಾತ್ಮಕ ಪ್ರಪಂಚವೆಲ್ಲ ತಾನೆ ಎಂಬ ತಿಳಿವು ಸರ್ವಾತ್ಮಕಜ್ಞಾನವು. ಅದೆಲ್ಲವು ತಾನಲ್ಲವೆಂಬ ತಿಳಿವು ಪ್ರಸಿದ್ಧವಾಗಿ ನೇತ್ಯಾತ್ಮಕ ಜ್ಞಾನವೆಂದೆನಿಸುವದು. ಹೀಗೆ ಇವು ಎರಡು ಪ್ರಕಾರದ ಜ್ಞಾನಗಳಿರುವವೆಂದು ನೀನುತಿಳಿ.

ವನಧಿ ತರಂಗವೆಲ್ಲವನು ತಜ್ಜಲವೆಂಬು।
ದನಿತನುಮಲ್ಲೆಂಬುದೆಂತಂತೆ ॥
ವನಿತೆ ಕೇಳಾತ್ಮನೆ ಜಗವಹದುದಲ್ಲವೆಂ।
ದೆನಿಪವಾ ಬೋಧೆಗಳೆರಡಿಂತು ॥ 6 ॥

ಸಮುದ್ರದಲ್ಲಿರುವ ತೆರೆನೊರೆ ಮೊದಲಾದವೆಲ್ಲವು ನೀರೆ ಎಂದು ತಿಳಿಯುವದು ಸರ್ವಾತ್ಮಕವು. ತೆರೆನೊರೆಗಳ ನಾಮರೂಪಗಳು ಸಮುದ್ರಲ್ಲವೆಂದು ತಿಳಿಯುವದು ನೇತ್ಯಾತ್ಮಕವು. ಅದರಂತೆ ಈ ಜಗತ್ತೆಲ್ಲವೂ ಆತ್ಮನೆಂದು ತಿಳಿಯುವದು ಸರ್ವಾತ್ಮಕ ಬೋಧವು. ಭೇದರೂಪಿನ ಈ ಜಗವು ಆತ್ಮನಲ್ಲವೆಂದು ಭಾವಿಸುವದು ನೇತ್ಯಾತ್ಮಕವೆಂದು ಹೇಳಿಸಿಕೊಳ್ಳುವದು. ತೆರೆನೊರೆಯೊಳಗೆ ಇರುವದೆಲ್ಲವು ನೀರೆ ಎಂದು ತಿಳಿಯುವದು ಸರ್ವಾತ್ಮಕವು. ತೆರೆನೊರೆಗಳ ಆಕಾರ, ಚಲನೆ ನೋಡಿ ನೀರಲ್ಲವೆಂದು ಹೇಳುವದು ನೇತ್ಯಾತ್ಮಕವು. ಇದೇ ಪ್ರಕಾರ ಸತ್ಯವಾಗಿ ಇರುವದೆಲ್ಲವು ನೀನು (ಆತ್ಮವು) ಎಂದು ಹೇಳುವದು ಸರ್ವಾತ್ಮಕವು. ತೋರುವದೆಲ್ಲವು ನೀನಲ್ಲವೆಂದು ತೋರಿಕೆಗಳನ್ನು ಬಾಧೆಪಡಿಸಿ ಉಳಿದ ಇರುವನ್ನು ಹೇಳುವದು ನೇತ್ಯಾತ್ಮಕವು. ಸಾಮಾನ್ಯವಾಗಿ ಗುರುಗಳು ಮೊದಲು ನೇತ್ಯಾತ್ಮಕ ಉಪದೇಶ ಮಾಡಿ ನಂತರ ಸರ್ವಾತ್ಮಕ ಉಪದೇಶ ಮಾಡುವರು.

ತರುಣಿ ಕೇಳೆಲೆ ವೈಯ್ಯಾಕರಣ ಮೌನಿಗಳೆಂದು ।
ಪರಿಕಿಸಲಾ ಬೋಧದ್ವಯದೊಳು ॥
ಎರಡು ತೆರದೊಳು ವರ್ತಿಪರು ಯೋಗಿಗಳವ।
ರಿರವಿಂತುಂಟೆಂದು ನೀನರಿ ಪೇಳ್ವೆ॥ 7 ॥

ಪ್ರಬಲ ಆತ್ಮಶ್ರದ್ಧೆಯುಳ್ಳ ಮೈತ್ರೇಯಿ, ಕೇಳು ವಿಚಾರ ಮಾಡಲು ಮೇಲೆ ಹೇಳಿದ ಎರಡು ಪ್ರಕಾರದ ಬೋಧನೆಗಳಲ್ಲಿ ಜ್ಞಾನವೃದ್ಧರಾದ ಯೋಗಿಗಳು ಎರಡು ರೀತಿಯಿಂದ ವರ್ತಿಸುವರು ಅಂದರೆ ಒಬ್ಬನು ವೈಯ್ಯಾಕರಣಿ, ಇನ್ನೊಬ್ಬನು ಮೌನಿ. ಅವರ ರೀತಿಯನ್ನು ಹೇಳುವೆ ಚೆನ್ನಾಗಿ ತಿಳಿ.

ಅವರಿವರೆನ್ನದೆ ಪರತತ್ತ್ವವನು ಬೋಧಿ।
ಸುವ ಮನದೊಲ್ಮೆಯುಳ್ಳಾತನೆ ॥
ಯುವತಿ ವೈಯ್ಯಾಕರಣಾಖ್ಯನೆಂದರಿ ನೀನು।
ಸುವಿಚಾರದಿಂದಮೀ ಜಗದೊಳು ॥ 8 ॥

ಪ್ರಬುದ್ಧ ಮತಿಯುಳ್ಳ ಮೈತ್ರೇಯಿ, ಇವನು ಬಡವ, ಬಲ್ಲಿದವ, ಶ್ರೇಷ್ಠ ಕನಿಷ್ಠ ಕೀಳು ಜಾತಿಯವ, ಮೇಲು ಜಾತಿಯವನೆಂದು ಭೇದ ಮಾಡದೆ ಅಧಿಕಾರವುಳ್ಳ ಸಾಧಕರಿಗೆ ಜೀವ ಪರಮಾತ್ಮೈಕ್ಯರೂಪ ಸ್ವರೂಪಜ್ಞಾನವನ್ನು ಈ ಜಗತ್ತಿನಲ್ಲಿ ಕರುಣೆಯಿಂದ ಬೋಧಿಸುವ ಹಂಬಲವುಳ್ಳವನೆ ವೈಯ್ಯಾಕರಣಿಯೆನಿಸುವನು, ಎಂದು ನೀನು ವಿವೇಕ ಮುಖದಿಂದ ತಿಳಿ.

ಆರೊಡನಾಡದೆ ಹೋರದೆ ತತ್ತ್ವವಿ।
ಚಾರವನೊಮ್ಮೆಯು ನುಡಿಯದೆ ॥
ಸಾರಸುಖದೊಳಿರ್ಪವನು ಮೌನಿಯಹುದೆಂದು।
ನೀರಜನೇತ್ರೆ ನೀನರಿವುದು ॥ 9 ॥

ಕಮಲಸದೃಶ ನೇತ್ರವುಳ್ಳ ಮೈತ್ರೇಯಿ, ಆತ್ಮಾನಾತ್ಮ ವಿಚಾರವನ್ನು ಯಾರೊಡನೆಯೂ ಒಮ್ಮೆಯೂ ನುಡಿಯದೆ, (ತರ್ಕ ಮಾಡದೆ) ಯಾರಿಗೂ ಬೋಧಿಸದೆ ಎಲ್ಲಸುಖಗಳಿಗೂ ಸಾರಭೂತವಾದ ಆತ್ಮಾನಂದದೊಳಗೆ ತಲ್ಲೀನನಾಗಿ ಇರುವವನು ಮೌನಿಯೆಂದು ನೀನು ತಿಳಿದುಕೊಳ್ಳಬೇಕು.

ಜಲದೊಳಗಿರ್ದುಮಾ ಜಲದೊಡವೆರೆಯದ।
ಜಲಜ ಫಲಾಶದಂತಿರೆ ಯೋಗಿ ॥
ನೆಲೆಸಿರ್ಪನಖಿಳ ಸಂಸ್ಕೃತಿಯೊಳದನು ಸೋಂಕ।
ನೆಲೆ ನೀರೆ ನಿಜವಿದು ಶ್ರುತಿ ಸಿದ್ಧ ॥ 10 ॥

ನೀರಿನೊಳಗೆ ಇದ್ದರೂ ನೀರಿನೊಡನೆ ಕೂಡದೆ ಅದನ್ನು ಅಂಟಿಸಿಕೊಳ್ಳದೆ ನಿರ್ಲಿಪ್ತವಾಗಿ ಕಮಲ ಪತ್ರವು ಇರುವ ಹಾಗೆ, ಯೋಗೀಶ್ವರನು ಸಕಲ ಸಂಸಾರದಲ್ಲಿ ವ್ಯವಹರಿಸುತ್ತ ಇರುವನು. ಆದರೂ ಆ ಸಂಸಾರದ ಆಗು ಹೋಗುಗಳ ಲೇಪವು ಇವನಿಗಿಲ್ಲ (ಇವನು ಕೆಸರಿನೊಳಗಿನ ಕುಂಬಾರ ಹುಳದಂತೆ) ನಿತ್ಯ ನಿಸ್ಸಂಗನಾಗಿರುವನು. ಎಲೆ ಸ್ತ್ರೀಯಳೆ, ಇದು ಶ್ರುತಿ ಸಿದ್ಧಾಂತವಾಗಿದೆ.

ಮರುಳೋರ್ವನುರೆ ತಾನೆ ತಿರುಗಿ ಲೋಕವನಿದು।
ತಿರುಗುತಿದೆಂದು ಭಾವಿಸುವಂತೆ ॥
ಧರೆಯ ಜನರು ತಮ್ಮ ಪರಿಯೊಳು ವಿಷಯಿಯೆಂ।
ಬರುಯೊಗಿವರನನಾರಯ್ಯದೆ ॥ 11 ॥

ಒಬ್ಬ ಹುಚ್ಚನು ತನ್ನ ಸುತ್ತಲು ಗಿರಗಿರನೆ ತಾನೆ ತಿರುಗಿ ತನ್ನ ದೃಷ್ಟಿಯ ಚಲನೆಯನ್ನು ಸ್ಥಿರವಾದ ಜಗತ್ತಿಗೆ ಆರೋಪಿಸಿ ಜಗತ್ತೆ ತಿರುಗುತ್ತಿರುವದು ಎಂದು ಹೇಳುವನು. ಅದರಂತೆಯೇ ಲೋಕದ ಜನರು ಪ್ರಪಂಚದಲ್ಲಿ ಮೋಹವುಳ್ಳವರಾಗಿ ತಮ್ಮ ಸಂಸಾರ ಸಂಭ್ರಮವನ್ನು ನಿರ್ವಿಷಯಿಯೂ ಅಸಂಗನೂ, ನಿರ್ಲಿಪ್ತನೂ ಆದ ಯೋಗಿಯ ಜ್ಞಾನ ಸ್ಥಿತಿಯನ್ನು ತಿಳಿಯದೆ, ಅವನು ತಮ್ಮ ಹಾಗೆ ಸಂಸಾರಿಯೆಂದು ಅವನಲ್ಲಿ ಆರೋಪಿಸುವರು, ಆದರೆ ಅವನು ವಿಷಯಿ ಎಂದು ವಿಷಯೀಕರಿಸಿಕೊಳ್ಳುವದಿಲ್ಲ.

– ಇತಿ ಯೋಗೀಶ್ವರಂಗವಸ್ಥಾ ವಿಶೇಷ ನಿರೂಪಣೆ –

## 12ನೇ ಸೂತ್ರ

ಯೋಗಿಗೆ ಕೊಲೆಹೊಲೆವಿಧಿನಿಷೇಧಾದಿಗ-।
ಳೇಗೈದುವಿಲ್ಲವೆಂತಿರ್ದರು ॥

ದೇಹವೇ ತಾನೆಂಬ ಭಾವವನ್ನು ತ್ಯಜಿಸಿ, ಅಸಂಗನೂ, ನಿಷ್ಕ್ರಿಯನೂ ಚಿನ್ಮಯನೂ ಆದ ಪರಬ್ರಹ್ಮವೆ ತಾನೆಂದು ಯೋಗಿಯು ನಿಶ್ಚಯವಾಗಿ ತಿಳಿದಿರುವನು. ಅವನಲ್ಲಿ ಅಹಂಕಾರವು ನಾಶವಾಗಿರುವದರಿಂದ ಅದಕ್ಕೆ ಸಂಬಂಧಿಸಿದ ಕರ್ತೃತ್ವ ಭೋಕ್ತೃತ್ವಾದಿ ಭ್ರಮೆಗಳು ಇರುವದಿಲ್ಲ, ಆದ್ದರಿಂದ ಇವನಿಂದ ಹೊಲೆಕೊಲೆ ಮೊದಲಾದವು ಸಂಭವಿಸಲಾರವು. ಸಂಸ್ಕಾರವಶದಿಂದ ಅಕಸ್ಮಾತ್ ಘಟಿಸುವ ಹಿಂಸೆ, ಅಕಾರ್ಯ, ವಿಧಿ ನಿಷೇಧಗಳ ಸಂಬಂಧ ಇವನಿಗಿಲ್ಲ, ಇವೆಲ್ಲ ದೇಹಾತ್ಮ ಬುದ್ಧಿಯಿಂದ ಸಂಭವಿಸುವವು. ಅವನು ನಿರ್ದೇಹಿಯಾಗಿರುವ ಕಾರಣ ಏನು ಮಾಡಿದರೂ ಹೇಗೆ ಇದ್ದರೂ ವರಯೋಗಿಯು ಮಾಡದಂತೆ ಮುಕ್ತನಾಗಿರುವನು.

ಯೋಗಿಯೆಲ್ಲಿರ್ದೊಡಾ ಯೋಗಿಯೆಂತಿರ್ದೊಡಾ।
ಯೋಗಿ ಮಾಡದುದನು ಮಾಡಲು ॥
ಯೋಗಿಗೆ ಬಾಧಕವೆನಿಸಿಲ್ಲವೆಂದನು।
ರಾಗದಿಂದರಿ ರಾಜನಿಭವಕ್ತ್ರೆ ॥ 1 ॥

ಜ್ಞಾನಯೋಗಿಯು ಕಾಶಿಯಂತಹ ಪುಣ್ಯಕ್ಷೇತ್ರದಲ್ಲಿರಲಿ ಅಥವಾ ಹೊಲಗೇರಿಯಲ್ಲಿರಲಿ, ಅವನು ಸಂಸಾರಿಯಾಗಿರಲಿ ಸನ್ಯಾಸಿಯಾಗಿರಲಿ, ಅವನು ಮಾಡಬಾರದ ಕಾರ್ಯಮಾಡಲಿ, ಅವನಿಗೆ ಯಾವ ಬಾಧೆಯು ಇಲ್ಲದೆ ಸ್ವರೂಪಾನಂದಲ್ಲಿರುವನೆಂದು ಚಂದ್ರಮುಖಿ ಮೈತ್ರೇಯಿ, ನೀನು ಇದನ್ನು ಪ್ರೀತಿಯಿಂದ ತಿಳಿದುಕೊ.

ಜ್ಞಾನಾಗ್ನಿಯಿಂದೆ ಕರ್ಮಾನೀಕವನು ಯೋಗಿ।
ತಾನಶೇಷಮೆನೆ ಸುಡುವನು ॥
ಮಾನಿನಿ ಮೈತ್ರೇಯಿ ನಿನಗೆ ಸಂದೇಹವಿ।
ನ್ನೇನುಂಟು ಶಾಸ್ತ್ರಸಮ್ಮತವಿದು ॥ 2 ॥

ಗೌರವಾನ್ವಿತ ಮೈತ್ರೇಯಿ, ಆತ್ಮಜ್ಞಾನ ಅಗ್ನಿಜ್ವಾಲೆಯಿಂದ ಕರ್ಮರಾಶಿಯನ್ನೆಲ್ಲ ನಿಶ್ಶೇಷವಾಗಿ ಜ್ಞಾನಯೋಗಿಯು ಸುಟ್ಟು ಹಾಕುವನು. ಇದರಲ್ಲಿ ಯಾವ ಸಂಶಯಕ್ಕೆ ನಿನಗೆ ಆಸ್ಪದವಿಲ್ಲ, ಇದು ಶ್ರುತಿ ಸ್ಮೃತಿಗಳ ದೃಢವಾದ ಮತವಾಗಿರುವದು.

ಉರುವಗ್ನಿಯಿಂದೆ ಕರ್ಪುರವೆಂತು ತಿಳಿ ಬೂದಿ।
ವೆರಸಿ ಬೇವಂತೆ ಯೋಗೀಶನು ॥
ಉರುಪುವನಖಿಳ ಕರ್ಮವನು ನಿಶ್ಯೇಷಮಾ।
ಗಿರೆ ನಿಜಜ್ಞಾನ ಪಾವಕನಿಂದೆ ॥ 3 ॥

ಅಗ್ನಿಯ ಜ್ವಾಲೆಯಿಂದ ಕರ್ಪುರವು ಹೇಗೆ ಉರಿದು ಹೋಗುವದೋ ಹಾಗೆ ಜ್ಞಾನಯೋಗೀಶ್ವರನು ಸರ್ವ ಕರ್ಮರಾಶಿಯನ್ನು ಸ್ವಲ್ಪವು ಶೇಷವಾಗಿ ಉಳಿಯದಂತೆ, ತನ್ನ ಸ್ವರೂಪ ಜ್ಞಾನವೆಂಬ ಅಗ್ನಿಯಿಂದ ಸುಟ್ಟು ಹಾಕುವನು. (ಇನ್ನು ಪ್ರಾರಬ್ಧವನ್ನು ಉಂಡು ತೀರಿಸುವನು. ತಾನು ಕರ್ತಾ ಎಂಬ ಅಭಿಮಾನವು ನಷ್ಟವಾಗಿರುವದರಿಂದ, ಜ್ಞಾನಾನಂತರ ಅವನಿಂದಾದ ಆಗಾಮಿ ಕರ್ಮಕ್ಕೆ ಬಾಧ್ಯಸ್ಥನಲ್ಲ. ಹೀಗೆ ಜನ್ಮಕ್ಕೆ ಕಾರಣವಾಗುವ ಯಾವ ಕರ್ಮಗಳು ಇಲ್ಲದ್ದರಿಂದ, ಪುನರ್ಜನ್ಮವಿಲ್ಲದೆ ಅವನು ಮುಕ್ತನಿದ್ದಾನೆ.)

ದ್ವೈತಕಾನನವ ನದ್ವೈತಾಗ್ನಿಯೊಳು ಭಸ್ಮೀ।
ಭೂತವೆನಲ್ಸುಡುವನು ಯೋಗಿ ॥
ಪೂತಶರೀರಿ ಮೈತ್ರೇಯಿ ನಂಬಿದನಿಲ್ಲಿ।
ಮಾತು ಬೇರೇನುಂಟು ತಿಳಿಯಲ್ಕೆ ॥ 4 ॥

ಜ್ಞಾನ ಯೋಗಿಯು ಅದ್ವಯಾತ್ಮನಲ್ಲಿ ಸ್ಥಿತನಾಗಿರುವನು. ಅಂದರೆ ಅವನು ದ್ವೈತ ಪ್ರಪಂಚರೂಪ ಅಡವಿಯನ್ನು ಅದ್ವೈತರೂಪ ಅಗ್ನಿಯಿಂದ ಬೂದಿಯಾಗುವಂತೆ ಸುಟ್ಟಿರುವನು. (ಯಾ ನಿಶಾ ಸರ್ವಭೂತಾನಾಂ ಎಂದು ಗೀತೆಯಲ್ಲಿ ಹೇಳಿದಂತೆ) ಅಜ್ಞಾನಿಗಳು ಅದ್ವೈತಾತ್ಮನನ್ನು ತಿಳಿಯರು, ಜ್ಞಾನಿಯು ದ್ವೈತಪ್ರಪಂಚವನ್ನರಿಯನು. ಪುಣ್ಯಮಯ ಶರೀರಿಯಾದ ಮೈತ್ರೇಯಿ ಈ ಮಾತಿನಲ್ಲಿ ವಿಶ್ವಾಸವಿಡು. ವಿವೇಕಿಸಿ ನೋಡಿದರೆ ಮತ್ತೊಂದು ಮಾತು ಉಸುರಲು, ತಿಳಿಯಲು ಇಂಬು ಇಲ್ಲ.

ಆದರಿಂದೆ ಪುಣ್ಯ ಪಾಪದ ಹೊಲಬಿಲ್ಲಾತ್ಮ।
ವಿದನೊಳಗವು ತಮ್ಮನರಿಯದ ॥
ಮದಮುಖರುಗಳನಾಶ್ರಯಿಸಿ ತೋರ್ಪವು ನಿಜ।
ವಿದು ನಿರ್ಮಳೇಂದುಮುಖಿ ॥ 5 ॥

ಜ್ಞಾನಿಯ ಜೀವನಯಾತ್ರೆಯು ಅಭಿಮಾನವಿಲ್ಲದೆ ಪ್ರಾರಬ್ಧಕರ್ಮಕ್ಕೆ ಅನುಸರಿಸಿ ನಡೆಯುತ್ತದೆ. ಆದ್ದರಿಂದ ಅವನಿಗೆ ಪುಣ್ಯ ಪಾಪಗಳ ಸಂಬಂಧವಿಲ್ಲ. ಅವನನ್ನು ಸ್ತುತಿಸಿ ನಿಂದಿಸಿದ ತಮ್ಮ ಸ್ವರೂಪವನ್ನರಿಯದ ಮದೋನ್ಮತ್ತರಾದ ಅಜ್ಞಾನಿಗಳಿಗೆ ಅವನ ಕರ್ಮ ಫಲವು ಹೋಗುವದು. ಪರಿಶುದ್ಧವಾದ ಚಂದ್ರಮುಖಿಯೇ, ಇದು ಸತ್ಯವಾಗಿರುವದು.

ಇದಿಕಿದು ತಾನೆ ಪ್ರಾಯಶ್ಚಿತ್ತವೆಂದು ಮಾ।
ಳ್ಪುದು ತನ್ನನರಿಯದ ಮುನ್ನವೆ ॥
ಏದಿತವಹುದು ನಿಜವಿದು ತಿಳಿದಾತನೊ।
ಳದು ಘಟಿಸದು ಶ್ರುತಿಮತದಿಂದ ॥ 6 ॥

ತನ್ನ ತಾನು ಅರಿಯದ ಮೊದಲು ಇಂತಹ ಪಾಪಕ್ಕೆ ಇಂತಹ ಪ್ರಾಯಶ್ಚಿತ್ತಕರ್ಮ ಅಥವಾ ಪಾಪನಿವಾರಣೋಪಾಯವೆಂದು ತಿಳಿದು ಅದನ್ನು ಆಚರಿಸಬೇಕು. ಆದರೆ ತನ್ನ ಸ್ವರೂಪಜ್ಞಾನ ಪಡೆದ ಬಳಿಕ ತನಗೆ ಭಿನ್ನವಾಗಿ ಏನೂ ತೋರದ್ದರಿಂದ ಪ್ರಾಯಶ್ಚಿತ್ತವು ಘಟಿಸದು ಎಂದು ಶ್ರುತಿಯುಂಟು.

ಪ್ರಿಯರೊಳು ಸುಕೃತವನಹಿತರೊಳ್ದುಷ್ಕೃತ।
ಚಯವನೊಂದಿಸಿ ಯೋಗಿ ಸುಖದಿಂದ ॥
ನಿಯತವೆನಲು ಮುಕ್ತಿಪದವನ್ನೆದುವನು ನಿ।
ಶ್ಚಯವಿದು ಶಾಸ್ತ್ರಾರ್ಥವೆಲೆ ನೀರೆ ॥ 7 ॥

ಜ್ಞಾನೋತ್ತರ ಕಾಲದಲ್ಲಿ ಪ್ರಾರಬ್ಧದಂತೆ ಯೋಗಿಯ ಶರೀರವು ಜೀವಿಸಿಕೊಂಡಿರುವದು. ಆ ಸಮಯದಲ್ಲಿ ಅವನಿಂದ ಯಾವುದಾದರೂ ಪುಣ್ಯ ಪಾಪ ಕರ್ಮಗಳು ಘಟಿಸಬಹುದು. ಅಲ್ಲಿ ತಾನು ಎಂಬುದು ಇಲ್ಲದ್ದರಿಂದ ಅವುಗಳನ್ನು ಉಪಭೋಗಿಸಲು ಆಸ್ಪದವಿರುವದಿಲ್ಲ. ಆದ್ದರಿಂದ ತನ್ನ ಪ್ರಿಯ ಭಕ್ತರಲ್ಲಿ ಆ ಪುಣ್ಯವನ್ನು ಮತ್ತು ತನ್ನನ್ನು ನಿಂದಿಸಿ ಪೀಡಿಸಿದವರಿಗೆ ಪಾಪವನ್ನು ಸಂಬಂಧಪಡಿಸಿ, ತಾನು ಅನಾಯಾಸದಿಂದ ಮುಕ್ತಿಯನ್ನು ನಿಶ್ಚಯವಾಗಿ ಪಡೆಯುವನು. ಇದು ಶ್ರುತಿ ಸ್ಮೃತಿಗಳ ಪ್ರಮಾಣವೆಂದು ಪ್ರಿಯತಮೆ ನೀನರಿವುದು.

ವಂದಿಸಿದೊಡೆ ಪುಣ್ಯವಹುದು ನಿಂದಿಸಿದೊಡೆ।
ಬಂದಿರ್ಪುದಾಗಳೆ ಬಹುಪಾಪ ॥
ಇಂದುವದನೆ ಸತ್ಯವಿದು ಯೋಗಿವರನಿಗೆ।
ವಂದಿಸು ನಿಂದಿಸದಿರು ನೀನು ॥ 8 ॥

ಜ್ಞಾನಯೋಗಿಗೆ ವಂದಿಸಿ ಅವನ ಸೇವಾದಿಗಳನ್ನು ಮಾಡಿದರೆ ಪುಣ್ಯ ಬರುವದು. ಅವನನ್ನು ನಿಂದಿಸಿದರೆ ಅಗಣಿತ ಪಾಪವು ಪ್ರಾಪ್ತವಾಗುವದು. ಚಂದ್ರಮುಖಿಯಾದ

ಮೈತ್ರೇಯಿ, ಇದು ಸತ್ಯವಾದ ಸಿದ್ಧಾಂತವು. ಆದ್ದರಿಂದ ಯೋಗೀಶ್ವರನಿಗೆ ಆದರಿಸಿ ವಂದಿಸು. ಅವನನ್ನು ನೀನು ಎಂದೂ ನಿಂದಿಸಬೇಡ.

– ಇತಿ ಯೋಗೀಶ್ವರಂಗೆ ಕರ್ಮದ್ವಯ ಅಭಾವ ನಿರೂಪಣೆ –

## 13ನೇ ಸೂತ್ರ

ಅರಸದೆ ಗುಣದೋಷವನು ಯೋಗಿವರನೊಳು ।

ನೆರೆಭಕ್ತಿಮಾಡಲಹುದು ಮುಕ್ತಿ ॥

ಜ್ಞಾನಸಿದ್ಧನಾದ ಯೋಗೀಶ್ವರನಲ್ಲಿ ಅಂತಃಕರಣದ ಸತ್ವಾದಿ ಗುಣಗಳಿಗೆ ಸಂಬಂಧಿಸಿದ ದೋಷಗಳನ್ನು ಎಣಿಸಿ, ವಿನಾಕಾರಣವಾಗಿ ಅವನ ಬಗ್ಗೆ ತಿರಸ್ಕಾರ ಭಾವವನ್ನು ತಾಳಿದರೆ ಆತನು ನರಕಕ್ಕೆ ತೆರಳುವನು. ಆದ್ದರಿಂದ ಯೋಗೀಶ್ವರನಲ್ಲಿ ಪರಮ ವಿಶ್ವಾಸದಿಂದ ಭಕ್ತಿಯಿಂದ ಅವನ ಸೇವಾದಿಗಳನ್ನು ಮಾಡಿ ಮುಕ್ತಿಪಡೆಯಬೇಕು.

**ಗುರುಭಕ್ತನೆನಿಸಿ ನಿರ್ವಿಷಯಿಯೆನಿಸಿ ಕೋಪ।**
**ವಿರಹಿತನೆನಿಸಿ ಬ್ರಹ್ಮಧ್ಯಾನ॥**
**ಪರನು ತಾನೆನಿಸಿಹ ನಿಸ್ಪೃಹ ಯೋಗಿ ಸಂ।**
**ಚರಿಪನೀ ವ್ರತಪಂಚಕದೊಳೊಂದಿ ॥ 1 ॥**

ಯೋಗಿವರನ ವ್ರತಪಂಚಕ :– ಜ್ಞಾನಯೋಗಿಯು ತನ್ನ ಗುರುವಿನಲ್ಲಿ ಪರಮ ಭಕ್ತಿಯುಳ್ಳವನಾಗಿ ಭೋಗ ವಿಷಯದಲ್ಲಿ ನಿರಾಸಕ್ತನಾಗಿ ತನಗೂ ಪರರಿಗೂ ದುಃಖವನ್ನುಂಟು ಮಾಡುವಂತಹ ಕೋಪರಹಿತನಾಗಿ ಬ್ರಹ್ಮಾಭಿನ್ನ ಪ್ರತ್ಯಗಾತ್ಮನೇ ತಾನೆಂದು ಸದಾಚಿಂತನ ಮಾಡುವವನಾಗಿ, ಯಾವ ಆಶೆಯಿಲ್ಲದೆ ಸ್ವಾರ್ಥರಹಿತನಾಗಿ, ಈ ಪಂಚವ್ರತಗಳನ್ನು ಚಾಚೂತಪ್ಪದೆ ಪಾಲಿಸುತ್ತ ಸಂಚರಿಸುವನು.

**ಎಲ್ಲಿ ಪುಣ್ಯಾರಣ್ಯವೆಲ್ಲಿ ನದೀತೀರ।**
**ವೆಲ್ಲೆಲ್ಲಿ ಶೋಭನಾಶ್ರಯಮುಂಟು ॥**
**ಅಲ್ಲಲ್ಲಿ ಯೋಗಿ ಸಮಾಹಿತೆಗೈಯುತೆ।**
**ಸಲ್ಲೀಲೆಯಿಂದೆ ಸಂಚರಿಪನು ॥ 2 ॥**

ನೈಮಿಷಾರಣ್ಯ ಮೊದಲಾದ ಪುಣ್ಯಾರಣ್ಯಗಳಲ್ಲಿ, ಗಂಗಾ, ಗೋದಾವರಿ ಮೊದಲಾದ ಪವಿತ್ರ ನದೀ ತೀರಗಳಲ್ಲಿ, ಎಲ್ಲೆಲ್ಲಿ ಮನೋಹರವಾದ ಋಷ್ಯಾಶ್ರಮಗಳುಂಟು ಅಂತಹ ಪುಣ್ಯ ಸ್ಥಾನಗಳಲ್ಲಿ ಯೋಗೀಶ್ವರನು ಪರಬ್ರಹ್ಮದೊಡನೆ ತನ್ನ ವೃತ್ತಿಯನ್ನು ಯೋಜಿಸಿ, ವಿನೋದದಿಂದ ಸಂಚಾರ ಮಾಡುತ್ತಿರುವನು.

ಎಲ್ಲಿರ್ಪನೊಲಿದು ಯೋಗೀಶ್ವರನಲ್ಲಿಯೆ।
ಯೆಲ್ಲ ತೀರ್ಥಾಳಿ ದೈವಂಗಳು ॥
ಎಲ್ಲ ಪುಣ್ಯಗಳಪ್ಪವದರಿಂದ ತದ್ಯೋಗಿ।
ಯಲ್ಲಿ ಪಡೆವುದೆಲ್ಲಾ ಸುಖವನು ॥ 3 ॥

ಅವಿರಳ ಜ್ಞಾನಿಯು ಪ್ರೀತಿಯಿಂದ ಯಾವ ಸ್ಥಳದಲ್ಲಿ ವಾಸ ಮಾಡುವನೋ ಎಲ್ಲ ತೀರ್ಥಗಳು ಪುಣ್ಯಕ್ಷೇತ್ರಗಳು ಎಲ್ಲ ದೈವಗಳು, ಎಲ್ಲ ಪುಣ್ಯಫಲಗಳು ಅಲ್ಲಿಯೇ ಇರುವವು. ಆದ್ದರಿಂದ ಯಾವದೇ ಪುಣ್ಯಕ್ಷೇತ್ರಕ್ಕೆ ಅಥವಾ ತೀರ್ಥಕ್ಕೆ ಹೋಗಿ ಒಂದೊಂದೇ ಅಲ್ಪ ಫಲವನ್ನು ಪಡೆದುಕೊಳ್ಳುವದಕ್ಕಿಂತ, ಅಂತಹ ಜ್ಞಾನಯೋಗೀಶ್ವರ ನನ್ನು ಆಶ್ರಯಿಸಿ ಅವನಿಂದ ಸರ್ವಫಲರೂಪವಾದ ಶಾಶ್ವತ ಸುಖವೆಂಬ ಮುಕ್ತಿಯನ್ನು ಪಡೆದುಕೊಳ್ಳಬೇಕು.

ಬೇರೆ ತೀರ್ಥವನಿಲ್ಲಿ ಬೇರೆ ದೈವವನಿಲ್ಲಿ।
ಬೇರೆ ಪುಣ್ಯವನಿಲ್ಲ ಬಯಸದೆ ॥
ನೀರೆ ಯೋಗೀಶ್ವರನೊಳು ಭಕ್ತರೆನಿಪರ್ಗೆ।
ಸೂರೆಯಪ್ಪುದು ಮುಕ್ತಿ ಸುಖವದು ॥ 4 ॥

ಯಾವ ಶಿಷ್ಯನು ಈ ಲೋಕದಲ್ಲಿ ಯೋಗೀಶ್ವರನನ್ನು ಬಿಟ್ಟು ಬೇರೆ ತೀರ್ಥಗಳನ್ನೋ, ಬೇರೆ ಹರಿಹರಾದಿ ದೈವಗಳನ್ನೋ ಬೇರೆ ಪುಣ್ಯಗಳನ್ನೋ ಕಿಂಚಿತ್ತು ಬಯಸದೆ, ಶುದ್ಧಾಂತಃಕರಣವುಳ್ಳ ಚಲುಮೆ ಕೇವಲ ಯೋಗೀಶ್ವರನಲ್ಲಿ ಪರಮ ಪ್ರೇಮ ಲಕ್ಷಣಾತ್ಮಕವಾದ ಅನನ್ಯ ಭಕ್ತಿಯನ್ನು ಮಾಡುವನೋ, ಅವನಿಗೆ ಪರಮ ಸುಖರೂಪ ಮುಕ್ತಿಯು ಯಥೇಚ್ಛ ಪ್ರಾಪ್ತವಾಗುವದು.

ಯೋಗಿಯೇ ತೀರ್ಥವಾ ಯೋಗಿಯೆ ದೈವವಾ।
ಯೋಗಿಯೆ ಸಕಲವು ತನಗೆಂದು ॥
ಯೋಗಿಯನುರೆ ನಂಬಿ ಸಲೆ ಸೇವಿಪರ್ಗೆ ತಾ।
ನಾಗದೇಕಿರ್ಕುಮುನ್ನತಮುಕ್ತಿ ॥ 5 ॥

ಯೋಗೀಶ್ವರನೆ ತನಗೆ ಸಕಲ ತೀರ್ಥವಾಗಿರುವನು. ಅವನೆ ಸರ್ವ ದೈವವು. ಅವನೆ ತಾಯಿ ತಂದೆ ಬಂಧು ಬಳಗ ಸರ್ವವೂ ತನಗೆ ಎಂದು ಪೂರ್ಣನಂಬಿ ಸರ್ವರೀತಿಯಿಂದಲೂ ಅವನ ಸೇವಾದಿಗಳನ್ನು ಮನಃಪೂರ್ವಕವಾಗಿ ಮಾಡುವವನಿಗೆ ಅತ್ಯಂತ ಶ್ರೇಷ್ಠತಮವಾದ ಪರಮಾನಂದ ಪ್ರಾಪ್ತಿರೂಪ ಮುಕ್ತಿಯು ಸಿಗದಿರುವದೇ ? ಅವಶ್ಯ ಪ್ರಾಪ್ತವಾಗುವದೆಂಬ ತಾತ್ಪರ್ಯ.

ಮನದನುರಾಗವಲರಿ ನೆನೆ ನಡೆ ನೋಡು ।
ವಿನಯದಿಂದೊಡನಾಡು ನುಡಿ ಯೋಗಿ ॥
ಜನವನರ್ಚಿಸು ಬಣ್ಣಿಸೆಲೆ ನೀರೆ ನಿಜಮುಕ್ತಿ ।
ಜನಿಪುದು ದುರಿತಾಳಿ ಪರಿವುದು ॥ 6 ॥

ಮೃದು ಸ್ವಭಾವದ ಸುಮಂಗಲೆ, ಅಂತರಂಗದ ಪ್ರೇಮ ಪುಷ್ಪವು ಅರಳಿ ಸುವಾಸನೆ ಬೀರುತ್ತ ಯೋಗಿವರನನ್ನು ಮನದುಂಬಿ ಸ್ಮರಿಸು ಸದ್ಭಾವದಿಂದ ಆವನೊಡನೆ ನಡೆದುಕೊ, ಭಕ್ತಿಪೂರ್ವಕ ಅವನನ್ನು ನೋಡು, ಒಡಗೂಡಿ, ಅವನ ಸನ್ನಿಧಿಯಲ್ಲಿರು. ವಿನೀತನಾಗಿ ಅವನೊಡನೆ ಮಾತಾಡು, ಭಕ್ತಿಯಿಂದ ಪೂಜಿಸು, ಅವನ ಸದ್ಗುಣಗಳನ್ನು ಹೃದಯದುಂಬಿ ವರ್ಣಿಸು, ಸ್ತುತಿಸು. ಆದರಿಂದ ನಿನ್ನ ಪಾಪಕರ್ಮಗಳು ಪರಿಹಾರವಾಗುವವು. ನಿತ್ಯ ಸುಖರೂಪ ಮುಕ್ತಿ ಪದವು ನಿನಗೆ ಲಭಿಸುವದು.

ತನಗೆ ಮಹಾಪಾಪವೆನಿತುಳ್ಳೊಡನಿತು ತೊ ।
ಟ್ಟನೆ ಕೆಟ್ಟು ವರಮುಕ್ತಿದೊರಕೊಳ್ಗು ॥
ವನಿತೆ ಕೇಳೆಲೆ ಯೋಗಿವರನ ಮೆಲ್ಲಡಿದರು ।
ಶನ ಮಾತ್ರದಿಂದಿದು ಪರಮಾರ್ಥ ॥ 7 ॥

ಸ್ವರೂಪಾನಂದದಲ್ಲಿ ತಲ್ಲಿನನಾದ ಯೋಗೀಶ್ವರನ ಪರಮ ಪವಿತ್ರ ಪಾದಾರವಿಂದಗಳ ದರ್ಶನ ಸ್ಪರ್ಶನ ಮಾತ್ರದಿಂದ, ಬ್ರಹ್ಮಹತ್ಯಾದಿ ತನಗಂಟಾದ ಮಹಾಪಾಗಳೆಲ್ಲವೂ ತತ್‌ಕ್ಷಣದಲ್ಲಿ ನಾಶವಾಗಿ, ಪರಬ್ರಹ್ಮಸ್ವರೂಪವಾದ ಮುಕ್ತಿ ಸಾಮ್ರಾಜ್ಯವೇ ತನಗೆ ಪ್ರಾಪ್ತವಾಗುವದು. ಹೇ ಸ್ತ್ರೀಯಳೆ ಕೇಳು ಇದು ವೇದೋಕ್ತ ಪರಮಾರ್ಥ.

ಗುಣದೋಷದೆಣಿಕೆ ತನ್ನೊಳಗಿಲ್ಲದಿರ್ಪ ನಿ ।
ರ್ಗುಣಯೋಗಿವರನ ದೇಹದ ಕರ್ಮ ॥
ಗಣದೊಳು ಗುಣದೋಷವರಸಲಿಲ್ಲೆಂದು ಸ ।
ದ್ಗುಣ ನಿಧಿ ಮೈತ್ರೇಯಿ ತಿಳಿ ನೀನು ॥ 8 ॥

ಯೋಗೀಶ್ವರನು ಸಚ್ಚಿದಾನಂದ ನಿತ್ಯ ಪರಿಪೂರ್ಣವಾದ ನಿರ್ಗುಣ ಪರಬ್ರಹ್ಮವೇ ಇರುವನು. ಅವನ ದೇಹದ ಕರ್ಮ ಸಮೂಹದ ಗುಣದೋಷಗಳನ್ನು ಅವನಲ್ಲಿ ಶೋಧಿಸ ಹೋದರೆ ಹೇಗೆ ಸಿಗಬಲ್ಲವು ? ಸದ್ಗುಣೆಯಾದ ಮೈತ್ರೇಯಿ, ಯಾವ ದೋಷಗಳೂ ಅವನಲ್ಲಿಲ್ಲವೆಂದು ನೀನು ನಿಸ್ಸಂದೇಹವಾಗಿ ತಿಳಿದುಕೊ.

– ಇತಿ ಯೋಗೀಶ್ವರಂಗೆ ಸರ್ವಾಧಿಕ್ಯ ನಿರೂಪಣೆ –

## 14ನೇ ಸೂತ್ರ

**ಲೋಲಲಲೋಚನೆ ಯೋಗಿವರರನ ವರ್ತನವದು ।**
**ಬಾಲಕವಿಕೃತದಂತೆನಿಪುದು ॥**

ಚಂಚಲ ಕಣ್ಣುಳ್ಳ ಮೈತ್ರೇಯಿ, ಬಾಲಕನು ಕ್ರೀಡಿಸುವಾಗ ರಾಗದ್ವೇಷಾದಿಗಳು ಇಲ್ಲದೆ ಕೇವಲ ಮನೋರಂಜನೆಗಾಗಿ ಆಡುವನು. ಹಾಗೆಯೆ ಯೋಗೀಶ್ವರನ ವರ್ತನವಿದೆ. ಅವನಿಂದ ಕರ್ಮ ಘಟಿಸಿದರೆ,ಅದು ಫಲೋತ್ಪತ್ತಿಗಾಗಿರದೆ ಕೇವಲ ಲೀಲೆಗಾಗಿ ಇರುವದು.

ತನಗಭಿಮಾನ ಮೊಂದಿನಿಸಿಲ್ಲವದರಿಂದೆ।
ಮುನಿಕೃತವದು ಫಲವಿಲ್ಲದೆ॥
ವನಿತೆ ನೀನರಿ ವಂಧ್ಯಾರತಿಯಂತೆ ಬರಿದಪ್ಪು।
ದೆನುತಿರ್ಪವಖಿಳ ಶಾಸ್ತ್ರಂಗಳು ॥ 1 ॥

(ಹೇಗೆ ವಂಧ್ಯಾ ಸ್ತ್ರೀಯಳನ್ನು ಭೋಗಮಾಡುವದರಿಂದ ಗರ್ಭೋತ್ಪತ್ತಿಯಾಗದೆ ವ್ಯರ್ಥವಾಗುವದೋ ಹಾಗೆ) ಸ್ತ್ರೀಯಳೆ, ನಾನು ಕರ್ಮ ಮಾಡಿದನೆಂಬ ಅಭಿಮಾನವು ಜ್ಞಾನಿಗೆ ಇರುವದಿಲ್ಲವಾದ್ದರಿಂದ ಅದು ಯಾವ ಫಲವನ್ನು ಕೊಡದೆ ಅವನ ಜನ್ಮಾಂತರಗಳಿಗೆ ಕಾರಣವಾಗದು. (ಇದು ನಾನು ಕಲ್ಪನಾ ಮಾಡಿ ಹೇಳಿದ ಮಾತಲ್ಲ) ಸರ್ವಶಾಸ್ತ್ರಗಳು ಹೀಗೆ ಸಾರುವವು.

ನರಕನಾಕಾದಿ ವಿಷಯವಲ್ತು ಕಾಮನೆ।
ವಿರಹಿತ ಯೋಗಿ ಮಾಡಿದ ಕರ್ಮ ॥
ಹರಿಣಾಕ್ಷಿ ತಿಳಿಯದು ಬಾಲಕೋನ್ಮತ್ತರಾ।
ಚರಣೆಯಂತಿರೆ ವೃಥಾಯವೆಯಕ್ಕು ॥ 2 ॥

ಬಾಲಕರು, ಉನ್ಮತ್ತರು ಅಥವಾ ಸೆರೆಗುಡುಕರು ಇವರಾಚರಣೆ ಅಭಿಮಾನವಿಲ್ಲದೆ ಇರುವದರಿಂದ ಇದಕ್ಕೆ ಬೆಲೆಯಿಲ್ಲ, ನಿಷ್ಕಾಮನೆಯಿಂದ ಯೋಗೀಶ್ವರನು ಮಾಡಿದ ಕರ್ಮವು, ಮೃಗದಂತೆ ಚಂಚಲ ಕಣ್ಣುಳ್ಳ ಮೈತ್ರೇಯಿ, ಸ್ವರ್ಗ ನರಕ ಪ್ರಾಪ್ತಿಗೆ ಕಾರಣವಾಗದೆಂದು ತಿಳಿ.

ಕರಡಿಗೆಯಿಂದ ಕರ್ಪುರವನ್ನು ಕಳೆದೊಡಾ।
ಪರಿಮಳವಿಹುದು ಕರ್ಪುರಮಿರ್ಪ ॥
ಪರಿಯಂತೆ ತಿಳಿಯಲವಿದ್ಯೆಯುಂಟೆನಿಪುದು ।
ನಿರವಿದ್ಯನೊಳಗದು ಪುಸಿದೋರ್ಕೆ ॥ 3 ॥

ಕರ್ಪುರದ ಪೆಟ್ಟಿಗೆಯಿಂದ ಕರ್ಪುರವನ್ನು ತೆಗೆದು ಹಾಕಿದರೂ, ಕರ್ಪುರವು ಅದರಲ್ಲಿ ಇದ್ದ ಹಾಗೆಯೆ ಅದರ ವಾಸನೆಯು ತೋರುವದು. ಅದರಂತೆಯೇ ವಿವೇಚಿಸಿ

ನೋಡಲು ಅವಿದ್ಯೆಯನ್ನು (ಅಜ್ಞಾನ) ಕಳೆದುಕೊಂಡ ವರಜ್ಞಾನಿಯೊಳಗೆ ಅವಿದ್ಯೆವುಂಟೆನಿಸುವಂತೆ ತೋರುವದು. ಆದರೆ ಇರುವದಿಲ್ಲ.

ವರಯೋಗಿಯೊಳು ತೋರ್ಪಕರಣಧರ್ಮಾವಳಿ।
ಪುರಿದಿಟ್ಟ ಬಿತ್ತಿನಪರಿಯಂತೆ ॥
ಮರಳಿ ಭವಾಂಕುರಕ್ಕದು ಹೇತುವಲ್ಲೆಂದು।
ತರುಣಿ ನೀನರಿವುದಿದವಿವಾದ ॥ 4 ॥

ಹುರಿದ ಬೀಜಗಳು ಭೋಗಕ್ಕಲ್ಲದೆ ಬಿತ್ತಿ ಬೆಳೆ ತೆಗೆಯಲು ಉಪಯೋಗವಾಗದಂತೆ ಯೋಗೀಶ್ವರನಲ್ಲಿಕಂಡು ಬರುವ ದೇಹಾದಿ ಕರಣ ಧರ್ಮಗಳು ಪುನರ್ಜನ್ಮಕ್ಕೆ ಕಾರಣವಾಗವು. ಜ್ಞಾನವನ್ನು ಗ್ರಹಿಸಬಲ್ಲ ಪ್ರಸ್ಫುಟ ಕರಣಗಳುಳ್ಳ (ತರುಣಿ) ಮೈತ್ರೇಯಿ, ಇದು (ಶಾಸ್ತ್ರ ಸಿದ್ಧಾಂತವಾಗಿರುವದರಿಂದ) ವಾದವಿವಾದಕ್ಕೆ ಆಸ್ಪದವಿಲ್ಲವೆಂದು ನೀನು ತಿಳಿ.

ಜಡದೇಹಾದಿಗೆ ತಾನು ಪೆರತೆಂದು ಕಂಡನೊ।
ಳ್ತೊಡರದವಿದ್ಯೆ ಮುನ್ನಿನ ವೋಲು ॥
ಬಿಡುಗಡೆಯಾದಹಿ ಚರ್ಮದಂತೆಂದು ಮೆ।
ಲ್ಲಡಿಯಳೆ ತಿಳಿ ಪರತತ್ತ್ವವ ಹುದಿದು ॥ 5 ॥

ಹಾವು ತನ್ನ ಮೈಮೇಲಿನ ಪರಿಯನ್ನು ಕಳಚಿ ಬಿಟ್ಟ ಮೇಲೆ ಅದು ಹೇಗೆ ಪುನಃ ಹಾವಿಗೆ ಸಂಬಂಧವಾಗುವದಿಲ್ಲವೋ ಆದರಂತೆ ಯೋಗೀಶ್ವರನು ಒಮ್ಮೆ ಜಡದೇಹಾದಿಗಳು ತಾನಲ್ಲ. ಅವು ತನಗೆ ಭಿನ್ನವಾಗಿವೆ. ತಾನು ಶುದ್ಧ ಚೈತನ್ಯರೂಪನಾಗಿದ್ದೇನೆಂದು ತಿಳಿದ ಮೇಲೆ, ಅಜ್ಞಾನವು ಮೊದಲಿನಂತೆ ಆವನಲ್ಲಿ ಪುನಃ ಶರೀರಾದಿಗಳಲ್ಲಿ ತಾದಾತ್ಮ್ಯ ಸಂಬಂಧವನ್ನುಂಟು ಮಾಡಲಾರದು. ಮೃದುವಾದ ಪಾದವುಳ್ಳ ಮೈತ್ರೇಯಿ, ಇದು ಪರಮಾರ್ಥವೆಂದು ತಿಳಿ.

– ಇತಿ ಯೋಗೀಶ್ವರಂಗೆ ನಿರ್ಲೇಪಕತ್ವ ನಿರೂಪಣೆ –

## 15ನೇ ಸೂತ್ರ

### ತನುವಿಯೋಗದೊಳೇನ ನೆನೆವನಂತಹನಾಗಿ ।
### ತನಗಲ್ಲಿ ನಿಜದೆಚ್ಚರಿರಬೇಕು ॥

ಯಾರು ಶರೀರ ಬಿಡುವ ಸಮಯದಲ್ಲಿ ಏನನ್ನು ಸ್ಮರಣ ಮಾಡುವರೊ ಅವರು ಅದೇ ಆಗುವರೆಂದು ಶಾಸ್ತ್ರವಿಧಿ ಇದೆ. (ಟಿ) ಆದ್ದರಿಂದ ಮುಮುಕ್ಷುಗಳಿಗೆ ದೇಹ ಬಿಡುವ ಕಾಲಕ್ಕೆ ಸ್ವರೂಪದೆಚ್ಚರ ಎಂದರೆ 'ಸಚ್ಚಿದಾನಂದ ಪೂರ್ಣ ಪರಮಾತ್ಮನೆ ನಾನಿದ್ದೇನೆ' ಎಂಬ ಸ್ಮರಣವಿರಬೇಕು.)

[ ಟಿಪ್ಪಣಿ:– ಇದಕ್ಕೆ ದೃಷ್ಟಾಂತ ಜಡ ಭರತ. ಅವನು ಹರಿಣವನ್ನು (ಚಿಗರೆ) ಅತ್ಯಂತ ಪ್ರೀತಿಸಿ, ದೇಹತ್ಯಾಗ ಕಾಲಕ್ಕೆ ಅದನ್ನೇ ಸ್ಮರಿಸಿದ್ದರಿಂದ ಅವನು ಹರಿಣವಾಗಿ ಜನ್ಮ ತಾಳಿದನು. ]

ಯೋಗಿಗೆ ನಿಜತನುತ್ಯಾಗದೊಳ್ವಿಧಿಯಿಲ್ಲ।
ದಾಗದು ಮೋಕ್ಷವಂತದರಿಂದೆ ॥
ರಾಗಾಧರಾಂಚಿತೆ ಕೇಳು ತದ್ವಿಧಿಯನಾ।
ನಾಗಮೋದಿತವೆನಲೊರೆವೆನು ॥ 1 ॥

ಯೋಗಿಯೆಂದರೆ ಇಲ್ಲಿ ಮುಮುಕ್ಷು, ಅಭ್ಯಾಸಿ ಮತ್ತು ಅನುಭವಿ. ಇವರು ತಮ್ಮ ಶರೀರ ಬಿಡುವ ಸಮಯದಲ್ಲಿ ವಿಧಿಗಳನ್ನು ಪಾಲಿಸದಿದ್ದರೆ ಮೋಕ್ಷವು ಅವರಿಗೆ ದೊರೆಯಲಾರದು. ಕೆಂಪು ತುಟಿಯುಳ್ಳ ಮೈತ್ರೇಯಿ, ಅಂತಹ ವಿಧಿನಿಯಮಗಳ ಸ್ವರೂಪವನ್ನು ನಾನು ನಿನಗೆ ವಿವರವಾಗಿ ತಿಳಿಸುವೆನು ಕೇಳು.

ತನುವಿಯೋಗದೊಳಾವುದನು ನೆನೆವನದಾಗಿ।
ಜನಿಸುವ ನದರಿಂದೆ ವರಯೋಗಿ ॥
ಇನಿತನ್ಯಭಾವನೆಯನು ಬಿಟ್ಟು ನಿಜತತ್ತ್ವ।
ವನೆ ಸೋಹಮೆಂದು ಜಾನಿಸುವದು ॥ 2 ॥

ಶರೀರ ಬಿಡುವ ಕಾಲದಲ್ಲಿ ಯೋಗಿಯು ಯಾವದನ್ನು ಸ್ಮರಿಸುವನೋ ಅದಾಗಿ ತಾನು ಹುಟ್ಟುವನು. ಅದರಿಂದ, ಯೋಗೀಶ್ವರನು ಸ್ವಲ್ಪವಾದರೂ ಅನ್ಯಭಾವನೆಯೆಂದರೆ ಅನಾತ್ಮ ವಿಷಯವನ್ನು ಸ್ಮರಿಸದೆ ತನ್ನ ಸ್ವರೂಪವಾದ ಶುದ್ಧ ಚೈತನ್ಯ ಪರಬ್ರಹ್ಮವನ್ನೇ 'ಸೋಹಂ' ಎಂದರೆ ಅವನೆ ನಾನಿದ್ದೇನೆಂದು ದೇಹಬಿಡುವಾಗ ಸದಾ ಧ್ಯಾನಮಾಡಬೇಕು.

ತನುವನಿರಿಸಿ ಸುಖಾಸನದೊಳ್ಪ್ರಾಣಾನಿಲ।
ನನು ಕೂಡಿ ತನ್ನ ಮಾನಸವನು ॥
ತನಗೆ ತೋರದ ತೆರನೆನಿಸಿ ಭ್ರೂಮಧ್ಯದೊ।
ಳನುನಯದಿಂದೆ ಬಂಧಿಸಿ ಮೇಲೆ ॥ 3 ॥

ಅರಿವನು ತನ್ನರಿವಿನೊಳಡಗಿಸಿ ತನ।
ಗರಿಕೆ ದೋರದೆ ಚಿದದ್ವಯದೊಳು ॥
ಕರಿಗೊಂಡು ಪರಮಸುಖದೊಳಿರಲೀ ಕ್ರಮ।
ವರಿಯೆ ದೇಹತ್ಯಾಗ ವಿಧಿಯಕ್ಕು ॥ 4 ॥

ತನಗೆ ಆಯಾಸವೆನಿಸದಂತೆ ಸುಖಾಸನದಲ್ಲಿ ಶರೀರವನ್ನಿರಿಸಿ ಪ್ರಾಣಾಯಾಮದ ಮೂಲಕ ಪ್ರಾಣ ನಿರೋಧಿಸುತ್ತ ಅದರೊಡನೆ ಮನವೆರಸಿ ಎರಡು ಹುಬ್ಬುಗಳ ಮಧ್ಯದಲ್ಲಿ ನಿಲ್ಲಿಸಿ, ತನಗರಿಯದಂತೆ ಅವನ್ನು ಬಂಧಿಸಬೇಕು. ನಂತರ ತನ್ನ ಬುದ್ಧಿ ವೃತ್ತಿಯನ್ನು ಮುಳುಗಿಸಿ ಸಚ್ಚಿದಾನಂದ ಸ್ವರೂಪದಲ್ಲಿ ಕರಿಗೊಂಡು ನಿಲ್ಲುವಂತೆ ಪರಮ

ಸುಖದಲ್ಲಿಡಬೇಕು. ಈ ಕ್ರಮವನ್ನು ಅರಿತುಕೊಳ್ಳುವದೇ ಶರೀರ ತ್ಯಾಗ ಮಾಡುವ ವಿಧಿಯಾಗಿರುವದು.

ಅಲ್ಲೆಲೇಸಿಲ್ಲೇಲೇಸೆನಲಿಲ್ಲವೀ ಕ್ರಮ।
ದಲ್ಲಿ ದೇಹತ್ಯಾಗಮಾಗಲು ॥
ಎಲ್ಲಿಯಾದರುಮೇನು ಪರಮಯೋಗಿಗೆ ಮುಕ್ತಿ।
ಯಲ್ಲದೆ ಬೇರೊಂದು ಗತಿಯುಂಟೆ ॥ 5 ॥

ಹಿಂದೆ ಹೇಳಿದ ವಿಧಿಯನ್ನರಿತ ಮೇಲೆ ಮುಮುಕ್ಷ್ವಾದಿಗಳು, ದೇಹ ತ್ಯಾಗವನ್ನು ಕಾಶಿಯಲ್ಲಿ ಮಾಡಬೇಕು ಅಥವಾ ಇಲ್ಲಿ ಆಶ್ರಮದಲ್ಲಿ ಮಾಡಿದರೆ ಒಳ್ಳೆಯದೆಂಬ ಕಟ್ಟು ಇಲ್ಲವೇ ಇಲ್ಲ, ಅವರು ಎಲ್ಲಿ ದೇಹ ತ್ಯಾಗ ಮಾಡಿದರೂ ಕೂಡ ಮುಕ್ತಿಯೇ ಪ್ರಾಪ್ತವಾಗುವದಲ್ಲದೆ, ಬೇರೊಂದು ಗತಿಯು ಯೋಗಿವರನಿಗೆ ಸಾಧ್ಯವಿಲ್ಲ

ತಿಳಿಯೆ ನಿಜಾಕಾಶದೊಳು ಘಟಾಕಾಶವ।
ಚ್ಚಳಯದಾ ಘಟಭಿನ್ನವಾಗಲು ॥
ಘಳಿಲನೈದುವ ಪಾಂಗು ವರಯೋಗಿ ತನುವಿಂತಿ।
ದಳಿಯೆ ಬ್ರಹ್ಮದೊಳೊಂದಿ ಸುಖಮಿರ್ಕು ॥ 6 ॥

ವಿವೇಚಿಸಿ ನೋಡಲು ಘಟವು ಒಡೆಯಲಾಗಿ ಘಟದಾಕಾಶವು ತಾನು ನಾಶವಾಗದೆ, ತತ್‌ಕ್ಷಣದಲ್ಲಿ ಮಹಾಕಾಶದಲ್ಲಿ ಒಂದಾಗಿ ಬೆರೆಯುವಂತೆ ಯೋಗೀಶ್ವರನ ಶರೀರವು ನಾಶವಾಗಲು ಪರಿಪೂರ್ಣವಾದ ಪರಬ್ರಹ್ಮಸ್ವರೂಪದಲ್ಲಿ ಆತ್ಮ ಕೂಡಿ ಅವನು ಸುಖಸ್ವರೂಪಾಗಿ ಇರುವನು.

ಇಂದುವಿನೊಳು ಮತಿಬೇಕು ಮುಮುಕ್ಷುಗೆ।
ಸಂದೇಹವಿಲ್ಲದಭ್ಯಾಸಿಗೆ॥
ವೊಂದಿರಬೇಹುದು ರವಿಯೊಳು ಬುದ್ಧಿ ಕೇ।
ಳಂದುಗೆಯಡಿಯ ಚಂದನಗಂಧಿ ॥ 7 ॥

ಕಾಲು ಕಡಗ (ಪೈಜಣಿ) ಯುಳ್ಳ ಪಾದದ ಸುಗಂಧ ಶರೀರಿಯಾದ ಮೈತ್ರೇಯಿ, ದೇಹ ಬಿಡುವ ಕಾಲಕ್ಕೆ ಮುಮುಕ್ಷುವಾದವನು ಈಡಾ ನಾಡಿಯ ಅಭಿಮಾನಿಯಾದ ಚಂದ್ರದೇವತೆಯಲ್ಲಿ ತನ್ನ ಬುದ್ಧಿಯನ್ನಿರಿಸಿ ಪ್ರಾಣವನ್ನು ಬಿಡಬೇಕು. ಸಂದೇಹಾದಿಗಳಿಲ್ಲದ ಅಭ್ಯಾಸಿಯು ಪಿಂಗಳಾ ನಾಡಿಯ ಅಭಿಮಾನಿಯಾದ ಸೂರ್ಯ ದೇವತೆಯಲ್ಲಿ ತನ್ನ ಮತಿಯನ್ನಿಟ್ಟು ಪ್ರಾಣ ತ್ಯಾಗ ಮಾಡಬೇಕು ಮತ್ತು.....

ಅವಯವದೊಳ್ಬ್ರಹ್ಮವಿವರದಲ್ಲಿಯೆ ಬುದ್ಧಿ।
ಸವನಿಸುಗನುಭವಿಗಿದು ಸಿದ್ಧ ॥
ಯುವತಿ ಕೇಳಿಂತು ಮೂವರಿಗೆ ನಿರ್ಯಾಣದೊ।
ಳವಿಕಲ್ಪಮಾದ ಸದ್ವಿಧಿಗಳು ॥ 8 ॥

ಅನುಭವಿಯು ಅವಯವಗಳಲ್ಲಿ ಶ್ರೇಷ್ಠವಾದ ಬ್ರಹ್ಮರಂಧ್ರದಲ್ಲಿ ತನ್ನ ಮತಿಯನ್ನು ನಿಲ್ಲಿಸಿ ಪ್ರಾಣತ್ಯಾಗ ಮಾಡಬೇಕು. ಹೇ ಸ್ತ್ರೀಯಳೆ, ಈ ಪ್ರಕಾರ ಈ ಮೂವರು ಸುಕೃತಿಗಳಿಗೆ ದೇಹಬಿಡುವ ಕಾಲದಲ್ಲಿಯ ನಿಶ್ಚಯ ಮಾಡಿದ ಯೋಗ್ಯ ವಿಧಿಗಳು ಇವಾಗಿವೆ. ಎಂದು ನೀನು ಕೇಳಿ ತಿಳಿದುಕೊ.

– ಇತಿ ಯೋಗೀಶ್ವರಾದಿಗಳ ದೇಹತ್ಯಾಗ ಕ್ರಮ ನಿರೂಪಣೆ –

## 16ನೇ ಸೂತ್ರ

**ದೇಹವಾನಲ್ಲೆನ್ನ ದಲ್ಲೆಂದೊಡಾಗಳಾ ।**
**ದೇಹದತ್ಯಾಗವಾತನಿಗಕ್ಕು ॥**

ಈ ಶರೀರವು ಪಂಚಭೂತಗಳಿಂದಾಗಿದ್ದು ಭೂತಗಳಿಗೆ ಸೇರಿದೆ. ಆದ್ದರಿಂದ ಈ ಶರೀರವು ನಾನು ಅಲ್ಲ ಮತ್ತು ಅದು ನನ್ನದು ಅಲ್ಲ ಎಂದು ಯೋಗೀಶ್ವರನು ನಿಶ್ಚಯವಾಗಿ ತಿಳಿದಾಗಲೆ (ಈ ಶರೀರವು ಅನ್ಯರಿಗೆ ಪ್ರತೀತಿಯಾದರೂ) ಯೋಗಿಯ ಪಾಲಿಗೆ ಶರೀರ ತ್ಯಾಗವಾಗಿದೆ.

**ಪರಮಾರೂಢನ ತನು ಮೊದಲಾದು ವೆಲ್ಲವು।**
**ಪರಿಭವ ವಡೆದವಂತವರಲ್ಲಿ॥**
**ಚರಿಸುತಿರ್ಕಾತನವರ ಕರ್ಮಾದಿಗಳೊಡ।**
**ವೆರಸದೆ ತಾನೆಂದು ಪರಿಪೂರ್ಣ ॥ 1 ॥**

ಪರಮ ಸಿದ್ಧ ಪುರುಷನ ಶರೀರ ಮೊದಲಾದ ಕರಣಗಳೆಲ್ಲವು ಸಂಸಾರಿ ಜನರಲ್ಲಿ ಹೊಂದಿಕೊಂಡಿದ್ದು ಅವರೊಡನೆ ವ್ಯವಹರಿಸುತ್ತಿದ್ದರೂ ಆ ಕರಣಗಳ ಧರ್ಮ ಕರ್ಮಗಳಲ್ಲಿ ಯೋಗಿಯು ಕೂಡದೆ ತಾನು ಎಂದೆಂದು ಪರಿಪೂರ್ಣ ಸಚ್ಚಿದಾನಂದ ಸ್ವರೂಪನಾಗಿ ಸುಖದಿಂದಿರುವನು.

**ಪರಮಾರೂಢನ ತನು ಮನವಸು ಲಯದಲ್ಲಿ।**
**ನಿರವಿಸಲಹುದೆ ಬೇರೊಂದನು॥**
**ವರಸೇತು ಬಂಧದೆಡೆಯೊಳುಂಟೆ ಗತಿ ನೀರೆ।**
**ಪರಮಾತ್ಮನಾತನೆ ಪರಿಪೂರ್ಣ ॥ 2 ॥**

ಪ್ರಸಿದ್ಧವಾದ ರಾಮೇಶ್ವರಾದಿ ಸೇತುವಿನ ಬಳಿ ಯಾವದೇ ತರಹದ ಅಡ್ಡಿ ಆತಂಕಗಳು ಇಲ್ಲದಂತೆ, ಪರಮ ಸಿದ್ಧ ಪುರುಷನ ಶರೀರ, ಮನಸ್ಸು ಪ್ರಾಣಗಳು ದೇಹತ್ಯಾಗದ ಮುನ್ನ ಲಯವಾಗಿರುವದರಿಂದ, ಅವನಿಗೆ ಬೇರೊಂದು ಗತಿಯನ್ನು ಕಲ್ಪಿಸಿ ನಿರೂಪಿಸಲಾಗದು. ಯಾಕೆಂದರೆ ಅವನು ಸಚ್ಚಿದಾನಂದ ನಿತ್ಯ ಪರಿಪೂರ್ಣ ಪರಮಾತ್ಮನೇ ಇರುವನು.

ಎಂದು ಸದ್ಗುರುವರನಿಂದ ತನ್ನನು ದಿಟ।
ದಿಂದ ತಾನರಿದನಾಕ್ಷಣದೊಳು ॥
ಸಂದೇಹವೇನು ತತ್ತನುವಿಗದೇ ತ್ಯಾಗ।
ವೆಂದು ಮೈತ್ರೇಯಿ ನಂಬಿದು ತತ್ತ್ವ ॥ 3 ॥

. ಸದ್ಗುರು ಮುಖದಿಂದ ಸತ್ಯವಾಗಿ ಅಸತ್ಯ ಜಡ ದುಃಖರೂಪವಾದ ಈ ಶರೀರ ತಾನಲ್ಲ, ತನ್ನದಲ್ಲ (ಸಚ್ಚಿದಾನಂದಾತ್ಮ ಪರಬ್ರಹ್ಮನೆ ತಾನಿದ್ದೇನೆ) ಎಂದು ಯಾವಾಗ ತಿಳಿದನೋ ಆ ಕ್ಷಣದಲ್ಲಿಯೇ ಅವನಿಗೆ ಆ ಶರೀರದ ತ್ಯಾಗವಾಯಿತು. ಇದರಲ್ಲಿ ಎಳ್ಳಷ್ಟು ಸಂಶಯವಿಲ್ಲ, ಹೇ ಮೈತ್ರಾ ದೇವಿಯೆ, ಇದು ಸತ್ಯವಾದ ತತ್ತ್ವವೆಂದು ನಂಬು.

ಒಂದೆ ಜನನವನುಭವಿಗೆ ಯಭ್ಯಾಸಿಗೆ।
ಸಂದಿರ್ಪವೆರಡು ಜನ್ಮಂಗಳು ॥
ಮುಂದೆ ಮುಮುಕ್ಷುಗೆ ಜನಿಮೂರು ಚರಮನಿ।
-ಗೆಂದು ಸಂಭವವಿಲ್ಲವರಿ ಮುಕ್ತಿ ॥ 4 ॥

ಶ್ರೀ ಗುರುಸೇವೆಯಲ್ಲಿ ಇರುವಾಗ ಮುಮುಕ್ಷುವಿಗೆ ಮೂರು ಜನ್ಮಗಳು, ಅಭ್ಯಾಸಿಗೆ ಎರಡು ಜನ್ಮಗಳು ಅನುಭವಿಗೆ ಒಂದು ಜನ್ಮವು, ಈ ಕ್ರಮದಿಂದ ಶರೀರಗಳು ಬರುವವು. ಆದರೆ ಆರೂಢನಿಗೆ ಈಗ ಇದ್ದದ್ದೇ ಕಡೆಯ ಶರೀರವು. ಅವನಿಗೆ ಇನ್ನೆಂದೂ ಜನ್ಮವಿಲ್ಲ ಆದ್ದರಿಂದ ಅವನು ನಿತ್ಯ ಮುಕ್ತಾತ್ಮನಾಗಿರುವನು ಹೇ ಮೈತ್ರೇಯಿ, ಈ ಪ್ರಕಾರ ನೀನು ತಿಳಿದುಕೊ.

ಪಲಕಾಲಮಿರ್ದು ನಾಕದೊಳುಂಡು ಸುಖವನು।
ನಲಿದಿಲ್ಲಿ ಸತ್ಕುಲದೊಳು ಪುಟ್ಟಿ॥
ಬಳಿಕ ಮುಕ್ತಿಯನ್ನೈದುತಿಹರೆಂದು ತಿಳಿವುದು।
ಲಲನೆ ಮುಮುಕ್ಷಾದಿಗಳ ನಿಂತು ॥ 5 ॥

ಮುಮುಕ್ಷು, ಅಭ್ಯಾಸಿ ಮತ್ತು ಅನುಭವಿಗಳಿವರು ಮೇಲೆ ಹೇಳಿದಂತೆ ದೇಹ ತ್ಯಾಗ ಮಾಡಿದ ಮೇಲೆ ಸ್ವರ್ಗ ಲೋಕಕ್ಕೆ ಹೋಗಿ ಕೆಲಕಾಲವಿದ್ದು ಅಲ್ಲಿ ಸುಖಗಳನ್ನು ಉಪಭೋಗ ಮಾಡುವರು. ಬಳಿಕ ಅವರು ಈ ಲೋಕದಲ್ಲಿ ಸತ್ಕುಲದಲ್ಲಿ ಅಂದರೆ ಸಂತ ಸತ್ಪುರುಷರ ಕುಲದಲ್ಲಿ ಹುಟ್ಟಿ ತಮ್ಮ ಸಂಸ್ಕಾರಾನುಸಾರ ಸಾಧನಗೈದು ಮುಕ್ತಿಯನ್ನು ಪಡೆವರು ಅಂದರೆ ಪರಮಾತ್ಮನಲ್ಲಿ ಐಕ್ಯರಾಗುವರು. ಹೇ ಸ್ತ್ರೀಯಳೆ, ಈ ಪ್ರಕಾರವಾಗಿ ತಿಳಿದುಕೊ.

ಅನುರಾಗದಿಂದೆ ಮಾಳ್ಪುದು ದೇಹಸಂಸ್ಕಾರ।
ವನು ವಿಧಿಯೊಳು ಮುಮುಕ್ಷಾದಿಯ ॥
ತನುಗಳನಗ್ನಿ ಭೂ ನದೀ ವನ ವೃಕ್ಷಾದಿ।
ಯೆನಿಪಲ್ಲಿ ಸಂಸ್ಥಾನಗತಿಯಿಂದ ॥ 6 ॥

ಮುಮುಕ್ಷು, ಅಭ್ಯಾಸಿ, ಅನುಭವಿಗಳು ದೇಹ ತ್ಯಾಗವಾದ ಕೂಡಲೆ ಅವರ ದೇಹದ ಸಂಸ್ಕಾರವನ್ನು, ಅಗ್ನಿ, ಭೂಮಿ, ನದೀ, ಅರಣ್ಯ, ವೃಕ್ಷಾದಿಗಳಿದ್ದ ಸ್ಥಳಗಳಲ್ಲಿ ಅವರವರ ವಂಶಪರಂಪರೆಗನುಸರಿಸಿ ಪ್ರೀತಿಯಿಂದ ವೈಭವಯುತವಾಗಿ, ಅವರ ಬಂಧುಬಾಂಧವರಾಗಲಿ, ಗುರುಬಂಧುಗಳಾಗಲಿ ಮಾಡತಕ್ಕದ್ದು.

ಪರಮಾರೂಢನಿಗೊಂದು ವಿಧಿಯಿಲ್ಲದಂತಿರ್ಕೆ।
ಹರಪೂಜಾ ಶ್ರಾದ್ಧಾದಿ ಸಂಸ್ಕಾರ॥
ವಿರಚಿಪುದೊಲಿದು ಮುಮುಕ್ಷಾದಿ ಮೂವರ್ಗೆ।
ವರಪುತ್ರ ಮಿತ್ರಾದಿ ಹಿತವರು ॥ 7 ॥

ಪರಮ ಸಿದ್ಧನಾದ ಆರೂಢನ ದೇಹದ ಅಂತ್ಯ ಸಂಸ್ಕಾರ ಮಾಡಲು ಯಾವ ವಿಧಿ ನಿಯಮಗಳು ಇರುವದಿಲ್ಲ, ಅದು ಏನೇ ಇರಲಿ. ಮುಮುಕ್ಷು ಅಭ್ಯಾಸಿ ಮತ್ತು ಅನುಭವಿ ಈ ಮೂವರ ದೇಹದ ಅಂತ್ಯ ಸಂಸ್ಕಾರಕ್ಕೆ ದೇವರ ಪೂಜಾದಿಗಳನ್ನು ಏರ್ಪಡಿಸಬೇಕು. ತಿಂಗಳ, ವರ್ಷದ ಶ್ರಾದ್ಧ ಕರ್ಮಗಳನ್ನು, ಅವರ ಪುತ್ರ, ಮಿತ್ರ ಮೊದಲಾದ ಹಿತೈಷಿಗಳು ಪ್ರೀತಿ ಗೌರವಗಳಿಂದೊಡಗೂಡಿ ಆಚರಿಸಬೇಕು.

– ಇತಿ ಯೋಗೀಶ್ವರಾದಿಗಳ ತನು ಸಂಸ್ಕಾರ ಕ್ರಮನಿರೂಪಣೆ –

## 17ನೇ ಸೂತ್ರ

ಭಕ್ತಿ ಮಾತ್ರವನು ಮಾಡಿದೊಡೆ ಕೇಳಂಗನೆ ।
ಮುಕ್ತಿ ಪದವನೊಲಿದೀವನೀಶನು ॥

ಹೇ ಸ್ತ್ರೀಯಳೆ ಕೇಳು, ಪರಮಾತ್ಮನ ಚರಣಾರವಿಂದಗಳಲ್ಲಿ ಕೇವಲ ಅನನ್ಯ ಭಕ್ತಿಯನ್ನು ಮಾಡಿದರೆ ಸಾಕು, ಆತನು ಮೆಚ್ಚಿ ಪರಮುಕ್ತಿ ಸುಖವನ್ನು ನಿಶ್ಚಯವಾಗಿ ದಯಪಾಲಿಸುವನು.

ಇದು ಸಗುಣಕ್ರಮವಿದು ತಿಳಿಯದವರ್ಗೆ ।
ಸದಮಳ ಗುರುಶಂಭುಲಿಂಗ ॥
ಪದಭಕ್ತಿಯನು ನೆಟ್ಟನೊರೆದು ನಂಬುಗೆದೋರಿ ।
ಪದುಳವನೀವುದು ಗುರುಗಳು ॥ 1 ॥

ಈ ಹಿಂದೆ ತಿಳಿಸಿ ಹೇಳಿದುದು ಸಗುಣಮಾರ್ಗವು. ಇದು ತಿಳಿಯದವರಿಗೆ ಅವರನ್ನು ತಿರಸ್ಕರಿಸದೆ, ಗುರುಗಳಾದವರು ಶ್ರೀ ಶಂಭುಲಿಂಗನ ಪರಮ ಪವಿತ್ರವಾದ ಪಾದಕಮಲಗಳಲ್ಲಿ ಅನನ್ಯ ಭಕ್ತಿಯನ್ನು ಹುಟ್ಟಿಸಿ, ಅದರಿಂದ ಮುಕ್ತಿಯಾಗುವದೆಂಬ ವಿಶ್ವಾಸವನ್ನು ಮನದಲ್ಲಿ ತುಂಬಿ ಅವರಿಗೆ ಆನಂದವನ್ನುಂಟು ಮಾಡಬೇಕು.

ಸಗುಣ ನಿರ್ಗುಣವೆಂಬವೆರಡು ರೂಪಿಂದೀಶ।
ನಗಣಿತ ಸಿದ್ಧಿ ಮುಕ್ತಿಗಳನು ॥
ಬಗೆಯ ಭೇದವನರಿದೀವುದು ನಿಜವೆಂದು।
ನಿಗಮಾಗಮಾದಿಗಳೊರೆವವು ॥ 2 ॥

ಸಚ್ಚಿದಾನಂದ ಪರಮಾತ್ಮನು ನಿರ್ಗುಣ ಅಂದರೆ ನಿರುಪಾಧಿಕತ್ವದಿಂದ ನಿರಾಕಾರನಾಗಿಯೂ ಮತ್ತು ಭಕ್ತರಿಗೆ ಅನುಗ್ರಹ ಮಾಡುವದಕ್ಕಾಗಿ ಉಪಾಧಿ ಮೂಲಕ ಸಗುಣ ಎಂದರೆ ಸಾಕಾರನಾಗಿಯೂ, ಇರುವನು. ಭಕ್ತರು ಏನೇನು ಇಚ್ಛಿಸಿ ಸಕಾಮ ಭಕ್ತಿಯಿಂದ ಭಜಿಸುವರೋ ಈಶನು ಅವರಿಗೆ ಅಗಣಿತ ಅಣಿಮಾದಿ ಸಕಲ ಸಿದ್ಧಿಗಳನ್ನು ನೀಡುವನು. ನಿಷ್ಕಾಮ ಭಕ್ತರಿಗೆ ಮುಕ್ತಿಪದವನ್ನು ಅವರವರ ಭಾವದಂತೆ ಕೊಡುವನು. ಸತ್ಯವಿದು ನಾನು ಕಲ್ಪಿಸಿ ಹೇಳಿದ್ದಲ್ಲ, ನಿಗಮಾಗಮಾದಿ ಶಾಸ್ತ್ರಗಳು ಹೇಳುವವು.

ಭಕ್ತವಾತ್ಸಲ್ಯನೆನಿಪ ಶಂಭುಪದವನು।
ಭಕ್ತಿಯಿಂದಾಶ್ರಯಿಸಿ ಬೇರೊಂದು ॥
ಯುಕ್ತಿಗಲಿಯದೆ ಸುಮ್ಮನೆ ಭಜಿಪುದು ಪರ।
ಮುಕ್ತಿಯನೊಲಿವ ಸಜ್ಜನರೆಲ್ಲ ॥ 3 ॥

ಪುನರಾವೃತ್ತಿರಹಿತ ವಾದ ಮುಕ್ತಿಪದವನ್ನು ಇಚ್ಛಿಸುವ ಸದ್ಗುಣ ಸಂಪನ್ನ ಸಾಧಕರು ಭಕ್ತವತ್ಸಲನಾದ ಶಂಭುಲಿಂಗನ ಪಾದಕಮಲಗಳನ್ನು ಭಕ್ತಿಯಿಂದ ಆಶ್ರಯಿಸಬೇಕು. ಆದರಲ್ಲಿ ಬೇರೊಂದು ಅಸಂಗತ ಯುಕ್ತಿಗಲಿಯದೆ ಸರಳ ಮನಸ್ಸಿನಿಂದ ಅವನ ಪಾದ ಪದ್ಮಗಳನ್ನು ಸೇವಿಸಬೇಕು. (ಭಜಿಸುತ್ತಿರಬೇಕು) ಆದರಿಂದ ಅವರು ನಿಶ್ಚಯವಾಗಿ ಮುಕ್ತಿ ಪಡೆವರು.

ಸುಲಭೋಪಾಯವನೊಂದನೊಲಿದರುಪುವೆನು ನಿ।
ರ್ಮಳ ಮುಕ್ತಿಗೆಳಸುವ ಸುಜನರ್ಗೆ ॥
ನಲಿದೀಶ ಶರಣೆಂಬುದಿದು ತಾನೆ ಸಾಲ್ಗಿನ್ನು।
ಪಲವುಪದೇಶದೊಳ್ಪುರುಳಿಲ್ಲ ॥ 4 ॥

ಸಕಲ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿರೂಪ ಮೋಕ್ಷವನ್ನು ಇಚ್ಛಿಸುವ ಎಲ್ಲ ಸಜ್ಜನರಿಗೆ ನಾನು, ಅದನ್ನು ಪಡೆಯುವದಕ್ಕೆ ಒಂದು ಅತ್ಯಂತ ಸುಲಭವಾದ ಉಪಾಯ ಹೇಳುವೆನು. 'ಹೇ ಪರಮಾತ್ಮ ನಾನು ನಿನ್ನ ಪಾದಕಮಲಗಳಿಗೆ ಅನನ್ಯಭಕ್ತಿಯಿಂದ ಶರಣು ಬಂದಿದ್ದೇನೆ. ನಾನು ದೀನನು, ಅನಾಥನು, ನಿನ್ನನ್ನೇ ನಂಬಿರುವೆನು. ನನ್ನನ್ನು ಕಾಪಾಡುವ ಭಾರವೆಲ್ಲನಿನ್ನದು. ನನ್ನನ್ನು ರಕ್ಷಿಸಿ ಉದ್ಧರಿಸು, ತಂದೆ', ಎಂದು ತನ್ನತನವನ್ನು ಪೂರ್ಣಬಿಟ್ಟು ಶರಣಾದರೆ ಸಾಕು. ಇದನ್ನು ಹೊರತು ಪಡಿಸಿ ಬೇರೆ ಬೇರೆ ಉಪದೇಶಗಳಿಂದ ಪ್ರಯೋಜನವಿಲ್ಲ.

ಯೋಗ ವಿಚಾರ ವಿರಾಗ ವಿದ್ಯಾ ಕರ್ಮ ।
ಪೂಗಾದಿ ಬಹುಕೋಟಲೆಗಳನು ॥
ನೀಗಿ ನಿರ್ಮಳ ಶಿವಭಕ್ತಿಯೊಂದಿರೆ ಮುಕ್ತ ।
ನಾಗುವನವನಿದು ಪರಮಾರ್ಥ ॥ 5 ॥

ಚಿತ್ತೈಕಾಗ್ರತಾರೂಪಯೋಗ, ಸಾರಾಸಾರ ವಿಚಾರ, ಇಹಪರ ಭೋಗಗಳಲ್ಲಿ ಪ್ರೀತಿ ಇಲ್ಲದಿರುವ ವೈರಾಗ್ಯ, ಅನೇಕ ತರಹ ವಿದ್ಯೆಗಳು, ಯಜ್ಞಾದಿ ಕರ್ಮಗಳು ಇವೆಲ್ಲ ಸಾಧನೆಗಳು ಅತ್ಯಂತ ಆಯಾಸಕರವಾಗಿರುವವು. ಅವೆಲ್ಲವುಗಳನ್ನು ಬಿಟ್ಟು ಸ್ವಾರ್ಥಕಲ್ಮಷವಿಲ್ಲದ ನಿರ್ಮಲ ಭಕ್ತಿಯೊಂದನ್ನು ಮಾತ್ರ ಶಿವನ ಪಾದಕಮಲಗಳಲ್ಲಿ ಮಾಡಿದರೆ ಸಾಧಕನು ಮುಕ್ತನಾಗುವನು. ಇದರಲ್ಲಿ ಅತಿಶಯೋಕ್ತಿಯಿಲ್ಲ, ಇದೇ ಪರಮಾರ್ಥ.

ಕಲಿಯುಗದೊಳು ಶಂಭು ಸುಲಭನೆನಿಪನಾಗಿ ।
ನಲಿದು ತತ್ಪದಯುಗಭಕ್ತಿಯು ॥
ನೆಲಿಸೆ ಮಾನಸದೊಳಿನಿಸು ವೇಳ್ಯೆಯದು ಮುಕ್ತಿ ।
ಲಲನೆಯನವನೊಡವೆರಸುಗು ॥ 6 ॥

ಈ ಕಲಿಕಾಲದಲ್ಲಿ ತಪಸ್ಸು ಯೋಗ, ಯಜ್ಞಾದಿ ಕರ್ಮಗಳನ್ನು ಮಾಡುವದು ಬಹು ಕಷ್ಟಕರವಾಗಿರುವದು. ಶಿವನನ್ನು ಒಲಿಸುವದಕ್ಕೆ ಸುಲಭ ಉಪಾಯವೆಂದರೆ ಅವನ ನಾಮಸ್ಮರಣೆ ಮತ್ತು ಭಕ್ತಿಯಿಂದ ಅವನ ಪಾದ ಭಜನೆಯನ್ನು ಮಾಡುವದಾಗಿದೆ. ಶಿವನು ನಾಮಸ್ಮರಣೆಗೆ ಒಲಿಯುವವನಾದ್ದರಿಂದ ನಾಮಸ್ಮರಣ ಸಹಿತ ಅವನ ಪಾದಕಮಲಗಳಲ್ಲಿ ಅನನ್ಯ ಭಕ್ತಿಯನ್ನು ಇನಿಸುವೇಳೆ ಮಾಡುವದರಿಂದ ಮುಕ್ತ್ಯಾಂಗನೆಯು ಒಲಿದು ಸಾಧಕನನ್ನು ವರಿಸುವಳು. ಅಂದರೆ ಅವನು ಸುಲಭವಾಗಿ ಮುಕ್ತಿಯನ್ನು ಪಡೆಯುವನೆಂಬ ತಾತ್ಪರ್ಯ.

ಕರಕಂಜವೆತ್ತಿ ಪ್ರತಿಜ್ಞೆಯನೀಶನು ।
ವರವೇದವರಿಯೆ ಮಾಡಿದನಿಂತು ॥
ಪರಮ ವಿಶ್ವಾಸದೊಡನೆ ತನ್ನನೈದಿದ ।
ಪುರುಷರ್ಗೆ ಭವಭಾದೆ ಪೊರತೆಂದು ॥ 7 ॥

ಅತ್ಯಂತ ಭಕ್ತಿಪೂರ್ವಕವಾಗಿ ತನಗೆ ಶರಣು ಬಂದ ಭಕ್ತರಿಗೆ ಜನನ ಮರಣಾತ್ಮಕ ಸಂಸಾರದ ಭಯಂಕರ ದುಃಖವು ಆಗುವದಿಲ್ಲವೆಂದು ಪರಮಾತ್ಮನು ಕರಕಮಲಗಳನ್ನೆತ್ತಿ ವೇದದ ಮೂಲಕ ಎಲ್ಲರು ಅರಿಯುವ ಹಾಗೆ (ಮುಂದೆ ಹೇಳುವಂತೆ) ಪ್ರತಿಜ್ಞೆಯನ್ನು ಮಾಡಿದನು. ಆದ್ದರಿಂದ ಪರಮ ಭಕ್ತಿಯಿಂದ ಪರಮಾತ್ಮನನ್ನು ನಂಬಿದವರಿಗೆ ಎಂದೆಂದೂ ಅನರ್ಥವಾಗುವದಿಲ್ಲ, ಕಿಂತು ಪರಮಸುಖರೂಪ ಮುಕ್ತಿ ಪ್ರಾಪ್ತವಾಗುವದು.

ತನುವಿಯೋಗದೊಳೊಮ್ಮ ನೆನೆಯೆ ನೆನೆಯದಿರ ।
ಲನುರಾಗದಿಂದೆನ್ನ ಭಕ್ತರ್ಗೆ ॥
ಘನಮುಕ್ತಿಯನು ತಾನೆ ನೆನೆದೀವೆನೆಂದು ಮಾ ।
ನಿನಿರನ್ನೆ ಸತ್ಯನೊಳುಪ್ಪಿಯುಂಟೆ ॥ 8 ॥

ಗೌರವವುಳ್ಳ ಸ್ತ್ರೀಯರಲ್ಲಿ ರತ್ನಪ್ರಾಯಳಾದ ಮೈತ್ರೇಯಿ, 'ಶರೀರ ಬಿಡುವ ಕಾಲದಲ್ಲಿ ಒಮ್ಮೆ ತನ್ನನ್ನು ಸ್ಮರಿಸಿದರೂ ಸರಿ ಸ್ಮರಿಸದಿದ್ದರೂ ಸಹ ನನ್ನ ಭಕ್ತರಿಗೆ ಪರಮ ಪದವಾದ ಮುಕ್ತಿಯನ್ನು ಅತ್ಯಂತ ಪ್ರೀತಿಯಿಂದ ನಾನೆ ನೆನಪಿಸಿಕೊಂಡು ಕೊಡುವೆನು' ಎಂದು ಪರಮಾತ್ಮನು ಪ್ರತಿಜ್ಞೆಯನ್ನು ಮಾಡಿದ್ದಾನೆ. ಸತ್ಯ ಸ್ವರೂಪನಾದ ಪರಮಾತ್ಮನಲ್ಲಿ ಅಸತ್ಯ ಘಟಿಸಲು ಸಾಧ್ಯವಾದೀತೆ ? (ಅವನ ಪ್ರತಿಜ್ಞೆ ಸುಳ್ಳಾಗದೆಂಬ ಭಾವ.)

ಅನಿಮಿತ್ತ ಬಂಧು ದಯಾಳು ಶಂಕರನೀಶ ।
ನನಘನಾನಂದವಾರಿಧಿ ತನ್ನ ॥
ನೆನವು ಮಾತ್ರದೊಳು ಮುಕ್ತಿಯನೀವನೆಂದು ಸ ।
ಜ್ಜನರು ನಂಬಿಹುದು ಸುಸ್ಥಿರಮಾಗಿ ॥ 9 ॥

ಪರಮಾತ್ಮನು ಯಾವ ನಿಮಿತ್ತವಿಲ್ಲದೆ ಆಪ್ತನಾಗಿರುವವನು, ಎಲ್ಲರಿಗೂ ಉಪಕಾರ ಮಾಡುವವನು, ಸುಖವನ್ನು ಕೊಡುವವನು, ಮೂರು ಲೋಕಗಳನ್ನು ಆಳುವವನು, ಪಾಪರಹಿತನು, ಆನಂದ ಸಾಗರನು ಆಗಿರುವನು. ಅಂಥ ಪರಮಾತ್ಮನು ಯಾರು ತನ್ನನ್ನು ಸ್ಮರಿಸುವರೋ ಆ ಸ್ಮರಣ ಮಾತ್ರದಿಂದ ಅವರಿಗೆ ಮುಕ್ತಿಯನ್ನು ದಯಪಾಲಿಸುವನು. ಈ ಪ್ರಕಾರ ತಿಳಿದು ಸಂಪನ್ನರಾದ ಜನರು ದೃಢವಾಗಿ ವಿಶ್ವಾಸವಿಟ್ಟು ಪರಮಾತ್ಮನನ್ನು ಯಾವಾಗಲೂ ಸ್ಮರಿಸುತ್ತಿರಬೇಕು. ಅವರು ಮುಕ್ತರಾಗುವದು ಸ್ಮರಣ ಮಾತ್ರದಿಂದ, (ನತುಕಾರಕಂ) ಇಲ್ಲಿ ಬೇರೊಂದು ಮಾಡುವದು, ಇಲ್ಲ.

ಕುಂದದಿಹುದು ದೋಷ ಏಧಿ ಕಲಿಯುಗದೊಳ ।
ಗೊಂದೊಳ್ಳಿತ್ತಿಲ್ಲೆಂತುಮರಿಯಲ್ಕೆ ॥
ಮಂದಗಮನೆ ಶಿವಪದದ ನೆನಹು ಮಾತ್ರ ।
ದಿಂದಕ್ಕುಮಖಿಳರ್ಗೆ ವರಮುಕ್ತಿ ॥ 10 ॥

ಮಂದಗಮನೆಯಾದ ಮೈತ್ರೇಯಿ ಈ ಕಲಿಯುಗದಲ್ಲಿ ಪಾಪಕರ್ಮವು ಅತ್ಯಧಿಕವಾಗಿರುವದು. ವಿಚಾರ ಮಾಡಲಾಗಿ ಉತ್ತಮವಾದ ಪುಣ್ಯಕಾರ್ಯವೊಂದಾದರೂ ಇಲ್ಲ. ಪರಮಾತ್ಮನ ಪಾದಕಮಲಗಳ ಸ್ಮರಣ ಮಾತ್ರ ಮಾಡುವದರಿಂದ ಎಲ್ಲರಿಗೂ ಎಳ್ಳನಿತು ದುಃಖವಿಲ್ಲದ ಪರಮ ಸುಖರೂಪ ಮುಕ್ತಿಯು ಪ್ರಾಪ್ತವಾಗುವದು. ಆದ್ದರಿಂದ ಶಿವನಪಾದ ಕಮಲಗಳ ಸ್ಮರಣ ಮಾಡುತ್ತ ಮುಮುಕ್ಷುಗಳು ಮುಕ್ತಿಯನ್ನು ಪಡೆಯಬೇಕೆಂಬ ಭಾವ.

ಆದರಿಂದೆ ಭಕ್ತಿಮಾತ್ರದೆ ಶಂಭು ನಿಜಮುಕ್ತಿ।
ಪದವನೀವುದು ತಥ್ಯವಹುದಾಗಿ॥
ಪದುಳದಿಂದನ್ಯವ ನೆಳಸದೆ ಸದ್ಭಕ್ತಿ।
ಯೊದವುಳ್ಳವನೆ ಮುಕ್ತನಿದು ಸಿದ್ಧ॥ 11 ॥

ಈ ಕಾರಣದಿಂದ ಕೇವಲ ಭಕ್ತಿ ಮಾಡುವದರಿಂದಲೇ ಪರಮಾತ್ಮನು ತನ್ನ ಸ್ವರೂಪಭೂತವಾದ ಮುಕ್ತಿಯನ್ನು ದಯಪಾಲಿಸುವದು ಸತ್ಯವಾಗಿರುವದು. ಆದುದರಿಂದ ಅನ್ಯ ಸಾಧನವನ್ನು ಅಪೇಕ್ಷೆ ಪಡದೆ ಆನಂದದಿಂದ ಕೇವಲ ಅನನ್ಯ ಭಕ್ತಿಯ ಒಲವುಳ್ಳವನೆ ಮುಕ್ತನಾಗುವನು. ಇದು ಸತ್ಯ ವಾದ ಸಿದ್ಧಾಂತವಾಗಿರುವದು.

– ಇತಿ ಶಿವಭಕ್ತ್ಯಾಧಿಕ್ಯ ನಿರೂಪಣೆ (ಶಿವಭಕ್ತಿ ಅಧಿಕ ಸಾಧನ ಮುಕ್ತಿಗೆ)

## 18ನೇ ಸೂತ್ರ

ಸರ್ವವೆಲ್ಲವನು ಚಿದಾತ್ಮಭಾವನೆಗಂಡು ।
ಸರ್ವಸಮತ್ವದಿಂದಿರೆ ಭಕ್ತಿ ॥

ತನ್ನೊಳಹೊರಗೆ ಇರುವ ಚೇತನಾಚೇತನ ರೂಪ ಸಕಲ ವಿಷಯಗಳು ಅಸ್ತಿ ಭಾತಿ, ಪ್ರಿಯ ನಾಮ, ರೂಪ ಈ ಪಂಚ ಅಂಶಗಳಿಂದ ಕೂಡಿರುವವು. ಇವುಗಳಲ್ಲಿ ಮಾಯೆಯ ಅಂಶವಾದ ನಾಮ ರೂಪಗಳನ್ನು ನೇತಿಗಳೆದು, ಉಳಿದ ಪರಮಾತ್ಮನ ಸ್ವರೂಪವಾದ ಸತ್, ಚಿತ್, ಆನಂದ, ಇವುಗಳನ್ನು ಮಾತ್ರ ಗ್ರಹಿಸಬೇಕು. ಇದರಿಂದ ಸರ್ವದರಲ್ಲಿ ಸಚ್ಚಿದಾನಂದಾತ್ಮಭಾವವು ನೆಲೆಗೊಳ್ಳುವದು ಮತ್ತು ಸಾಧಕನಲ್ಲಿ ಸಮತ್ವಭಾವವುಂಟಾಗುವದು. ಹೀಗೆ ಇರುವದೆ ಭಕ್ತಿಯು.

ರಾಗಾದಿ ಗುಣದೋಷಪೂಗವನುಳಿದನು।
ರಾಗದಿಂದವೆ ಶಂಭು ಶರಣೆಂದು।
ನೀಗಿ ಕಳೆವುದು ಸಂಸಾರದ ಬಾಧೆಯ।
ನಾಗಮವರಿದಚ್ಚ ಸುಖಿಗಳು ॥ 1 ॥

ರಾಗದ್ವೇಷಾದಿ ನವಗುಣ ದೋಷಗಳು ಅಂತಃಕರಣದ ಧರ್ಮಗಳು. ಆದ್ದರಿಂದ ಆಗಮವನ್ನು ಬಲ್ಲ ಪರಮ ಸುಖಿಗಳು ಅತ್ಯಂತ ಭಕ್ತಿಯಿಂದ ಶಂಭುಲಿಂಗ ಪರಮಾತ್ಮನಿಗೆ ಶರಣಾಗುವ ಮೂಲಕ ಅವುಗಳನ್ನು ರಾಗಾದಿ (ದೋಷ) ತೊಡೆದು ಹಾಕಿ, ಸಂಸಾರ ದುಃಖವನ್ನು ಕಳೆದುಕೊಳ್ಳಬೇಕು.

ಶಿವನನು ತನ್ನೊಡನವಿನಾಭಾವನೆಯೊಳು।
ಸುವಿಚಾರದಿಂದೆ ಕಾಣ್ವಾತಂಗೆ॥
ಭವಬಂಧವಳಿಗುಮನ್ಯರಿಗೆ ಸಂಸೃತಿಯೆಂದು।
ಪವಣವೆನಿಪ ವೇದಮೊರೆವುದು ॥ 2 ॥

ಯಾವನು ಪರಮಾತ್ಮನನ್ನು ಸುವಿವೇಕದ ದ್ವಾರಾ ಅಭೇದ ಭಾವನೆಯಿಂದ ತಿಳಿದು ಅವನಲ್ಲಿ ಒಂದಾಗುವನೋ, ಅವನಿಗೆ ದುಃಖರೂಪ ಸಂಸಾರವು ನಿವೃತ್ತಿ ಯಾಗುವದು. ಆದರೆ ಯಾವನು ಭೇದ ಭಾವನೆಯಿಂದೊಡಗೂಡಿ ತನ್ನ ನಿಜ ಸ್ವರೂಪವನ್ನು ತಿಳಿಯುವದಿಲ್ಲವೋ ಅವನು ಸಂಸಾರ ಬಾಧೆಗೆ ಸಿಲುಕಿ ದುಃಖದಲ್ಲಿ ಮುಳುಗುವನು. ಈ ಪ್ರಕಾರವಾಗಿ ಪ್ರಮಾಣಭೂತವಾದ ವೇದಗಳು ಪ್ರತಿಪಾದಿಸುವವು.

ತಿಳಿ ತತ್ತ್ವಮಸಿಯೆಂದು ಬಳಿಕ ತ್ವಂ ತದಸಿಯೆಂ।
ದೆಳಸಿ ನಿಗಮ ವಾಕ್ಯಮೊರೆಯಲು ॥
ಕಳಹಂಸಗಮನೆ ಜೀವೇಶ್ವರ ಭೇದವ।
ನುಳಿದೇಕ ರಸವೆಂದು ನಿಜದಿಂದ ॥ 3 ॥

ರಾಜಹಂಸದ ನಡಿಗೆಯುಳ್ಳ ಮೈತ್ರೇಯಿ, ತತ್ತ್ವಮಸಿ ಎಂದರೆ ಆ ಬ್ರಹ್ಮವೇ ನೀನಿರುವಿ ಎಂಬ ಮಹಾವಾಕ್ಯವು ಪರೋಕ್ಷ ಭ್ರಮೆಯನ್ನು ಕಳೆದರೆ, ತ್ವಂತದಸಿ ಅಂದರೆ ನೀನೇ ಆ ಬ್ರಹ್ಮನಿರುವಿ ಎಂಬ ವಾಕ್ಯವು ಪರಿಚ್ಛಿನ್ನ ಭಾವವನ್ನು ನಿವೃತ್ತಿಗೊಳಿಸುವದು. ಹೀಗೆ ಜೀವೇಶ್ವರರಲ್ಲಿ ಭ್ರಮೆಯಿಂದ ತೋರುವ ಭೇದವನ್ನು ತೆಗೆದುಹಾಕಿ ಉಳಿದದ್ದೇ ನಿಜವಾಗಿ ಏಕರಸವಾದ ಪರಿಪೂರ್ಣ ಸ್ವರೂಪವೇ ಇರುವದು. ಅದೇ ನೀನಿರುವಿಯೆಂದು ತಿಳಿದುಕೊ.

ಒಂದು ವಿಷಯವು ಬೇರೆಂದು ಭಾವಿಸದೀಶ।
ನೆಂದನುಚಿಂತನೆ ಗೈವುದು ॥
ಇಂದುಸನ್ನಿಭ ಮುಖಿ ಯಾತ್ಮೈವೇದಂ ಸರ್ವ।
ಮೆಂದು ನಿಗಮವಾಕ್ಯವಿಹುದಾಗಿ ॥ 4 ॥

ಚಂದ್ರನಂತೆ ಮುಖವುಳ್ಳವಳೆ, 'ಆತ್ಮೈವ ಇದಂ ಸರ್ವಂ' ಎಂದೂ ತೋರತಕ್ಕ ನಾಮರೂಪ ವಿಷಯಗಳೆಲ್ಲ ಸಾಕ್ಷಾತ್ ಆತ್ಮವೇ ಇರುವದೆಂದೂ ಉಪನಿಷದ್ ವಾಕ್ಯಗಳು ಹೇಳುವವು. ಆದ್ದರಿಂದ ಈ ಜಗತ್ತಿನಲ್ಲಿ ತೋರುವ ಒಂದೂ ವಿಷಯವು ಆತ್ಮನಿಗೆ (ನಿನಗೆ) ಬೇರೆಯಲ್ಲ, ಎಲ್ಲವೂ ಈಶ್ವರ ಸ್ವರೂಪವೇ ಇರುವದೆಂದು ಯಾವಾಗಲೂ ಅನುಸಂಧಾನ ಮಾಡು. ಆದ್ದರಿಂದ ನೀನು ನಿನ್ನ ದೇಹೇಂದ್ರಿಯ ಪ್ರಾಣ ಮಾನಾದಿಗಳೆಲ್ಲವು ಈಶ್ವರನೇ ಎಂದು ತಿಳಿ. ಈಶನು ಬೇರಾಗಿ, ನೀನು ಬೇರಾಗಿ ಇಲ್ಲ. ಜನವಿದೆಲ್ಲ ಈಶನ ಕಳೆಯೆಂದು ಕಾಣುತ್ತಿರು.

ಸಮತೆಯಿಂದಲಿ ಸರ್ವವಿದನೀಶಮಥ್ಯವೆಂದು।
ಸುಮತಿಯೊಳೊಮ್ಮೆ ಭಾವಿಸು।
ಕಮನೀಯವಪ್ಪಕೈವಲ್ಯವಹುದು ಸತ್ಯ।
ವಮಲೇಂದುವದನೆ ನಂಬಿದನಿಂತು ॥ 5 ॥

ಹುಣ್ಣಿವೆ ಚಂದ್ರನಂತೆ ಮುಖವುಳ್ಳ ಮೈತ್ರೇಯಿ, ತೋರುವ ಮತ್ತುತೋರದಿರುವ ಜಡಾಜಡರೂಪ ಸರ್ವ ಜಗತ್ತನ್ನು ಸರ್ವಾತ್ಮಕಭಾವದಿಂದ ಪರಬ್ರಹ್ಮ ಸ್ವರೂಪವೇ ಎಂದು ಶುದ್ಧ ಬುದ್ಧಿಯಿಂದ ತಿಳಿದುಕೊಳ್ಳಬೇಕು. ಹೀಗೆ ತಿಳಿದುಕೊಳ್ಳುವವರಿಗೆ ಮನೋಹರವಾದ ಮೋಕ್ಷವು ಪ್ರಾಪ್ತವಾಗುವದು. ಇದು ಸತ್ಯವಾದ ಮಾತೆಂದು ನಂಬಿ ಬಿಡು. ನೀನು ನಂಬಿದಂತೆ ನೀನಾಗುವಿ.

– ಇತಿ ಸದ್ಭಕ್ತಿಲಕ್ಷಣ ನಿರೂಪಣೆ –

## 19ನೇ ಸೂತ್ರ

ಆ ತತ್ತ್ವಮಸಿಯೆಂಬ ವಾಕ್ಯಾರ್ಥವನು ನೀ–।
ನೀತೆರದಿಂದರಿವುದು ನೀರೆ ॥

ಆ ತತ್ತ್ವಮಸಿ ಎಂದರೆ 'ಆ ಪರಬ್ರಹ್ಮವೆ ನೀನಿರುವಿ', ಎಂಬ ಮಹಾವಾಕ್ಯದ ಅರ್ಥವನ್ನು ಗುರುಮುಖದಿಂದ ಮುಂದೆ ಹೇಳುವ ರೀತಿಯಲ್ಲಿ, ಪ್ರಾಂಜಲ ಮನದ ಮೈತ್ರೇಯಿಯೆ, ನೀನು ತಿಳಿದುಕೊಳ್ಳಬೇಕು. ಅಂದರೆ ನೀನು ಧನ್ಯಳಾಗುವೆ.

ಪದನಲ್ಲಿಮೂರು ಪರಾತ್ಮರೈಕ್ಯವೆಯದ।
ಕೊದವಿ ದರ್ಥಂಗ ಳಂತವು ಮತ್ತೆ॥
ಸುದತಿರನ್ನಳೆ ವಾಚ್ಯ ಲಕ್ಷ್ಯವೆಂದಿತ್ತರ।
ನಿದರಂದವಿಂತೆಂದು ತಿಳಿ ಪೇಳ್ವೆ॥ 1 ॥
(ಇತ್ತೆರನು, ಇದರ, ಅಂದವ, ಇಂತೆಂದು, ತಿಳಿ, ಪೇಳ್ವೆ)

ಸ್ತ್ರೀಯರಲ್ಲಿ ರತ್ನಪ್ರಾಯಳಾದವಳೆ, ತತ್ತ್ವಮಸಿ ಮಹಾವಾಕ್ಯದಲ್ಲಿ ತತ್, ತ್ವಂ ಅಸಿ ಎಂದು ಮೂರು ಪದಗಳಿರುವವು. ಆ ಪರಬ್ರಹ್ಮವೆ ನೀನಿರುವಿ ಎಂದು ಅವುಗಳ ಅರ್ಥವಿರುವದು. ಅದಕ್ಕೆ ಪುನಃ ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥವೆಂದು ಎರಡು ಪ್ರಕಾರವು. ಇವುಗಳ ಸ್ವರೂಪವು ಇನ್ನು ಮುಂದೆ ಹೇಳುವಂತೆ ಇರುವದು. ಅದನ್ನು ಹೇಳುವೆನು ಕೇಳಿ ತಿಳಿದುಕೊ.

ತನು ಮೊದಲಾಗಿ ತೋರ್ಪನಿತನೆ ತಾನೆಂದು।
ಜನನಾದಿಯುಳ್ಳಹಮ್ಮಿನೊಳೊಂದಿ ॥
ತನಗೆ ತದ್ವಗ್ಗೆ ಪತ್ತಿ ಬಿಡದೆ ವಿಜ್ಞಾನಮ।
ಯನೆ ತ್ವಂ ಪದಕೆ ವಾಚ್ಯವೆನಿಪರ್ಥ ॥ 2 ॥

(ತತ್+ಬಗೆ= ತದ್ವಗ್ಗೆ, ಆ ಬಗೆ, ಭಾವ ಕಲ್ಪನೆ)

ಶರೀರ ಇಂದ್ರಿಯ ಮೊದಲು ಮಾಡಿಕೊಂಡು ಪ್ರತೀತಿಯಾಗುವ ಅನಿತು ಜಡದೃಶ್ಯಗಳೆ ತಾನೆಂದು ತಿಳಿದು, ಜನನ ಮರಣಾದಿ ಸಂಸಾರವುಳ್ಳ ಅಹಂಕಾರದೊಡನೆ ಕೂಡಿಕೊಂಡು, ತಾನು ಅದರ ಧರ್ಮಗಳೊಡನೆ ತಾದಾತ್ಮ್ಯ ಹೊಂದಿರುವ ವಿಜ್ಞಾನಮಯನಾದ ಜೀವನೆ ತ್ವಂ ಪದಕ್ಕೆ (ಟಿ–1) ವಾಚ್ಯಾರ್ಥವೆನಿಸಿಕೊಳ್ಳುವನು.

ಮೊದಲು ಚಿಜ್ಜಡವೆನಿಸಿದ ಜೀವ ಹಂತೆಯ।
ಮುದವಸುಖಾದಿ ತನ್ನೆಡೆಗೆಂದು ॥
ಪದವಿಡದವಿಕಾರಿ ತುರಿಯ ಕೂಟಸ್ಥಾತ್ಮ।
ವದು ತ್ವಂ ಪದಕೆ ಲಕ್ಷ್ಯವಾದರ್ಥ ॥ 3 ॥
(ಚಿತ್+ಜಡ=ಚಿಜ್ಜಡ, ಜಡಾಜಡ, ಹೃದಯಗ್ರಂಥಿ)

ಜಡವಾದ ಅಹಂಕಾರವು ತನಗಧಿಷ್ಠಾನವಾಗಿರುವ ಚೈತನ್ಯರೂಪ (ಅಜಡ) ಪ್ರತ್ಯಗಾತ್ಮನ ಪ್ರತಿಬಿಂಬದಿಂದ ಕೂಡಿರುವದರಿಂದ, ಜಡಾಜಡ ರೂಪವಾಗಿದೆ. ಈ ಅಹಂಕಾರದಲ್ಲಿ ತೋರುವ ಸುಖದುಃಖಾದಿ ವೇದನಗಳು ಅವಿಕಾರಿಯಾದ ತುರಿಯಾತ್ಮನ ಸಮೀಪಕ್ಕೆ ಸುಳಿಯಲರಿಯವು. ಅಂತಹ ತುರಿಯ ಅಚಲಾತ್ಮನೆ ತ್ವಂಪದಕ್ಕೆ ಲಕ್ಷ್ಯಾರ್ಥವಾಗಿರುವನು. (ಟಿ–2)

ಪ್ರಕೃತಿ ಮೇಳನದಿಂದೆ ಸಕಲೇಶನೆನಿಸಿ ಮೋ।
ಹಕಮಿಲ್ಲದಖಿಳ ಕಾರಣಮಾಗಿ ॥
ವಿಕೃತಿ ತನಗೆ ಪೊರ್ದದಾನಂದಮಯನೆ ಭಾ।
ವಕಿ ತತ್ಪದಕೆ ವಾಚ್ಯವಹುದರ್ಥ ॥ 4 ॥

ಸದ್ಭಾವವುಳ್ಳ ಮೈತ್ರೇಯಿ, ಶುದ್ಧ ಚೈತನ್ಯವು ತ್ರಿಗುಣಾತ್ಮಕವಾದ ಪ್ರಕೃತಿಯ ಉಪಾಧಿಯಿಂದ ಸರ್ವವನ್ನು ಆಳುವ ಪ್ರಭುವೆಂದು ಹೇಳಿಸಿಕೊಳ್ಳುವನು. ತಾನು ಮರವೆಯನ್ನು ಹೊಂದದೆ ಸರ್ವಜಗತ್ತಿಗೆ ಕಾರಣನಾಗಿ ಯಾವ ವಿಕಾರವನ್ನು ಹೊಂದದೆ ಈಶನು ಆನಂದಮಯನು. ಇವನೆ ತತ್‌ಪದಕ್ಕೆ ವಾಚ್ಯಾರ್ಥವಾಗಿರುವನು.

1. [ಟಿಪ್ಪಣಿ:– ವಾಚ್ಯಾರ್ಥವೆಂದರೆ ಮೇಲು ಮೇಲಿನ ಶಬ್ದಗಳ ಅರ್ಥ.]
2. [ಟಿಪ್ಪಣಿ:– ಲಕ್ಷ್ಯಾರ್ಥವೆಂದರೆ ವಾಚ್ಯಭಾಗವನ್ನು ಬಿಟ್ಟು ಅದರ ರಹಸ್ಯಾರ್ಥ ಗ್ರಹಿಸುವದು.]

ನಿರುಪಮಾದ್ವಯ ನಿತ್ಯ ನಿರವಧಿ ನಿಸ್ತತ್ತ್ವ।
ನಿರಘ ನಿರ್ಮಲ ನಿರಾಲಂಬನು ॥
ನಿರುಪಾಧಿ ನಿಸ್ಸಂಗ ಪರಿಪೂರ್ಣ ಪರಬೊಮ್ಮ।
ದಿರವೆ ತ್ವದಕೆ ಲಕ್ಷ್ಯಾರ್ಥ ॥ 5 ॥

ಉಪಮಾರಹಿತನು, ಎರಡಿಲ್ಲದ ಒಬ್ಬನೆ ಇರುವವನು, ನಿತ್ಯನು, ನಿಸ್ಸೀಮನು, ಯಾವ ತತ್ತ್ವವೂ ಅಲ್ಲದವನು. ನಿಷ್ಪಾಪನು, ಅವಿದ್ಯಾದಿ ಕ್ಲೇಶರಹಿತನು, ಸರ್ವಸ್ವತಂತ್ರನು, ಉಪಾಧಿಯಿಲ್ಲದವನು, ಸಂಗರಹಿತನು, ಪರಿಪೂರ್ಣನು, ಆಗಿ ಇರುವವನೇ ಪರಬ್ರಹ್ಮನು. ಇಂಥ ಪರಬ್ರಹ್ಮ ಸ್ವರೂಪವೇ ತತ್‌ಪದಕ್ಕೆ ಲಕ್ಷ್ಯಾರ್ಥವಾಗಿರುವದು.

ಆತನೆ ಈತನೆಂಬಂತೆ ವಾಚ್ಯಾಂಶವ।
ನೇತಿಗಳೆದು ಲಕ್ಷ್ಯದ್ವಯದೊಳು ॥
ಚೈತನ್ಯವೇಕವೆಂಬುದೆ ಯಸಿಪದಕೆ ವಿ।
ಖ್ಯಾತಿ ಮೈತ್ರೇಯಿ ವಾಚ್ಯಾರ್ಥವು ॥ 6 ॥

ಹೆಸರುವಾಸಿ ಮೈತ್ರೇಯಿ, ''ಅವನೇ ಇವನು'' ಅಂದರೆ ಆ ದೇಶದಲ್ಲಿ ಹಿಂದೆ ನೋಡಿದ ದೇವದತ್ತನು ಈ ಊರಲ್ಲಿ ಈಗ ಇರುವನು. ದೇಶ ಕಾಲಗಳೂ ಭಿನ್ನ ಆದರೂ ಪುರುಷ ಒಬ್ಬನೇ ಇದ್ದಾನೆ. ಇದೇ ರೀತಿ ಮಹಾವಾಕ್ಯದಲ್ಲಿ ವಾಚ್ಯಭಾಗವನ್ನು ತ್ಯಾಗ ಮಾಡಿ ಎರಡೂ ಲಕ್ಷ್ಯಾರ್ಥಗಳಲ್ಲಿ ಇರುವ ಶುದ್ಧ ಚೈತನ್ಯವು ಒಂದೇ ಇರುವದು, ಎಂಬುದೇ 'ಅಸಿ' ಪದದ ವಾಚ್ಯಾರ್ಥವಾಗಿದೆ. ಈಗ ಅದರ ಲಕ್ಷ್ಯಾರ್ಥ ಹೇಳುವರು.

ಬಳಿಕವಾ ಲಕ್ಷ್ಯಾರ್ಥಗಳ ಭೇದವಪರೋಕ್ಷ।
ಗಳು ಮಾಯಾಪರಿಕಲ್ಪನೆಗಳೆಂದು ॥
ಉಳುಮೆಯಖಂಡೈಕರಸ ಚಿತ್ತೆ ನೀನೆಂದು।
ತಿಳಿವುದಿಂತಸಿಪದ ಲಕ್ಷ್ಯಾರ್ಥ ॥ 7 ॥

ಈಗ ತತ್ ಮತ್ತು ತ್ವಂ ಉಭಯ ಪದಗಳ ಲಕ್ಷ್ಯಾರ್ಥಗಳಲ್ಲಿ ತೋರಿಬರುವ ಕ್ರಮವಾಗಿ ಪರೋಕ್ಷತ್ವ ಹಾಗೂ ಅಪರೋಕ್ಷತ್ವ ಎಂಬ ಭೇದಗಳು ಮಾಯೆಯಿಂದ ಕಲ್ಪಿತವಾಗಿರುತ್ತವೆ. ಆದ್ದರಿಂದ ಈ ಭೇದಗಳನು ಕಳೆದ ನಂತರ ಉಳಿದುದೇ ಅಖಂಡ (ಅದ್ವಯ) ಏಕರಸ ಚಿತ್ ಅಂದರೆ ಜ್ಞಾನ (ಅಥವಾ ಅರಿವು) ಒಂದೇ ಇದೆ. ಅದೇ ನೀನಿರುವಿ, ಎಂದು ಅರಿದು ಅದರಲ್ಲಿ ಬೆರೆತು ಒಂದಾದುದೇ 'ಅಸಿ' ಪದದ ಲಕ್ಷ್ಯಾರ್ಥವು.

(ಸೂಚನೆ :– ಜ್ಞಾನ ಪ್ರತಿಪಾದನ ಸ್ಥಳ 36. ನಿಜಗುಣರು ತತ್ತ್ವಮಸಿ ವಾಕ್ಯದರ್ಥವನ್ನು ಇದೇ ರೀತಿ ತಿಳಿಸಿದ್ದಾರೆ. ಅಲ್ಲಿ 'ಅಸಿ' ಪದಕ್ಕೆ ಲಕ್ಷ್ಯಾರ್ಥವನ್ನು ಹೇಳಿರುವದಿಲ್ಲ.)

ತಿಳಿದಿತು ವಾಕ್ಯದರ್ಥವನದರೊಳು ಬುದ್ಧಿ।
ನೆಲೆಗೊಂಡು ಚಲಿಸದೆ ದೃಢಮಾಗಿ॥
ಬಳಿಕೊಂದು ವಿಮತಿದೋರದೆ ನಿಜಾನಂದವ।
ಚ್ಚಳಿಯದಿಹುದೆ ಮುಕ್ತಿ ಕೃತಕೃತ್ಯೆ ॥ 8 ॥

ಧನ್ಯಳಾದ ಮೈತ್ರೇಯಿ, ಈ ರೀತಿ ಮಹಾವಾಕ್ಯದ ಯತಾರ್ಥವಾದ ತಾತ್ಪರ್ಯವನ್ನು ಮುಮುಕ್ಷು ನಿಶ್ಚಯಿಸಬೇಕು ಮತ್ತು ಅದರಲ್ಲಿ ಬುದ್ಧಿ ಕರಿಗೊಂಡು ಚಲಿಸದೆ ನಿಲ್ಲಬೇಕು. ಆ ಬಳಿಕ ಬೇರೊಂದು ವಿಪರೀತ ಬುದ್ಧಿಯು ಜನಿಸಬಾರದು. ಆಗ ಸ್ವರೂಪಾನಂದವು ಸುಸ್ಪಷ್ಟವಾಗಿ ಅನುಭವಕ್ಕೆ ಬರುವದು. ಇದೇ ಮುಕ್ತಿಯೆಂದು ಹೇಳಿಸಿಕೊಳ್ಳುವದು.

– ಇತಿ ವಾಕ್ಯಾರ್ಥ ನಿರ್ಣಯ ನಿರೂಪಣೆ –

## 20ನೇ ಸೂತ್ರ

### ತತ್ತ್ವಮಸೀತಿ ವಾಕ್ಯದೊಳು ಬೇರೊಂದು ಭೇ–। ದತ್ವವಿಲ್ಲೆಂದು ನಂಬೆಲೆನೀರೆ ॥

ಕೋಮಲ ವೃತ್ತಿಯ ಚಲುವೆ, 'ತತ್ತ್ವಮಸಿ' ಅಂದರೆ ಆ ಪರಬ್ರಹ್ಮವೇ ನೀನಿರುವಿ ಎಂಬ ಮಹಾವಾಕ್ಯವು ಲಕ್ಷ್ಯಾರ್ಥದಿಂದ ಅಭೇದ ಸ್ಥಿತಿಯನ್ನೇ ಪ್ರತಿಪಾದಿಸುತ್ತದೆ. ಒಂದು ವೇಳೆ ಪ್ರತಿವಾದಿಗಳು ಭೇದತ್ವವುಂಟೆಂದು ಪ್ರತಿ ಹೇಳಿದರೆ ಅದನ್ನು ಮುಂದೆ ನಿರಾಕರಿಸುತ್ತಾರೆ.

ಒಂದು ಪೂವಿಗೆ ಸ್ವರ್ಗವೆಂದು ಪೇಳುವ ವಾಕ್ಯ।
ದಂದದಿಂದಾ ಪರಾತ್ಮನು ತಾನೆ॥
ಎಂದು ಬೋಧಿಪುದು ಮುಕ್ತಿಯೊಳತಿಶಯ ರತಿ–।
ಯಂದೋರುವರ್ಥವಾದವೆಯಲ್ಲ॥ 1 ॥

ಭಗವಂತನಿಗೆ ಒಂದು ಹೂವು ಅರ್ಪಿಸಿದರೆ ಸ್ವರ್ಗ ಪ್ರಾಪ್ತವಾಗುದೆಂಬುದು ಪರಮಾತ್ಮನಲ್ಲಿ ಭಕ್ತಿಯುಂಟಾಗಲಿ, ಎಂಬ ಉದ್ದೇಶದಿಂದ ಹೇಳಿದ ಮಾತು. ಇದು ಅರ್ಥವಾದವು. ಆದರೆ ತತ್ತ್ವಮಸಿ ಎಂದು ಉಪದೇಶಿಸುವದು ಅರ್ಥವಾದವಲ್ಲ, ಮರವೆಯಿಂದ 'ದೇಹ ನಾನು, ಪರಮಾತ್ಮ ನಾನಲ್ಲ' ಎಂಬ ಅಪರಾಧವನ್ನು ಮನ್ನಿಸಿ, ನೀನು ಎಂದೆಂದೂ ಪರಮನೇ ಇರುವಿ, ಅರುವಿನ ಒಡಲು ಇರುವ ನೀನು ನಿನ್ನನ್ನು ಮರೆತೆನೆಂಬುದು ಭ್ರಮೆ, ಎಂದು ಇದ್ದುದನ್ನು ಇದ್ದಂತೆ ಹೇಳುವದು ಸಮ್ಯಗ್ ಬೋಧೆಯಾಗಿದೆ.

ಪ್ರತಿಮೆಯಂ ದೇವತಾಕೃತಿಯೆಂಬವ್ಪೋಲ್ತನ್ನ।
ನತಿಶಯಿಪ ಪರಬೊಮ್ಮವೆನುತಿರ್ಪ ॥
ಶ್ರುತಿಯನು ಬುದ್ಧಿ ಶುದ್ಧತೆಗಾ ದುಪಾಸನ।
ರತಿಪರವಲ್ಲವೆಂಬುದೆ ಸತ್ಯ ॥ 2 ॥

ಉಪಾಸಕರಿಗೆ ಪ್ರತಿಮೆ ತೋರಿಸಿ ''ಇದು ದೇವರು'' ಎಂದು ಹೇಳುವ ಮಾತು ಭಕ್ತಿಪರವಾಗಿ ಮತ್ತು ಅವನ ಬುದ್ಧಿಯ ಶುದ್ಧಿಗಾಗಿರುವದು. ಆದರೆ ಜೀವನಿಗೆ ನೀನು ಪರಬ್ರಹ್ಮನಿರುವಿ, ಎಂದು ಬೋಧಿಸುವದು ಉಪಾಸನ ರತಿ ಪರವಲ್ಲ, ಅಥವಾ ಚಿತ್ತಶುದ್ಧಿಗಾಗಿಯಲ್ಲ. ಉದಾ. 'ನಾನು ರಾಧಾಪುತ್ರ' ನೆಂದು ತಿಳಿದ ಕರ್ಣನಿಗೆ ಕೃಷ್ಣನು, 'ನೀನು ಕುಂತೀಪುತ್ರ'ನೆಂದು ಹೇಳಿದಂತೆ, 'ನೀನು ಎಂದೆಂದು ಪರಬ್ರಹ್ಮನಿರುವಿ' ಎಂಬ ಮಹಾವಾಕ್ಯಾರ್ಥವು ಯಥಾರ್ಥವೇ ಇದೆ.

ಮನುಜನನಿಂದ್ರನೆಂದೆನುತೆ ಬಣ್ಣಿಸುವಂತೆ।
ಘನ ಪರಂಜ್ಯೋತಿ ಸ್ವರೂಪನು ॥
ಸನುಮತವಾಗಿ ತಾನೆಂಬ ನಿಗಮವಿದ- ।
ನೆನಲಿಲ್ಲವೈಸೆ ಸನ್ನುತಿಯೆಂದು ॥ 3 ॥

ಕಡು ಬಡವನೊಬ್ಬ ತನಗೆ ಅವಶ್ಯವಿರುವ ಧನ ಪ್ರಾಪ್ತಿಗಾಗಿ ಧನಿಕನನ್ನು ಕುರಿತು, 'ತಾವು ವೈಭವಯುಕ್ತ ದೇವೇಂದ್ರನ ಸಮಾನ ಇರುವಿರಿ'', ಎಂದು ಸ್ತುತಿಸುವನು. ಈ ಉದಾಹರಣೆಯಂತೆ ಮಹಾ ವಾಕ್ಯ ಬೋಧಕರು ಶಿಷ್ಯನಿಗೆ 'ನೀನು ಸ್ವಯಂ ಪ್ರಕಾಶನಾದ ಪರಬ್ರಹ್ಮನಿರುವಿ,' ಎಂದು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಉಪದೇಶಿಸಿದರೆ ಸ್ತುತಿಪರವಾಗುವದು. ಆದರೆ ಶ್ರೀ ಗುರುವಚನೋಪದೇಶವನಾಲಿಸುವ ನರನು ದರಿದ್ರನಲ್ಲ ಮತ್ತು ಉಪದೇಶಿಸುವ ವಿಹಿತ ಗುರು ಸಮಯ ಸಾಧಕನಲ್ಲ, ''ಜೀವೋ ಬ್ರಹ್ಮೈವ ನಾಪರಃ'' ಎಂಬ ನಿಗಮ ವಾಕ್ಯವನ್ನು ಶ್ರೀ ಸದ್ಗುರು ಬೋಧಿಸಿದರೆ, ಅದು ಸ್ತುತಿಪರವಲ್ಲ, ಅದು ಯಥಾರ್ಥ ಬೋಧರೂಪಾಗಿದೆ.

ಆಳನೊಲಿದರಸೆಂದು ಬೋಳೈಸುವಂತೆ ವೇ।
ದಾಳಿ ನಿರ್ಗುಣ ಚಿತ್ತಿನೊಳು ತನ್ನ॥
ಮೇಳವೆಂಬುದನು ಕಾಲೋಚಿತ ವಿಡಿದೊಮ್ಮೆ।
ಪೇಳಲಿ ಲೌಪಚಾರಿಕಮಾಗಿ ॥ 4 ॥

(ಆಳನು ಒಲಿದು ಅರಸು, ಎಂದು) ಒಬ್ಬ ಯಜಮಾನನು ತನ್ನ ಆಳಿನ ಕೆಲಸ ಮೆಚ್ಚಿ, ಅವನ ಬೆನ್ನು ತಟ್ಟಿ, ''ನೀನು ನಿಜಕ್ಕೂ ಅರಸನು'' ಎಂದು ಸಮಯಕ್ಕನುಸರಿಸಿ, ಔಪಚಾರಿಕವಾಗಿ ಹೇಳಿದಂತೆ (ಬೋಳೈಸುವಂತೆ) ಶ್ರುತಿಯು 'ನೀನೆ ನಿರ್ಗುಣ, ನಿರುಪಮ ಚಿತ್ (ಅರಿವು) ಸ್ವರೂಪನಿರುವಿ' ಎಂದು ಹೇಳಿರುವದು ಔಪಚಾರಿಕ್ಕಾಗಿ ಅಲ್ಲ,

ಜೀವನಿಂದ ಏನಾನೊಂದು ಕಾರ್ಯಸಿದ್ಧಿಗಾಗಿ ವೇದವು ಹೀಗೆ ಹೇಳಿಲ್ಲ, ಹೇಳಿದುದು ಯಥಾರ್ಥವೇ ಇದೆ. ಶ್ರುತಿ ಗುರುಗಳ ಬೋಧೆ ಔಪಚಾರಿಕವಲ್ಲ.

ಅನಲನೀ ಮಾಣವಕನುಯೆಂಬ ನುಡಿಯಂತೆ।
ತನಗೆ ತತ್ವದ ಯೋಗವನು ಪೇಳ್ವ॥
ವನಿತೆ ವೇದಾಂತವಿದನು ಗುಣ ಸಾದೃಶ್ಯ।
ವೆನಲಿಲ್ಲವೆಂಬುದೆ ಪರಮಾರ್ಥ ॥ 5 ॥

ಬ್ರಹ್ಮಚಾರಿಯು (ಮಾಣವಕ) ತೇಜಸ್ವಿಯಾಗಿರುವದನ್ನು ಕಂಡು ಇವನು ಅಗ್ನಿ (ಅನಲ) ಸಮಾನನಿರುವನೆಂದು ದೃಷ್ಟಾಂತ ಕೊಡಬಹುದು. ಆದರೆ ಬ್ರಹ್ಮಚಾರಿಯು ಅಗ್ನಿಯಲ್ಲ, ಜೀವನು ಮತ್ತು ಬ್ರಹ್ಮನು ಇಬ್ಬರು ಚೇತನರಾಗಿರುವದರಿಂದ ಸಮಾನರಾಗಿರುವರು. ಆದ್ದರಿಂದ ಮಹಾವಾಕ್ಯವು ಜೀವನೇ ಬ್ರಹ್ಮನೆಂದು ಹೇಳಿದರೆ ಜ್ಞಾನ ಅಥವಾ ಚೇತನವು ಗುಣವಲ್ಲದ್ದರಿಂದ, ವೇದಾಂತವು ಗುಣಸಾದೃಶ್ಯದಿಂದ ಜೀವಬ್ರಹ್ಮರು ಒಂದೆಂದು ಹೇಳಿಲ್ಲ, ಜೀವನು ಬ್ರಹ್ಮನೇ ಇರುವನೆಂದು ಹೇಳುವದು ಯಥಾರ್ಥವದೆ. ಇದೇ ಪರಮಾರ್ಥ.

ಕೊಡನಿಗಾ ಮೃತ್ತಿಕೆಯೊಡನೇಕವಹುದೆಂಬ।
ನುಡಿಯಂತೆ ತನಗೆ ಪರಮನೊಳು ॥
ಬಿಡದೊಂದುತನ ವೆಂಬುದಿದು ಕಾರ‍್ಯಕಾರಣ।
ವಿಡಿದುದಲ್ಲವೆಂದು ಕಾಣಲುಬೇಕು ॥ 6 ॥

ಕಾರಣವಾದ ಮಣ್ಣಿಗೂ ಕಾರ್ಯವಾದ ಕೊಡಕ್ಕೂ ಅಭೇದವುಂಟು. ಇದರಂತೆ ಕಾರಣವು ಪರಮಾತ್ಮನು, ಕಾರ್ಯವು ಜೀವನು, ಹೀಗೆ ಜೀವೇಶ್ವರರ ಏಕತ್ವವನ್ನು ಈ ಮಹಾವಾಕ್ಯವು ಹೇಳಿಲ್ಲ, ಪರಮಾತ್ಮನೇ ಜೀವರೂಪದಿಂದ ಈ ದೇಹದಲ್ಲಿ ಇರುವನು, ಎಂದು ಮಹಾವಾಕ್ಯವು ಹೇಳಿದೆ. ಆದ್ದರಿಂದ ಕಾರ್ಯಕಾರಣ ಕಲ್ಪನೆಯು ಅದ್ವೈತದಲ್ಲಿ ಯೋಗ್ಯವಾಗಿರುವದಿಲ್ಲ, ಆದ್ದರಿಂದ ಜೀವ ಪರಮಾತ್ಮರು ಒಂದಲ್ಲದೆ ಎರಡಲ್ಲವೆಂಬ ತಾತ್ಪರ್ಯ.

ಹವಣಿಸಿ ನೀಲೋತ್ಪಲವಿದೆಂಬ ವಚನದಂ।
ತವಿರಳ ಸೌಖ್ಯವಾರಿಧಿಯನು ॥
ತವೆ ತನ್ನ ನಿಜವೆಂಬುದಿದು ತಾನು ಗುಣಗುಣಿ।
ತ್ವವನುಂಟು ಮಾಡದೆಂದರಿವುದು ॥ 7 ॥

ನೀಲೋತ್ಪಲದಲ್ಲಿನೀಲವೆಂಬುದು ಗುಣವು ಉತ್ಪಲ ಅಂದರೆ ಕಮಲವು ಗುಣಿ. ಈ ಉಪಮಾನದಲ್ಲಿಗುಣಿಯು ಗುಣವನ್ನು ಕೂಡಿಕೊಂಡು ಕೆಲಕಾಲ ಒಂದಾಗಿರುವದು. ಸಚ್ಚಿದಾನಂದ ಪೂರ್ಣ ಬ್ರಹ್ಮವೇ ನೀನು ಎಂದು ಏಕತ್ವ ಬೋಧಿಸುವ ವಾಕ್ಯವು ಗುಣ

ಗುಣಿತ್ವವನ್ನು ಉಂಟುಮಾಡದು ಯಾಕೆಂದರೆ ಗುಣವು ಆಗಂತುಕ ಲಕ್ಷಣದಿಂದ ಕೂಡಿದೆ. ಆದರೆ ನಿರ್ಗುಣವಾದ ಪೂರ್ಣತ್ವ ಮತ್ತು ಆನಂದ ಲಕ್ಷಣಗಳು ಯಾವಾಗಲೂ ಇರತಕ್ಕವೆ ಹೊರತು ಮಧ್ಯದಲ್ಲಿ ಬಂದವುಗಳಲ್ಲ. ಆದ್ದರಿಂದ ಇಲ್ಲಿ ಮಹಾವಕ್ಯಾವು ಗುಣ ಮತ್ತು ಗುಣಿಯೆಂಬ ಭೇದ ಅಥವಾ ವಿಶೇಷಣ (ವಿಶಿಷ್ಟತ್ವ ಭೇದವನ್ನು) ಹೇಳದೆ, ಅಭೇದವೆ ತಾತ್ಪರ್ಯವಾಗಿರುವದನ್ನು ಪ್ರತಿಪಾದಿಸಿದೆ.

ಇದು ತಾನೆ ಗೋಪಿಂಡವೆನಿಪಂದದೊಳು ನಿತ್ಯ।
ಸದಮಳಾನಂದ ಚಿತ್ವದವನು॥
ಒದವಿ ತಾನೆಂದೊರೆವುದು ಜಾತಿ ವ್ಯಕ್ತಿದೋ।
ರ್ಪುದನಾಗಿ ತಿಳಿಯಲಂತದು ಮಿಥ್ಯೆ ॥ 8 ॥

ಇದು ಗೋಪಿಂಡ ಎಂದು ಹೇಳಿದಾಗ ಅದರಲ್ಲಿ ವಿಶಿಷ್ಟವಾದ ಜಾತಿಯ ಆಕಳ ದೇಹರೂಪ ವ್ಯಕ್ತಿಯು ಪ್ರತೀತಿಯಾಗುವದು. ಅಂದರೆ ಅನೇಕ ಗೋವುಗಳ ದೇಹವೆಂಬ ವ್ಯಕ್ತಿಗಳಲ್ಲಿ ಗೋತ್ವಜಾತಿಯು ವ್ಯಾಪಕವಾಗಿರುವಂತೆ, ಈ ಕಾಣುವ ಅನೇಕ ಆತ್ಮರುಗಳಲ್ಲಿ ಸಚ್ಚಿದಾನಂದವೆಂಬ ಪರವಸ್ತು ವ್ಯಾಪಕವಾಗಿದ್ದು ಅನೇಕ ಆತ್ಮರು ವ್ಯಕ್ತಿಗಳಾಗಿರುವದಾಗಿಯೂ ಅವರಲ್ಲಿ ಚಿದ್ವಸ್ತು ಜಾತಿರೂಪವಾಗಿಯೂ ತೋರುವಂತೆ ನೀನು ಸಚ್ಚಿದಾನಂದ ಪರಮನೆಂದು ಹೇಳಿಲ್ಲ. ದೃಷ್ಟಾಂತದಲ್ಲಿ ದೇಹರೂಪ ವ್ಯಕ್ತಿಗಳು ಬೇರೆ, ಜಾತಿ ಒಂದೆ ಇರುವಂತೆ, ಜೀವಾತ್ಮರು ಬೇರೆ ಬೇರಲ್ಲ. ಆತ್ಮನು ಪೂರ್ಣವಿದ್ದುದರಿಂದ ಈ ಜಾತಿ ವ್ಯಕ್ತಿರೂಪ ಕಲ್ಪನೆಯು ಮಿಥ್ಯೆಯಾಗಿದೆ 'ಏಕಮೇವಾದ್ವಿತೀಯಂ ಆತ್ಮ' ಎಂಬುದಾಗಿ ಅದ್ವಯ ಅಖಂಡ ಸಚ್ಚಿದಾನಂದ ವಸ್ತುವಿನಲ್ಲಿ ಜಾತಿವ್ಯಕ್ತಿತ್ವ ಬೇಧವು ಪುಸಿದೋರಿಕೆ ಅಥವಾ ಮಿಥ್ಯೆ, ಎಂದು ತಿಳಿ.

ಕ್ಷೀರ ದಧಿಗೆ ಕಣವಾರಿಗೇಕತ್ವವೆಂ।
ದಾರ್ಯೆವ ಚಂದದಿಂದವೆ ತನ್ನ॥
ಸಾರಬೋಧದ ಸಮರಸವೆಂಬುದಿಲ್ಲ।
ವಿಕಾರದಿಂದಂಶದಿಂದುಸರದು ॥ 9 ॥

ಹಾಲು ಮೊಸರು ಒಂದೆನ್ನುವಂತೆ ಅಥವಾ ಜಲನಿಧಿಗೆ (ಸಾಗರ) ಮತ್ತು ಜಲಬಿಂದುವಿಗೆ ಏಕತ್ವ ಹೇಳುವಂತೆ, ತಾನು (ಜೀವನು) ಮತ್ತು ಪರಮಾತ್ಮನು ಇಬ್ಬರಲ್ಲಿ ಸಮರಸವಿದೆ, ಎಂದು ಹೇಳಬಾರದು. ಯಾಕೆಂದರೆ 1ನೇ ದೃಷ್ಟಾಂತದಲ್ಲಿ ಹಾಲು ವಿಕರಿಸಿ ಮೊಸರು ಆಗುವದು, ಮತ್ತು 2ನೇ ದೃಷ್ಟಾಂತದಲ್ಲಿ ನೀರಿಗೆ, ನೀರಿನ ಹನಿಗೆ ಏಕತ್ವ ಹೇಳಿದರೂ ಅಂಶ–ಅಂಶಿಭಾವ ಭೇದ ಇದೆ. ಆದರೆ ಜೀವ ಬ್ರಹ್ಮರ ಏಕತ್ವ ಪ್ರತಿಪಾದಿಸುವ ಮಹಾವಾಕ್ಯ ಬೋಧನೆಯು ಜೀವರಲ್ಲಿ ಕಲ್ಪಿತವಾದ ಯಾವ ವಿಕಾರಕ್ಕೆ ಅಥವಾ ಅಂಶ– ಅಂಶೀ ಭೇದಕ್ಕೆ ಕಿಂಚಿತ್ತು ಅಸ್ತಿತ್ವಕೊಡುವದಿಲ್ಲ. ಅರ್ಥಾತ್ ಶಿವಜೀವರ

ಸಮರಸವು ಸಹಜವಿದೆ. ಯಥಾರ್ಥವಿದೆ. ಈರ್ವರ ಸ್ವರೂಪವು ಎಂದಿನಂತೆ ನಿರ್ವಿಕಾರವು ಮತ್ತು ಪರಿಪೂರ್ಣವು ಇರುವದೆಂಬ ತಾತ್ಪರ್ಯ.

ಬಿಂಬದಿಂದಾ ಪಡಿಬಿಂಬವನ್ಯವೆಯಾಗ।
ದೆಂಬಂತೆ ಪರವಸ್ತುವನು ತಾನೆ॥
ಎಂಬುಪನಿಷದುಕ್ತಿಯನು ವಿಚಾರಿಸಿ ನೋಡೆ।
ಬಿಂಬ ಪ್ರತಿಬಿಂಬವಾದವೆಯಲ್ಲ॥ 10 ॥

ಪ್ರತಿಬಿಂಬವು ಬಿಂಬದಿಂದ ಬೇರೆಯಿರದು. ಇದರಂತೆ ಪರಮಾತ್ಮನು ಬಿಂಬ, ಜೀವಾತ್ಮನು ಪ್ರತಿಬಿಂಬರೂಪನು. ಆದ್ದರಿಂದ ಈರ್ವರಿಗೆ ಏಕತ್ವ ಹೇಳುವದು ಸರಿಯಲ್ಲ. ಯಾಕೆಂದರೆ ಪ್ರತಿಬಿಂಬವು ಬಿಂಬಕ್ಕೆ ವಿರುದ್ಧ ದಿಕ್ಕಿನಲ್ಲಿಯೂ ಸಮ್ಮುಖವಾಗಿಯೂ ತೋರುವದು. ಆದ್ದರಿಂದ ತಾನೆ ಪರಮಾತ್ಮನಿರುವನು, ಎಂದು ಬೋಧಿಸುವ ಉಪನಿಷತ್ ವಾಕ್ಯವು ಬಿಂಬ ಪ್ರತಿಬಿಂಬವಾದವಲ್ಲ. ಆದರೆ ಈ ಉದಾಹರಣೆಯನ್ನು ಮಂದಾಧಿಕಾರಿಯ ಜಡ ಬುದ್ಧಿಯಲ್ಲಿ ಏಕತ್ವ ಬುದ್ಧಿಯು ಉಂಟಾಗಲಿ, ಎಂಬ ಉದ್ದೇಶದಿಂದ ಹೇಳಿದ್ದಾಗಿದೆ.

ನಾನಾ ವಿಕಲ್ಪವಿನ್ನೇನು ಜೀವೇನಾತ್ಮ।
ನಾನು ಪ್ರವಿಶ್ಯಮೆಂದೆನೆ ಶ್ರುತಿ ॥
ಸಾನುರಾಗದೆ ಶಂಭುಲಿಂಗವೀ ತನುವಿನೊ।
ಳಾನೆಂದೆನಿಸಿಕೊಳುತಿಹುದಾಗಿ ॥ 11 ॥

ಪರಮಾತ್ಮನು ಜೀವರೂಪದಿಂದ ಬ್ರಹ್ಮಚಕ್ರದೊಳಗೆ ಪ್ರವೇಶ ಮಾಡಿರುವನೆಂದು ಶ್ರುತಿ ಪ್ರಮಾಣ ವಿರುವದರಿಂದ ಇನ್ನು ಮೇಲೆ ಬೇರೆ ಬೇರೆ ವಿಪರೀತ ಕಲ್ಪನೆ ಮಾಡುವದರಲ್ಲಿ ಯಾವ ಪರಮಾರ್ಥವೂ ಇರುವದಿಲ್ಲ. ಯಾಕೆಂದರೆ ಸಾಕ್ಷಾತ್ ಪರಮಾತ್ಮನೆ ಈ ಶರೀರದಲ್ಲಿ "ನಾನು ನಾನು ಎಂದು ಎನಿಸಿಕೊಳ್ಳುವನು. ಆದ್ದರಿಂದ ನಾನೇ ಪರಮಾತ್ಮನಿರುವೆನು. ಇದರಲ್ಲಿ ಯಾವ ವಿಕಲ್ಪವೂ ಸಲ್ಲದು.

[ ಟಿಪ್ಪಣಿ :- ಪ್ರತಿಪತ್ತಿ ಎಂದರೆ ಪರಸ್ಪರ ವಿರುದ್ಧಾರ್ಥ ಪ್ರತಿಪಾದಕ ವಚನಗಳು ಇವು ವಾಕ್ಯಾರ್ಥ ಬೋಧನೆಯಲ್ಲಸಂಶಯ ಹುಟ್ಟಿಸುವದರಿಂದ ಇಲ್ಲಿ ಪ್ರತಿಪತ್ತಿಯನ್ನು ನಿರಾಕರಿಸಲಾಗಿದೆ. ]

– ಇತಿ ವಾಕ್ಯಾರ್ಥ ಪ್ರತಿಪತ್ತಿ ನಿರಾಕರಣ ನಿರೂಪಣೆ –

## 21ನೇ ಸೂತ್ರ

ವರವಮುನಿಪತಿ ನಿನ್ನಕರುಣದಿಂದನುಪವು ।
ಹರುಷವಾದುದು ನೋಡಲೆನಗಿಂದು ॥

ಮುನೀಶ್ವರರಲ್ಲಿ ಅಧಿಪತಿಯೆ, ಇಲ್ಲಿಯವರೆಗೆ ನೀವು ಕರುಣಾಕಟಾಕ್ಷದಿಂದ ನನಗೆ ಉಪದೇಶ ಮಾಡಿದ ತತ್ತ್ವಜ್ಞಾನವನ್ನು ತಿಳಿದುಕೊಂಡು ನನ್ನ ಅಜ್ಞಾನವೆಲ್ಲ ನಾಶವಾಯಿತು. ನಿರುಪಮವಾದ ಸಹಜಾನಂದವು ಇಂದು ಎನಗಾದುದು (ಎಂದು ಮೈತ್ರೇಯಿ ನುಡಿದಳು)

ಇಂತು ಮೈತ್ರೇಯಿಗೆ ನಿಜ ತತ್ತ್ವದಿರವನೋ।
ರಂತೆ ಬೋಧಿಸಿ ನಿತ್ಯಸುಖದೊಳು॥
ಸಂತತವಗಲದಿರ್ಪ್ಪಂತಿರಿಸಿದ ನೊಲ।
ವಿಂ ತಾನೆ ದಯದೊಳು ಮುನಿಪನು ॥ 1 ॥

ಮುನೀಶ್ವರರಾದ ಯಾಜ್ಞ್ಯವಲ್ಕ್ಯರು ತಮ್ಮ ಪತ್ನಿ ಮೈತ್ರೇಯಿಯನ್ನು ಕುರಿತು ದಯಾರ್ದ್ರಹೃದಯದಿಂದ, ಅವಳು ತಿಳಿಯಬೇಕಾದ ತತ್ತ್ವಾರ್ಥಗಳೆಲ್ಲವನ್ನು ಚನ್ನಾಗಿ ಬೋಧಿಸಿದರು. ಅವಳು ಯಾವಾಗಲೂ ನಿತ್ಯ ಸುಖದಲ್ಲಿ ನೆಲೆಯಾಗಿ ನಿಲ್ಲುವಂತೆ ಪ್ರೀತಿಯಿಂದ ಕೃಪೆಗೈದರು.

ಪಲವು ಶ್ರುತಿಗಳಿಂದೆ ಪಲವನುಭವದಿಂದೆ।
ಪಲವು ದೃಷ್ಟಾಂತ ಯುಕ್ತಿಗಳಿಂದೆ॥
ನಲಿದು ಬೋಧಿಸಿದನಾ ಮುನಿ ನಿಜಸತಿ ತನ್ನ।
ನಿಲವದ್ವಯಾತ್ಮನೆಂದರಿವಂತೆ ॥ 2 ॥

ತನ್ನ ಸ್ವರೂಪವು ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಸಂಗರೂಪವೆಂದು (ನಿಜ ಸತಿಯು) ತಿಳಿದು ಅನುಭವಿಸುವಂತೆ ಮುನೀಶ್ವರರಾದ ಯಾಜ್ಞವಲ್ಕ್ಯರು ತನ್ನ ಪ್ರಿಯ ಪತ್ನಿ ಮೈತ್ರಾದೇವಿಯನ್ನು ಕುರಿತು ಸಂತೋಷದಿಂದ ಅನೇಕ ಶ್ರುತಿ ಪ್ರಮಾಣಗಳಿಂದ ಅನೇಕ ದೃಷ್ಟಾಂತ ಯುಕ್ತಿಮತ್ತುತಮ್ಮ ಸ್ವಾನುಭವದಿಂದ ಬೋಧಿಸಿದರು.

ತಿಳಿದು ತತ್ತ್ವಾರ್ಥವೆಲ್ಲವನು ಮೈತ್ರೇಯಿ ನಿ।
ರ್ಮಳ ನಿಜಪತಿಗೆ ಸಂತಸದಿಂದ॥
ಸಲೆ ನಿತ್ಯ ಸುಖದೊಳು ನೆಲಸಿ ತಾನಿರ್ಪುದ।
ನೊಲಿದು ಬಿನ್ನೈಸಿದಳನುವಾಗಿ ॥ 3 ॥

ಎಲ್ಲತತ್ತ್ವಾರ್ಥಗಳನ್ನು ತನ್ನ ಪತಿ ಯಾಜ್ಞವಲ್ಕ್ಯರಿಂದ ಸಂತಸದಿಂದ ಮೈತ್ರೇಯಿ (ತನ್ನ ಅನುಭವಕ್ಕೆ ಬರುವಂತೆ) ಶ್ರವಣಮಾಡಿದಳು. ಅದರಿಂದ ನಿತ್ಯ ಸುಖರೂಪ ಆತ್ಮಸ್ವರೂಪದಲ್ಲಿ ಚನ್ನಾಗಿ ತಾನು ನೆಲೆನಿಂತುದನ್ನು ಸಂತೋಷವುಕ್ಕುತ್ತಿರಲು ಪತಿದೇವನಿಗೆ ಒಲಿದು ವಿಜ್ಞಾಪಿಸಿದಳು. (ಮುಂದೆ ಹೇಳುವಂತೆ).

ಯತಿಪ ಸದ್ವಿದ್ಯಾಧಿಪತಿ ಕೇಳು ನೀನೆನ್ನ।
ನತಿಶಯಿಸಿ ದಯದಿಂದೆ ತಿಳುಪಲ್ಕೆ।
ಕೃತಕೃತ್ಯಳಾದೆ ನಾನಮಳ ಚಿತ್ಸುಖದಲ್ಲಿ।
ಮತಿ ನಿಂದುದೆನಗೆ ನಿಶ್ಚಲಮಾಗಿ ॥ 4 ॥

ಯತಿಶ್ರೇಷ್ಠನೆ, ಕೇಳು, ನೀನು ಬ್ರಹ್ಮವಿದ್ಯೆಗೆ ಅಧಿಪತಿಯಾಗಿರುವೆ. ಅಂತಹ ನೀನು ಅತ್ಯಂತ ದಯೆಯಿಂದ ಅತ್ಯಧಿಕವಾದ ಕರುಣೆವುಕ್ಕುತ್ತಿರಲು ನನಗೆ ಬ್ರಹ್ಮವಿದ್ಯೆಯನ್ನು ಮನಂಬುಗುವ ಹಾಗೆ ಬೋಧಿಸಿದಿರಿ. ಅದನ್ನು ತಿಳಿದು ಧನ್ಯಳಾದೆನು. ನನ್ನ ಸದ್ಬುದ್ಧಿಯು ನಿರ್ಮಳವಾದ ಚಿದಾನಂದದಲ್ಲಿ ದೃಢವಾಗಿ ನೆಲೆನಿಂತಿತು. ಆದ್ದರಿಂದ ನಾನು ಕೃತಕೃತ್ಯಳಾದೆನು. (ಎಂದು ತನ್ನ ಆನಂದಾತಿಶವನ್ನು ವ್ಯಕ್ತಮಾಡಿದಳು.)

ಮುನಿಪತಿ ನಿನ್ನ ದಯಾದಲೋಕನದಿಂದೆ।
ಜನನಾದಿ ಬಾಧೆಯನುಳಿದಾನು ॥
ಅನುಪಮಾನಂದ ಚಿದ್ಘನ ಪೂರ್ಣಪದವಾದೆ।
ನಿನಿತು ಸಂದೇಹವಿಲ್ಲದುದರಿಂದ ॥ 5 ॥

ಹೇ ಮುನಿಶ್ರೇಷ್ಠನೆ, ನೀನು ಕೃಪಾಪೂರ್ಣ ದೃಷ್ಟಿಯನ್ನು ನನ್ನ ಮೇಲೆ ಬೀರಿದುದರಿಂದ ನಾನು ಜನನ ಮರಣಾದಿ ಸಕಲ ಸಂಸಾರ ದುಃಖವನ್ನು ನೀಗಿದೆನು. ಈಗ ಸ್ವಲ್ಪವೂ ಸಂಶಯವಿಲ್ಲದಂತೆ ನಾನು ನಿರುಪಮವಾದ ಚಿದಾನಂದ ಘನಪೂರ್ಣ ಪದದಲ್ಲಿ ನೆಲೆನಿಂತಿದ್ದೇನೆ. ಇದರಲ್ಲಿ ಯಾವ ಸಂಶವು ಉಳಿದಿಲ್ಲ.

ಮತಿಗೆ ಗೋಚರಮಾಗೆ ನುತಿಗೆ ಗೋಚರವೈಸೆ।
ಮತಿಗೆ ಗೋಚರವಲ್ಲವದು ನಿನ್ನ॥
ಅತಿಶಯವೆನಿಸುವ ಮಹಿಮೆಯದನು ಬೇರೆ।
ನುತಿಸಲೆನ್ನಳವೆ ಸನ್ಮುನಿಮುಖ್ಯ ॥ 6 ॥

ಬುದ್ಧಿಗೆ ತಿಳಿದರೆ ಮಾತ್ರ ಸ್ತೋತ್ರಕ್ಕೆ ವಿಷಯವಾಗುವ ನಿನ್ನ ಮಹಿಮೆಯು ಅತ್ಯಧಿಕವಾದುದು. ನನ್ನ ಬುದ್ಧಿಗೆ ಗೋಚರವಾಗದು. ಬುದ್ಧಿಗೆ ತಿಳಿದದ್ದನ್ನು ಮಾತ್ರವಾಣಿಯು ವರ್ಣಿಸಿ ಸ್ತುತಿಸಬಲ್ಲದು. ನಿನ್ನ ಮಹಿಮೆಯು ಮನೋವಾಣಿಗೆ ನಿಲುಕದು. ಹೇ ಮುನಿಶ್ರೇಷ್ಠನೆ, ನಾನು ಅದನ್ನು ನುತಿ ಮಾಡಲು ಸಾಧ್ಯವೆ ? (ಸಾಧ್ಯವಿಲ್ಲವೆಂಬ ಭಾವ.)

ಎಂದು ಮೈತ್ರೇಯಿ ನಿಸ್ಸಂದೇಹ ಸದ್ಭಕ್ತಿ।
ಯಿಂದೆ ಸಾಷ್ಟಾಂಗ ಪೂರ್ವಕಮಾಗಿ॥
ವಂದಿಸಿ ನಿಜಪತಿ ಮುನಿ ಯಾಜ್ಞವಲ್ಕ್ಯಯ।
ನಂದೊಲವಿಂದೆ ಕೀರ್ತಿಸಿದಳು ॥ 7 ॥

ಈ ಪ್ರಕಾರವಾಗಿ ಮೈತ್ರಾದೇವಿಯು ನಿಷ್ಕಳಂಕ ಭಕ್ತಿಯಿಂದ ಸಾಷ್ಟಾಂಗ ಪೂರ್ವಕವಾಗಿ ತನ್ನ ಪತಿದೇವನಾದ ಯಾಜ್ಞವಲ್ಕ್ಯ ಮುನೀಶ್ವರನಿಗೆ ನಮಸ್ಕಾರ

ಮಾಡಿದಳು ಮತ್ತು (ಆ ಆನಂದ ಪ್ರಸಂಗದಲ್ಲಿ) ಅವನನ್ನು ಗೌರವಾದರಗಳಿಂದ ಸ್ತುತಿ ಮಾಡಿದಳು.

ಅತಿಶಯಮೆನೆ ರೂಪವತಿ ಗುರುಭಕ್ತಿ ನಿ।
ಯತ ನಿಜಶಾಂತಿ ವಿರತಿಯುಕ್ತೆ॥
ನುತಗುಣಚರಿತೆ ಸನ್ಮತಿವಂತೆ ಮೈತ್ರೇಯಿ।
ಪತಿಗೂಡಿ ಸುಖದೊಳೊಂದಿರ್ದಳು ॥ 8 ॥

ಮೈತ್ರಾದೇವಿಯು ಬಾಹ್ಯಸೌಂದರ್ಯವಲ್ಲದೆ, ಅಂತಸ್ಸೌಂದರ್ಯವಾದ ಆತ್ಮವಿದ್ಯೆಯುಳ್ಳವಳೂ, ನಿಸ್ಸೀಮ ಗುರುಭಕ್ತಿಯುಳ್ಳವಳೂ, ಸ್ವರೂಪದ ಪರಮಶಾಂತಿಯನ್ನು ನಿತ್ಯ ಅನುಭವಿಸುವವಳೂ. ಪರಮವೈರಾಗ್ಯವುಳ್ಳವಳೂ, ಸ್ತುತ್ಯವಾದ ಸದ್ಗುಣ ಚರಿತೆಯುಳ್ಳವಳೂ, ಸದ್ರೂಪಾತ್ಮನಲ್ಲಿ ಮತಿಕರಿಗೊಂಡು ನಿಂತವಳೂ ಆಗಿದ್ದಳು. ಈ ಎಲ್ಲ ಐಶ್ವರ್ಯಯುಕ್ತಳಾದ ಮೈತ್ರೇಯಿಯು ಆತ್ಮಜ್ಞಾನಿಯಾದ ಪತಿ ಯಾಜ್ಞವಲ್ಕ್ಯರೊಡನೆ ನಿತ್ಯ ಸುಖದಲ್ಲಿರುತ್ತಿದ್ದಳು.

– ಇತಿ ಮೈತ್ರೇಯಿಯ ವಿಜ್ಞಾಪನ ನಿರೂಪಣೆ –

## 22ನೇ ಸೂತ್ರ

ಸಕಲ ಮಂಗಲವಕ್ಕು ಸಕಲಜನಂಗಳಿ-।
ಗಕಲಂಕ ಶಂಭು ಸತ್ಕೃಪೆಯಿಂದ ॥

ನಿಷ್ಕಲಂಕವಾದ ಶ್ರೀ ಶಂಭುಲಿಂಗ ಪರಬ್ರಹ್ಮನ ಸತ್ಯಶುದ್ಧವಾದ ಕೃಪೆಯಿಂದ ಎಲ್ಲ ಜನರಿಗೂ ಸಕಲ ಮಂಗಲ (ಅಂದರೆ ಪುರುಷಾರ್ಥಸಿದ್ಧಿಯಾಗಿ) ಸುಖಪ್ರಾಪ್ತವಾಗಲಿ!

ಶ್ರೀ ಕೃಪಾಕರನೆನಿಸುವ ನಿಜಗುಣ ಯೋಗಿ।
ಲೋಕಹಿತಾರ್ಥವೆನಲು ಪೇಳ್ದ॥
ಈ ಕೃತಿ ಪರಮಾನುಭವ ಬೋಧೆಯಹುದಾಗಿ।
ಸ್ವೀಕರಿಸದರುಂಟೆ ಜಗದೊಳು ॥ 1 ॥

ಅಷ್ಟೈಶ್ವರ್ಯಯುಕ್ತ ಕೃಪೆಯನ್ನುಂಟು ಮಾಡುವಂತಹ ಶ್ರೀ ನಿಜಗುಣ ಶಿವಯೋಗೀಶ್ವರನು ಲೋಕಕಲ್ಯಾಣಕ್ಕೋಸ್ಕರ ರಚಿಸಿದ ಈ ಗ್ರಂಥವು ಪರಮಾತ್ಮನ ಅನುಭವವನ್ನು ಉಪದೇಶಿಸುವದು. ಸಮಸ್ತ ಜಗತ್ತಿನ ಜನರಲ್ಲಿ ಯಾರಾದರೂ ಇದನ್ನು ಸ್ವೀಕರಿಸದೆ ಇರುವರೇ ? ಇಲ್ಲ. ಆದ್ದರಿಂದ ಇದು ಸರ್ವಜನ ಸೇವ್ಯ ಎಂಬ ಭಾವ.

ಇದು ವೇದವೇದಾಂತದೊಳು ಗೌಪ್ಯವಾದರ್ಥ।
ವಿದು ಪುರಾಣ ಸ್ಮೃತಿಗಳ ಸಾರ॥
ಇದು ಪರಮಾರ್ಥದ ತಿರುಳು ತತ್ತ್ವರಹಸ್ಯ।
ವಿದು ಪ್ರಾಕೃತವೆಯಲ್ಲ ತಿಳಿಯಲ್ಕೆ ॥ 2 ॥

ಈ ಶ್ರೇಷ್ಠ ಗ್ರಂಥವು ವೇದ ಉಪನಿಷತ್ತುಗಳಲ್ಲಿರುವ ಗುಪ್ತವಾದ ಆತ್ಮ ವಿದ್ಯೆಯಾಗಿದೆ. ಇದು ಎಲ್ಲ ಪುರಾಣ ಸ್ಮೃತಿಗಳ ಸಾರವಿರುವದು. ಪುರುಷಾರ್ಥವಾದ ಮೋಕ್ಷದ ತಿರುಳಿರುವದು. ಅಲ್ಲದೆ ಪರಮಾತ್ಮ ತತ್ತ್ವದ ಗೂಢಾರ್ಥವಾಗಿದೆ. ಇದು ಪ್ರಮಾಣ ಗ್ರಂಥವಾಗಿದ್ದು ಸುಲಭವಾಗಿ ತಿಳಿಯಲಿಕ್ಕೆ ಪ್ರಾಕೃತವಲ್ಲ, ಹಾಗೇ ಸಂಸ್ಕೃತ ಭಾಷೆಯಲ್ಲಿರುವ ಪ್ರಕರಣ ಗ್ರಂಥದ ಹಾಗೆ ಎತ್ತರ ಮಟ್ಟದ್ದಾಗಿರುವದು. ಆದ್ದರಿಂದ ಇದನ್ನು ಸ್ವತಃ ಓದಿ ತಿಳಿದುಕೊಳ್ಳಲು ಪ್ರಯತ್ನಿಸದೆ ತತ್ತ್ವಾಧಿಕಾರಿಗಳು ಬ್ರಹ್ಮನಿಷ್ಠ ಸದ್ಗುರುಗಳ ಮುಖಾರವಿಂದದಿಂದ ಶ್ರವಣ ಮಾಡಿ ತಿಳಿದುಕೊಂಡು ಧನ್ಯರಾಗಬೇಕೆಂಬ ಭಾವ.

ಇದನನುರಾಗದಿಂದೋದುವ ಜನರಿಗೆ।<br>
ಪದಪಿಂದೆ ಕೇಳ್ವಸಾಧಕರಿಗೆ॥<br>
ಮುದದಿಂದ ತಿಳುಪುವ ಬುಧರಿಗೆ ನಿಜಮುಕ್ತಿ।<br>
ಪದಸಿದ್ಧಿಪುದು ಶಂಭುಕೃಪೆಯಿಂದ ॥ 3 ॥

ಈ ಗ್ರಂಥವನ್ನು ಭಕ್ತಿಯಿಂದ ಓದುವ ಜನರಿಗೂ, ಪ್ರೀತಿಯಿಂದ ಶ್ರವಣ ಮಾಡುವ ಸಾಧಕರಿಗೂ, ಸಂತೋಷದಿಂದ ಇತರರಿಗೆ ತಿಳಿಸಿಕೊಡುವ ಜ್ಞಾನಿ ಗುರುಗಳಿಗೂ ಸಕಲದುಃಖ ನಿವೃತ್ತಿಪೂರ್ವಕ ಪರಮಾನಂದ ಪ್ರಾಪ್ತಿರೂಪ ಪರಮುಕ್ತಿಯು ಶ್ರೀ ಶಂಭುಲಿಂಗ ಪರಮಾತ್ಮನ ಕೃಪೆಯಿಂದ ಪ್ರಾಪ್ತವಾಗುವದು.

ಋತುಗಣನೆಯ ಸಂಧಿ ಸೂತ್ರ ವಿಪ್ಪತ್ತೆರ।<br>
ಡತಿಶಯಮೆನಿಸಿ ತೋರುವ ನೂರು ॥<br>
ನುತವೆತ್ತ ಪದವೆ ಪಂಚೈಸೀತಿ ಮಿಗಿಲಾದ।<br>
ಶತನವದಿಂದಮೀ ಕೃತಿಪೂರ್ಣ ॥ 4 ॥

ಈ ಗ್ರಂಥವು ಆರು ಸಂಧಿಗಳಿಂದ ಕೂಡಿದ್ದು ಒಂದುನೂರ ಇಪ್ಪತ್ತೆರಡು ಸೂತ್ರಗಳನ್ನು ಹೊಂದಿದೆ. ಇದರಲ್ಲಿ ಒಟ್ಟು ಒಂಭತ್ತುನೂರ ಎಂಭತ್ತೈದು ಪದಗಳಿವೆ. ಇವೆಲ್ಲವನ್ನು ಒಳಗೊಂಡು ಈ ಗ್ರಂಥವು ಪೂರ್ಣಗೊಂಡಿದೆ.

ಇದು ನಿಜಗುಣಯೋಗಿ ಮುದದಿಂದ ತಿಳಿಯ ಪೇ .<br>
ಳಿದ ಯಾಜ್ಞವಲ್ಕ್ಯ ಮೈತ್ರೇಯಿಯ ॥<br>
ವೊದವಿದ ಸಂವಾದದೊಳಗಾರನೆಯ ಸಂಧಿ।<br>
ಸದಮಳ ಪರಮಾನುಭವ ಬಂಧಿ ॥ 5 ॥

ಸತಿಪತಿಗಳಾದ ಯಾಜ್ಞವಲ್ಕ್ಯ ಮಹರ್ಷಿ ಮತ್ತು ಮೈತ್ರೇಯಿ ಇವರ ಸಂವಾದರೂಪದಲ್ಲಿ ಸರ್ವಜಗತ್ತಿಗೆ ಹಿತವಾಗುವ ಹಾಗೆ ಶ್ರೀ ನಿಜಗುಣ ಶಿವಯೋಗಿಗಳು ಜ್ಞಾನಬೋಧ ಮಾಡಿರುವರು. ಈ ಆರು ಸಂಧಿಗಳಲ್ಲಿ ವೇದ ವೇದಾಂತಗಳಲ್ಲಿ ಗುಪ್ತವಾಗಿ ಇರುವಂತಹ ಪರಬ್ರಹ್ಮವು ಸ್ವಾನುಭವಕ್ಕೆ ಬರುವ ಹಾಗೆ ಅಪರೋಕ್ಷವಾಗಿ ಬೋಧಿಸಿದ್ದಾರೆ.

– ಇತಿ ಪರಿಶಿಷ್ಟ ನಿರೂಪಣೆ –

ಗದ್ಯ– ಸ್ವಸ್ತಿಸಮಸ್ತಸುರವಿಸರ ಮುಕುಟಮಣಿಗಣ ಕಿರಣ ಪ್ರಚುರ
ಪ್ರವಾಹತರಂಗಿಣೀ ತಟವಿರಾಜಿತಪದ ರಾಜೀವಯುಗಳ
ಶ್ರೀ ಶಂಭು ಸತ್ಕೃಪಾಕಟಾಕ್ಷ ಸಾಂದ್ರಚಂದ್ರಿಕಾ ಸಂಕ್ರಾಂತ
ನಿರಸ್ತನಿಖಿಲ ಸಂಸಾರಶ್ರಮವಿಸ್ಫಾರಿತ ನಿಜಾನಂದಾ–
ಸ್ವಾದನಾಸಕ್ತಚಿತ್ತೋಪೇತ ನಿಜಗುಣಾಹ್ವಯ
ಶಿವಯೋಗಿನಾ ವಿರಚಿತಮಪ್ಪ ಪರಮಾನುಭವ
ಬೋಧೋನಾಮ ಪ್ರಕರಣ ಗ್ರಂಥ ಸಂಪೂರ್ಣ.

ಗದ್ಯಾನುವಾದ :– ಸ್ವಸ್ತಿ– ಸಕಲರಿಗೂ ಕಲ್ಯಾಣವಾಗಲಿ. ಸಮಸ್ತ ದೇವತೆಗಳ ಕಿರೀಟಗಳಲ್ಲಿ ಕೆತ್ತಲ್ಪಟ್ಟ ರತ್ನಗಳ ಪ್ರಕಾಶವು (ದೇವತೆಗಳು ಶ್ರೀ ಶಂಭುವಿನ ಪಾದಕ್ಕೆ ಬಾಗಿ ನಮಿಸುವಾಗ) ವಿಶೇಷವಾಗಿ ನದಿಯಂತೆ ಹರಿಯುತ್ತಿರುವ ಪ್ರವಾಹದ ಎರಡು ದಡದಲ್ಲಿ ಶೋಭಿಸುತ್ತಿರುವ, ಪಾದ ಕಮಲಗಳುಳ್ಳ, ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀ ಶ್ರೀ ಗುರು ಶಂಭುಲಿಂಗನು ದಟ್ಟವಾದ ಬೆಳದಿಂಗಳಂತೆ ಇರುವ ದಯಾದೃಷ್ಟಿಯಿಂದ ಸಂಸಾರದ ಸಕಲ ದುಃಖಗಳನ್ನು ಕಳೆಯಬಲ್ಲನು. ಶ್ರೀ ಗುರುವಿನ ಕೃಪಾಕಟಾಕ್ಷದಿಂದ ಸದಾಕಾಲ ಬೆಳಗುತ್ತಿರುವ ಶಿವಾನಂದವನ್ನು ಶುದ್ಧಮನದಿಂದ ಸವೆಯುವಲ್ಲಿ ತತ್ಪರನಾದ ಶ್ರೀ ನಿಜಗುಣನೆಂಬ ಹೆಸರುಳ್ಳ ಶಿವಯೋಗಿಯಿಂದ "ಪರಮಾನುಭವ ಬೋಧೆ" ಯೆಂಬ ಪ್ರಕರಣ ಗ್ರಂಥವು ವಿರಚಿತವಾಯಿತು. ಇದರ ಆರು ಸಂಧಿಗಳ ಗದ್ಯಾನುವಾದವು ಶ್ರೀ ನಿಜಗುಣ ಯತೀಶ್ವರರ ಕೃಪೆಯಿಂದ ಸಂಪೂರ್ಣವಾದುದು.

ಸಂಧಿ ಆರು ಸೂತ್ರ 22 ಕ್ಕೆ ಸಂಪೂರ್ಣ

ಅಂತು ಸಂಧಿ 6ಕ್ಕೆ ಸೂತ್ರ 122ಕ್ಕೆ ಪದ 985ಕ್ಕೆ ಸಂಪೂರ್ಣ —ಮಂಗಳಮಸ್ತು—

—ಸಮಾಪ್ತಿ—

## ಶ್ರೀ ನಿಜಗುಣ ಶಿವಯೋಗಿಗಳಿಂದ ವಿರಚಿತವಾದ ಪರಮಾನುಭವಬೋಧೆಯಲ್ಲಿ ಶ್ರೀಯಾಜ್ಞವಲ್ಕ್ಯ ಮಹರ್ಷಿಗಳು ಮೈತ್ರಾದೇವಿಗೆ ಸಂಭೋದಿಸಿದ ವಿಶೇಷ ಪದಗಳು

1. ವನಿತೆ. 2. ಪರಮವಿರಕ್ತೆ 3. ಸರಸಿಜದಳ ನೇತ್ರೆ 4. ಸತಿ. 5. ಇಂದುನಿಭಾಸ್ಯೆ. 6.ಸುದತಿ 7. ಕೃತಾರ್ಥೆ. 8. ಕೃತಕೃತ್ಯೆ. 9. ಧನ್ಯೆ. 10.ನಲ್ಲಳೆ. 11. ಕಾಂತೆ. 12.ರಾಕೇಂದುಮುಖಿ. 13.ಹೃದ್ಯೆ. 14. ಮಾನಿನಿ. 15. ಪ್ರಿಯತಮೆ. 16. ರಾಜೀವದಳನೇತ್ರೆ. 17. ಅಂಬುಜ ಲೋಚನೆ. 18.ನೀರೆ. 19. ಕಲ್ಪಭೂರುಹಪಲ್ಲವಾಧರೆ. 20. ಇನಿಯಳೆ. 21. ಮನದನ್ನೆ. 22. ಪೆರನೊಸಲಳೆ. 23. ಕಮಲಾಸ್ಯೆ. 24. ಗುಣವಂತೆ. 25. ರಾಗಾಧರಾಂಚಿತೆ. 26. ಆಯತನೇತ್ರೆ. 27. ತರುಣಿ.28. ತರಳಾಕ್ಷಿ. 29. ಲಲನೆ. 30. ಲಲಿತಾಂಗಿ. 31. ಯುವತಿ. 32. ಮತಿವಂತೆ. 33. ಮಡದಿ. 34. ಭಾಮಿನಿ. 35. ಜಾಣೆ. 36. ಅಂಗನೆ. 37. ಸಸಿನೆ. 38. ಬಿಸಜಾಕ್ಷಿ. 39. ಅಂಚೆನಡೆಯಳೆ. 40. ಭಾವಕಿ. 41. ಮಂದಗಮನೆ. 42. ನಿರ್ಮಳೆ. 43.

ಸಾರಸಗಂಧಿ. 44. ಅಕುಟಿಲೆ. 45. ವನಜಾನನೆ. 46. ವನಜಾಸ್ಯೆ. 47. ರಾಜೀವನೇತ್ರೆ. 48.ಭಾವೆ. 49. ಅಂಬುಜವಕ್ತ್ರೆ 50. ಅಕಲಂಕಶಶಮುಖಿ. 51. ಪಲ್ಲವಾಧರೆ. 52. ಅಕಲಂಕಮತಿ. 53.ಅರುಣಾಬ್ಜಗಂಧಿ. 54. ಸುಮತಿ. 55. ಜಾಯೆ. 56. ಅಬಲೆ. 57. ಮಾನಿನಿರನ್ನೆ 58. ಇಂದುಸನ್ನಿಭವಕ್ತ್ರೆ 59.ಕಾಮಿನಿ 60. ಅಸಿಯಳೆ 61. ತಳಿರಡಿಯಳೆ 62. ತೋರಮುಡಿಯಳೆ 63. ಕೋಮಲಾಂಗಿ 64. ಅನಘ ಮೈತ್ರೇಯಿ 65. ವಿನಯ ವಾರಿಧಿ 66. ಹೆಂಗಳರಸಿ 67. ಕೋವಿದೆ 68.ಮತ್ತಗಜಯಾನೆ 69. ನಲ್ಲಳೆ 70. ಮಕರ ಧ್ವಜಾಸ್ತ್ರಾನುಗುಣನೇತ್ರೆ 71. ಸೋರ್ಮುಡಿಯಬಲೆ 72. ಸಾಧ್ವಿ. 73. ಕಳಹಂಸಗಮನೆ 74. ಮೃಗಮದಗಂಧಿ 75. ಅಂಬುಜಾಯತನೇತ್ರೆ 76. ಗುಣನಿಧಿ 77. ಮುನಿವಧುಜನ ಮುಖ್ಯೆ 78. ಮದಗಜಗಮನೆ 79. ಚಂದನಗಂಧಿ 80. ಶಶಿಮುಖಿ 81. ಚೆಲ್ಲಕಂಗಳೆ 82. ತರಳಾಕ್ಷಿ 83. ವನರುಹಲೋಚನೆ 84. ಮೆಲ್ಲಡಿಯಳೆ 85. ನಳಿನಾಕ್ಷಿ 86. ಗುಣಮಣಿಭೂಷಣೆ 87. ಕುವಲಯದಳನೇತ್ರೆ 88. ಘಟಕುಚೆ 89. ಕಾದಲೆ (ಪ್ರಿಯಳೆ) 90. ಬಡನಡುವಿನ ಬಾಲೆ 91. ಭಾವಕಿ 92. ಧನ್ಯಮೈತ್ರೇಯಿ 93. ಮೃದುಪಲ್ಲವಪಾಣಿ . 94.ಕಾಂಚನಘಟಕುಚೆ 95. ಮೃಗನೇತ್ರೆ 96. ಉತ್ತಮೆ 97. ಆನಂದಮಯಗಾತ್ರೆ 98.ನಳಿನಾಕ್ಷಿ. 99. ಸುಮತಿ 100. ಸರಸಿಜಾನನೆ 101. ಘನಕುಚೆ 102. ಶ್ರೀಗುಣಯುಕ್ತೆ 103. ಗುರುಪಯೋಧರೆ 104. ವನಜಸನ್ನಿಭವಕ್ತ್ರೆ 105. ನಿರ್ಮಳಮತಿವಂತೆ 106. ಸೋಮಸನ್ನಿಭಮುಖಿ 107. ಆನಂದ ಶರನಿಧಿ 108. ಸುಂದರಗಾತ್ರೆ 109. ಧನ್ಯೆ 110. ಸನ್ಮುನಿವನಿತಾಕದಂಬವಂದಿತಪಾದೆ 111. ಅಂಬುಜಾನನೆ 112.ಚದುರೆ. 114. ತೋರ ಹಾರದುರೋಜದಿಂದೆಸೆವಳೆ 115. ಬಿಸರುಹದಳನೇತ್ರೆ 116. ಸಂಶಯಮಾದತನುಮಧ್ಯೆ 117. ಚೆಲ್ವಮಡದಿ 118. ಮಾನಿನಿರನ್ನೆ 119. ತೋರಸೋರ್ಮುಡಿಯಳೆ. 120. ಆತ್ಮಸುಖವಾರ್ಧಿ 121. ಪರಮಾನಂದ ರಸಪೂರ್ಣ ಹೃದಯಳೆ. 122. ಕುಡಿತಗಣ್ಣಬಲೆ. 123. ನೆರೆದಿಂಗಳೆಣೆಮೊಗದಳೆ. 124.ಮುನಿವನಿತಾಜನವಂದಿತೆ. 125. ಪರಿಪೂತಮಾನಸೆ. 126. ವಿನಯವಿನತೆ. 127. ಮನ್ಮನದನ್ನೆ 128. ಘನನಿತಂಬಿನಿ. 129. ಕೈರವಾಯತನೇತ್ರೆ. 130. ನಿರ್ಮಲಾಂಗಿ. 131. ಸರಸಿಜಮುಖಿ. 132. ಆನಂದನಿಧಿ. 133. ನೂಪುರಾಂಚಿತಪಾದೆ. 134. ಸಾರಹೃದಯಳೆ. 135. ನಗೆಮೊಗದರಸಿ. 136. ಕಂಜದಳಾಂಬಕಿ. 137. ಮಿಸುಣಿ ವಣ್ಣದ ಗಾತ್ರೆ. 138. ಶುದ್ಧಮತಿವಂತೆ. 139. ಪೊಂಜಳಮೈಯಳೆ. 140. ಪುಸಿತನುಮಧ್ಯೆ. 141. ಕಾಮಿನಿ. 142. ಅಮಳೇಂದುವದನೆ. 143. ಧರ್ಮಸಂಪೂರ್ಣ ಮಾನಸೆ. 144. ಪುಣ್ಯಮಯಗಾತ್ರೆ. 145. ಆತ್ಮಕೋವಿದೆ 146. ಪರಮುಗುರುಳೆ ನೀರೆ. 147. ಚಂಡಮತಿ. 148. ಮೃಗನೇತ್ರೆ. 149. ವಾರಿಜವದನೆ. 150. ಅಂಬುಜನೇತ್ರೆ. 151. ಎನ್ನಹರಣವೆ ಮೈತ್ರೇಯಿ. 152. ಕಮಲಾಕ್ಷಿ. 153. ಜಲಜಾಕ್ಷಿ 154. ಇಂದುವದನೆ. 155.ಗುಣನಿಧಿ. 156. ಉತ್ಪಲನೇತ್ರೆ. 157. ನಿರ್ಮಲಗಾತ್ರೆ. 158. ಸುಗುಣಸನ್ಮಣಿಗುಣಸೂತ್ರಿ. 159.ಸುಖವನ ಚೈತ್ರೆ. 160. ಸದ್ಗುಣ ನಿಧಿ. 161. ಸಾರಸಮುಖಿ. 162. ಇಂದುವದನೆ. 163. ಬಿಸಜಾಸ್ಯೆ.164. ಬಿಸಜದಳಾಯತ ಲೋಚನೆ 165. ಭಾಮಿನಿ. 166. ನಾರಿ. 167. ನೀರಜನೇತ್ರೆ. 168. ರಾಜನಿಭವಕ್ತ್ರೆ 169. ನಿರ್ಮಳೇಂದುಮಂಡಲಮುಖಿ. 170.ಲೋಲ ಲೋಚನೆ. 171. ಮೆಲ್ಲಡಿಯಳೆ. 172. ರಾಗಾಧರಾಂಚಿತೆ. 173. ಅಂದುಗೆಯಡಿಯ ಚಂದನಗಂಧಿ. 174. ಇಂದು ಸನ್ನಿಭಮುಖಿ. 175. ಅಮಳೇಂದುವದನೆ. 176. ಸುದತಿರನ್ನಳೆ. 177.ಭಾವಕಿ.

## ಸ್ವಾಮಿ ಸಹಜಾನಂದರು (ಊರ್ಫ್ ಆರ್. ಬಿ. ಕಂಠಿ)
### ಇವರು ಬರೆದ ಗ್ರಂಥಗಳು

1. (ಅ). ''ಜ್ಞಾನಸಿಂಧು'' ಮೂಲಕಾವ್ಯ, ಸಂಪಾದಕರು ಡಾ।। ಗುರುಲಿಂಗ ಕಾಪಸೆ ಹಾಗೂ ಪ್ರೊ. ಆರ್. ಬಿ. ಕಂಠಿ.
   (ಬ). ಅನುವಾದ :– ಅನುಭವ ತೆರೆಗಳಿಂದ ಭೋರ್ಗರೆವ ''ಜ್ಞಾನಸಿಂಧು'' (5ನೇ ಆವೃತ್ತಿ)
   ಮೂಲ :– ಶ್ರೀ ಚಿದಾನಂದಾವಧೂತರು (ಷಟ್ಪದಿ).
2. ಜ್ಞಾನ ಪ್ರತಿಪಾದನ ಸ್ಥಲ (4ನೇ ಆವೃತ್ತಿ)
   ಮೂಲ :– ಶ್ರೀ ನಿಜಗುಣ ಶಿವಯೋಗಿಗಳು. (ಹಾಡುಗಬ್ಬ)
3. ಆನಂದ ದರ್ಶನ. ಗುರುದೇವ ಶ್ರೀ ಆತ್ಮಾನಂದ ಸ್ವಾಮಿಗಳ 'ನಾನವೆ ನಮಃ।, ಸುಖಾಯನಮಃ। ಈ ಮಂತ್ರಗಳ ವಿವರಣೆ.
4. ಶ್ರೀ ಸದ್ಗುರು ಪರಮಾನಂದಸ್ವಾಮಿಗಳ ಬೋಧಾಮೃತ.
5. ಶರಣಸುಧೆ. (ಅಜಾತವಾದ ಮೇಲೆ ಬೆಳಕು ಬೀರಿದ)
6. ಪುಣ್ಯ ಪ್ರಸಂಗಗಳು — ಪ್ರತಿಗಳು ಮುಗಿದಿವ
7. ಸತ್ಯದರ್ಶನ — ಪ್ರತಿಗಳು ಮುಗಿದಿವೆ
8. ಶ್ರೀ ರಮಣ ಉವಾಚ
9. ಶ್ರೀ ರಮಣತತ್ತ್ವ ರಹಸ್ಯ ಕುರಿತು– ಲಾವಣಿ ಪದಗಳು.
   ಮೂಲ :– ಡಾ।। ಬಳವಂತರಾವ ದೀಕ್ಷಿತ.
10. ಪ. ಪೂಜ್ಯ ಶ್ರೀ ಗಿರಿಯಪ್ಪಗೌಡ್ರು ಬ. ಓದುಗೌಡರ್. ಜ್ಞಾನಾನಂದಾಶ್ರಮ, ಹುಲಕೋಟಿ, ಇವರ ಆತ್ಮ ಚರಿತ್ರೆ.
11. ಆಂಗ್ಲಭಾಷೆಯಲ್ಲಿ Nijaguna's- Song of the Transcendent
    ಮೂಲ :– ನಿಜಗುಣರ ''ಪರಮಾರ್ಥಗೀತೆ''.
12. ''ಪ್ರಾಯೋಗಿಕ ರಸಾಯನಶಾಸ್ತ್ರ''. (ಕರ್ನಾಟಕ ಕಾಲೇಜ ಶಿಕ್ಷಕರಿದ್ದಾಗ ಬರೆದದ್ದು)

## ಶ್ರೀ ವಾಯ್. ಎಮ್. ಗಾಣಿಗೇರ (ಗುರುಪಾದರಜ)
### ಇವರ ಕೃತಿಗಳು

1. ಸರ್ವಜ್ಞನ ಆಧ್ಯಾತ್ಮಿಕ ವಚನಗಳ ಸಾರ ಸಂಗ್ರಹ.
2. ಕಾಯಕಯೋಗಿ ಶ್ರೀ ಶಿವಾಯ ನಮಃ ಶರಣರು– ಚರಿತ್ರೆ ಮತ್ತು ಬೋಧಾಮೃತ.
3. ನೀನು ಇರುವಂತೆ ಇರು (1ನೇ ಭಾಗ) ಮೂಲ :–**Be As You Are,** By David Godman.

**ಬೆಲೆ : 80-00**